ಮೇ
೧೯೬೬

# ಕಸ್ತೂರಿ



## ವಸಂತ ಸಂಚಿಕೆ

# ಬುಟ್ಟಿ ತುಂಬ ಸಸಾರಜನಕ ಮೀನು

ಕೊರೊನೆಟ್ ಕ್ಯಾನಿಂಗ್ ಕಂಪೆನಿಯು ಅತ್ಯಧಿಕ ಸಸಾರಜನಕ ಮೌಲ್ಯದ ಉತ್ತಮ ಜಾತಿಯ ಮೀನುಗಳನ್ನೆ ಜಾಗ್ರತೆಯಿಂದಲೆ ಆಯುತ್ತದೆ. ಭೂತಾಯಿ ಮತ್ತು ಬಂಗುಡೆ ಜಾತಿಯ ಮೀನುಗಳು ಹೆಚ್ಚಿನ ಸಸಾರಜನಕಗಳಾಗಿವೆ. ಇವನ್ನು ಜಾಗ್ರತೆಯಿಂದ ಹಿಡಿದು ನಿಮಗೆ ಎಲ್ಲ ಋತುಮಾನದಲ್ಲೂ ರುಚಿಯಾದ ಹಾಗೂ ಪೌಷ್ಟಿಕವಾದುದನ್ನೆ ಒದಗಿಸಲಿಕ್ಕಾಗಿ ತೈಲ ಮತ್ತು ಖಾದ್ಯವ್ಯಂಜನದೊಂದಿಗೆ ರುಚಿಯಾಗಿ ಪ್ಯಾಕ್ ಮಾಡಲಾಗಿದೆ. ಎಂತಲೆ ಡಬ್ಬಿಯಲ್ಲಿರಿಸಿದ ಸಮುದ್ರ ಖಾದ್ಯದ ಕುರಿತು ನಿಮಗೆ ಬೇಕೆನಿಸಿದಾಗ "ಲಂಗರು ಗುರುತು" ನೆನಪಿರಲಿ.








**ಕೊರೊನೆಟ್ ಕ್ಯಾನಿಂಗ್ ಕಂಪೆನಿ**

ಮಲ್ಪೆ, ದಕ್ಷಿಣ ಕನ್ನಡ

SANS/CC/K/1

# ಕಸ್ತೂರಿ

ಪ್ರಕಟನೆ :
ಪ್ರತಿ ತಿಂಗಳ ೧ನೇ ದಿನಾಂಕ

ಸಂಪಾದಕರು :
ರಂಗನಾಥ ದಿವಾಕರ

ಸಹಸಂಪಾದಕರು :
ಪಿ. ವಿ. ಆಚಾರ್ಯ

ಪ್ರಕಾಶಕರು :
ಲೋಕ ಶಿಕ್ಷಣ ಟ್ರಸ್ಟ್-ಹುಬ್ಬಳ್ಳಿ

ಕಚೇರಿ :
ಕಸ್ತೂರಿ ಕಾರ್ಯಾಲಯ, ಹುಬ್ಬಳ್ಳಿ

ಕಲೆ :
ಕೆ. ಬಿ. ಕುಲಕರ್ಣಿ

ಮುದ್ರಣ :
ಸಂಯುಕ್ತ ಕರ್ನಾಟಕ ಪ್ರೆಸ್
ಹುಬ್ಬಳ್ಳಿ

ಮುಖಚಿತ್ರ:
ಸಹ್ಯಾದ್ರಿಯ ಗೋಪವಧು
ಶ್ರೀ ಎ. ಎ. ಆಲಮೇಲಕರ
ಮುಂಬಯಿ

ಚಂದಾ ದರ :

| | | |
|---|---|---|
| ೩ ವರ್ಷ | (ಅಂಚೆ ಸೇರಿ) | ರೂ. ೨೮-೦೦ |
| ೨ ವರ್ಷ | ,, | ರೂ. ೨೦-೦೦ |
| ೧ ವರ್ಷ | ,, | ರೂ. ೧೧-೦೦ |
| ಅರ್ಧವರ್ಷ | ,, | ರೂ. ೬-೦೦ |

KASTURI May 1969.


## ಲೇಖಕರಿಗೆ ಸೂಚನೆ

"ಕಸ್ತೂರಿ"ಯಲ್ಲಿ ಪ್ರಕಟನೆಗಾಗಿ ಲೇಖಕ ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವುದು. ಕಾಗದದ ಒಂದು ಮಗ್ಗಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು, ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖನಗಳಾದರೆ ಅವುಗಳ ಮೂಲ ಲೇಖಕ ಹಾಗೂ ಪ್ರಕಾಶಕರ ಹೆಸರು, ವಿಳಾಸಗಳನ್ನೂ ಒದಗಿಸಬೇಕು. ಮೂಲ ಲೇಖಕರ ಅನುಮತಿ ಪಡೆದೇ ಲೇಖನಗಳನ್ನು ಕಳಿಸಿದರೆ ಅವುಗಳ ಮೇಲೆ ಬೇಗನೆ ನಿರ್ಣಯಕ್ಕೆ ಬರಲು ಸುಲಭವಾಗುವುದು. ಅಸ್ವೀಕೃತ ಲೇಖನಗಳು ತಿರುಗಿ ಬೇಕಾಗಿದ್ದರೆ ಲೇಖನಗಳ ಸಂಗಡವೇ ತಿರುಗಿ ಕಳಿಸಲು ಅವಶ್ಯ ಬೇಕಾಗುವಷ್ಟು ಅಂಚೆ ತಿಕೀಟುಗಳನ್ನೂ ಕಳಿಸಿರಬೇಕು. "ಇದುವೇ ಜೀವ ಇದು ಜೀವನ" ಮೊದಲಾದ ಚುಟುಕುಗಳನ್ನು ತಿರುಗಿ ಕಳಿಸಲು ಅಥವಾ ಆ ಬಗ್ಗೆ ಪತ್ರವ್ಯವಹಾರ ಮಾಡಲು ಸಾಧ್ಯವಿಲ್ಲ. ಲೇಖನ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವುದು. ಲೇಖಕರು ತಮ್ಮ ಲೇಖನಗಳ ನಕಲುಪ್ರತಿಗಳನ್ನು ಕಾಯ್ದಿಟ್ಟುಕೊಳ್ಳುವುದೊಳಿತು. ಲೇಖನಗಳು ಅಕಸ್ಮಾತ್ತಾಗಿ ಕಳೆದುಹೋದರೆ ಸಂಪಾದಕರು ಹೊಣೆಗಾರರಲ್ಲ.

ಲೇಖನ ಪ್ರಕಟವಾದರೆ, "ಕಸ್ತೂರಿ"ಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ, ಪ್ರತಿಫಲವನ್ನು ಆದಷ್ಟು ಬೇಗ ಕೊಡಲಾಗುವುದು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ.

---

## ಚಂದಾದಾರರಿಗೆ ಸೂಚನೆ

ಪ್ರತಿ ತಿಂಗಳು "ಕಸ್ತೂರಿ" ಆಯಾ ತಿಂಗಳ ೧ನೇ ದಿನಾಂಕದೊಳಗೆ ಪ್ರಕಟವಾಗುವುದು. ಅದು ಚಂದಾದಾರರಿಗೆ ಆಯಾ ತಿಂಗಳ ೫ನೇ ದಿನಾಂಕದೊಳಗೆ ತಲುಪುವುದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲು ಕಚೇರಿಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರವ್ಯವಹಾರ ಮಾಡುವಾಗ್ಗೆ ತಮ್ಮ ಚಂದಾ ನಂಬರ ಕಾಣಿಸಲು ಮರೆಯಬಾರದು.

# ಈ ಸಂಚಿಕೆಯಲ್ಲಿ

# ಸೌಂದರ್ಯದ ಪರಿಪೂರ್ಣ ಆರೈಕೆ –

ಎಂದೆಂದೂ...

ಎಲ್ಲೆಲ್ಲೂ...

ಲೆಕ್ಟೋ ಕೆಲಮೈನನ್ನು 'ವೇನಿಶಿಂಗ್ ಕ್ರೀಮ್'ನ್ನಾಗಿ ಉಪಯೋಗಿಸಿರಿ ಕಾರಣ 'ವೇನಿಶಿಂಗ್ ಕ್ರೀಮ್'ನ ಮುಖ್ಯ ಕಾರ್ಯ—ಚರ್ಮವನ್ನು ನಯವಾಗಿರಿಸುವುದು ಹಾಗೂ ಬಿಸಿಲು, ಗಾಳಿ, ಧೂಳುಗಳ ಪರಿಣಾಮಗಳಿಂದ ರಕ್ಷಿಸುವುದು—ಇವನ್ನು ಲೆಕ್ಟೋ ಕೆಲಮೈನ್ ಪರಿಪೂರ್ಣವಾಗಿ ಪೂರೈಸುವುದು.

ಇಷ್ಟಲ್ಲದೆ ಕ್ರೂಕ್ಸ್ ಲೆಕ್ಟೋ ಕೆಲಮೈನ್ ನಿಮ್ಮ ಚರ್ಮವನ್ನು ಸ್ವಚ್ಛ ಮಾಡಿ, ತೇವಮಯವಾಗಿರಿಸಿ, ನಯ ಮತ್ತು ಮೃದುವಾಗಿಟ್ಟು ಆರೈಕೆ ಮಾಡಬಲ್ಲುದು.

ಯಾವುದೇ ಸಮಯದಲ್ಲಿಯೂ ಅಲಂಕಾರ ಸಾಧನವಾದ ಲೆಕ್ಟೋ ಕೆಲಮೈನನ್ನು 'ಫೌಂಡೇಶನ್' ನಂತೆಯೂ ಉಪಯೋಗಿಸಬಹುದು.

ಲೆಕ್ಟೋ ಕೆಲಮೈನ್ ಉಪಯೋಗಿಸಿದಾಗ ಇತರ ಮೇಕ್-ಅಪ್‌ನ ಅಗತ್ಯವೇ ಇಲ್ಲ.

ಕ್ರೂಕ್ಸ್
## ಲ್ಯಾಕ್ಟೋ-ಕ್ಯಾಲಮೈನ್

ಕುಂದಿಲ್ಲದ ಸೌಂದರ್ಯಕ್ಕೆ




ಕ್ರೂಕ್ಸ್ ಇಂಟರ್‌ಫ್ರಾನ್ ಲಿಮಿಟೆಡ್,
ಬೊಂಬಾಯಿ-25.

CIL. BKM

ಈಗ್ಗೆ ಚಿಕ್ಕ ಆಕಾರದಲ್ಲಿಯೂ ದೊರೆಯುತ್ತದೆ.

# ಕಸ್ತೂರಿ

ವಸಂತ ಸಂಚಿಕೆ

ಸಂಚಿಕೆ : ೯ ಕಸ್ತೂರಿ, ಮೇ ೧೯೬೯ ವರ್ಷ : ೧೪


# ಒಳಿತನ್ನೇ ಕಾಣು

ಪೂರ್ಣನೆಂಬ ಶಿಷ್ಯ ಭಗವಾನ್ ಬುದ್ಧನ ಬಳಿ ಬಂದು ಸೀಮಾಪ್ರಾಂತದಲ್ಲಿ ಧರ್ಮ ಪ್ರಸಾರಮಾಡಲು ಅನುಮತಿಯನ್ನೀಯ ಬೇಕೆಂದು ಕೇಳಿಕೊಂಡ. ಆಗ ಬುದ್ಧ "ಅಲ್ಲಿಯ ಜನ ಅತ್ಯಂತ ಕಠೋರರೂ ಕ್ರೂರಿಗಳೂ ಆಗಿದ್ದಾರೆ. ಹೀಗಿದ್ದರೂ ಕೂಡ ನೀನು ಅಲ್ಲಿ ಹೋಗಲಿಚ್ಛಿಸುವೆಯಾ ?" ಎಂದು ಕೇಳಿದ

"ಹೌದು ಮಹಾಪ್ರಭು, ಆದರೂ ನನಗೆ ಕಪಾಳಕ್ಕೆ ಅವರು ಹೊಡೆಯಲಿಕ್ಕಿಲ್ಲವಷ್ಟೇ. ಅಂದ ಮೇಲೆ ಅವರು ಕೆಟ್ಟವರಲ್ಲ ಅವರೆಲ್ಲರೂ ಒಳ್ಳೆಯ ಜನರು ಎಂದೇ ಬಗೆಯುವೆ."

"ಆದರೆ ಅವರು ಕಪಾಳಕ್ಕೆ ಹೊಡೆಯುವುದಿಲ್ಲವೆಂದು ಹೇಗೆ ಗೊತ್ತು? ಒಂದು ವೇಳೆ ಅವರು ಹೊಡೆಯತೊಡಗಿದರೆ ?"

"ಅವರು ಕೇವಲ ಕೈಗಳಿಂದ ಹೊಡೆಯುತ್ತಾರಷ್ಟೇ. ಬಡಿಗೆಯಿಂದ ಹೊಡೆಯುವುದಕ್ಕಿಂತ ಅದು ಎಷ್ಟೋ ವಾಸಿ. ಆದ್ದರಿಂದ ನಾನು ಆ ಜನರನ್ನು ಸಜ್ಜನರೆಂದೇ ಬಗೆಯುವೆ."

"ಆದರೆ ಅವರು ದಂಡ ಪ್ರಹಾರ ಮಾಡತೊಡಗಿದರೆ ?"

"ಶಸ್ತ್ರಪ್ರಹಾರಕ್ಕಿಂತ ಅದು ಎಷ್ಟೋ ಮೇಲು. ಆದ್ದರಿಂದ ನಾನು ಅವರನ್ನು ಸಜ್ಜನರೆಂದೇ ಬಗೆಯುವೆ."

"ಶಸ್ತ್ರಪ್ರಹಾರವನ್ನೇ ಮಾಡಿದರೆ ?

"ನನ್ನನ್ನು ವಧಿಸುವುದಕ್ಕಿಂತ ಅದು ಎಷ್ಟೋ ಪಾಲು ವಾಸಿ. ಆದ್ದರಿಂದ ಆಗಲೂ ನಾನು ಅವರನ್ನು ಸಜ್ಜನರೆಂದೇ ತಿಳಿಯುತ್ತೇನೆ."

"ಆದರೆ ಅವರು ನಿನ್ನನ್ನು ಕೊಲ್ಲುವುದಿಲ್ಲವೆಂದು ಹೇಗೆ ಹೇಳುವಿ ? ಒಂದುವೇಳೆ ಅವರು ನಿನ್ನನ್ನು ಕೊಂದೇಹಾಕಿದರೆ ?'

"ಮಹಾಪ್ರಭು, ಈ ಜಗತ್ತಿನಲ್ಲಿ ಬದುಕಲೇ ಬೇಕೆನಿಸುವಷ್ಟು ಆದದ್ದೇನುಂಟು ? ಹೀಗಿರುತ್ತಾ ಸೀಮಾಪ್ರಾಂತದ ಜನ ನನ್ನನ್ನು ಕೊಂದುಹಾಕಿದರೆ ಒಳ್ಳೆಯದನ್ನೇ ಮಾಡಿದಂತಾಯಿತು. ಆದ್ದರಿಂದ ಅವರು ಸಜ್ಜನರೇ."

ಆಗ ಭಗವಾನ್ ಬುದ್ಧ ಪ್ರಸನ್ನನಾಗಿ ಹೇಳಿದ: "ಪೂರ್ಣ, ಎಂಥ ಪರಿಸ್ಥಿತಿಯಲ್ಲಿಯೂ ಪರರನ್ನು ದೂಷಿಸದವನೇ ನಿಜವಾದ ಸಾಧು. ನೀನು ಮನಬಂದಲ್ಲಿಗೆ ಹೋಗಿ ಧರ್ಮಪ್ರಸಾರ ಮಾಡಬಹುದು. ಖಂಡಿತವಾಗಿಯೂ ಧರ್ಮ ನಿನ್ನನ್ನು ರಕ್ಷಿಸುವುದು." *

# ನೆಹರೂ ಮನೆತನಕ್ಕೆ ಮೊದಲ ಸೆರೆಮನೆ ವಾರಂಟ್ ಬಂತು

ಕೃಷ್ಣಾ ನೆಹರು-ಹಥೀಸಿಂಗರ We Nehrus ನಿಂದ

ಗೆಳೆಯರೆಲ್ಲ ಸೆರೆಮನೆಗೆ ಹೋಗುತ್ತಿರಲಾಗಿ ನನ್ನ ತಂದೆ ಮತ್ತು ಭಾಯಿಯ (ಜವಾಹರ ಲಾಲ)ರನ್ನು ಹಿಡಿಯಲು ಪೋಲೀಸರು ಯಾವಾಗ ಬೇಕಾದರೂ ಬರುವ ನಿರೀಕ್ಷೆ ಇತ್ತು. ಯುಕ್ತ ಪ್ರಾಂತದಲ್ಲಿ ಕಾಂಗ್ರೆಸ್ ಸ್ವಯಂಸೇವಕ ಸಂಸ್ಥೆ ಅಕ್ರಮವೆಂದು ಸಾರಲ್ಪಟ್ಟಿತ್ತು. ತಂದೆಯವರು ಕಾಂಗ್ರೆಸ್ ಕಾರ್ಯಸಮಿತಿಯ ಸದಸ್ಯರಾಗಿದ್ದರೂ ಸ್ವಯಂಸೇವಕ ಸಂಸ್ಥೆಗೆ ಸೇರಿರಲಿಲ್ಲ. ಆದರೆ ಅವರು ಕೂಡಲೆ ಅದರಲ್ಲಿ ಸೇರಿದರು. ಅವರ ಹೆಸರನ್ನು ಮೊದಲನೆ ಸ್ಥಾನದಲ್ಲಿ ಬರೆಯಲಾಯಿತು.

ಡಿಸೆಂಬರ್ ೬, ೧೯೨೧ ರಂದು ಪೋಲೀಸರು ಸಹಸಾ ಆನಂದಭವನಕ್ಕೆ ಮುತ್ತಿಗೆ ಹಾಕಿದರು. ಗಾಬರಿಯಾದ ಸೇವಕನೊಬ್ಬ ತಂದೆಯವರಿದ್ದಲ್ಲಿ ಬಂದು ಪೋಲೀಸ್ ಅಧಿಕಾರಿಯೊಬ್ಬನು ಅವರನ್ನು ನೋಡಬಯಸುವುದಾಗಿ ತಿಳಿಸಿದ. ಪ್ರವೇಶ ದೊರೆತೊಡನೆ ಅಧಿಕಾರಿ ಸಲಾಂ ಹೊಡೆದು "ಆದಾಬ್ ಅರಜ್" ಎಂದ. ತಂದೆಯವರು ಪ್ರತಿಯಾಗಿ ಸಲಾಮನ್ನೂ ಶುಭಾಶಯವನ್ನೂ ಸಲ್ಲಿಸಿದರು. ಅಧಿಕಾರಿ ಮನೆ ಜಪ್ತಿ-ವಾರಂಟು ತೋರಿಸಿದ. ತಂದೆಯವರು ನಸುನಗುತ್ತ, "ಓಹೋ, ಬೇಕಾದ ಹಾಗೆ ಜಪ್ತಿ ಮಾಡಿ ಆದರೆ ಸರಿಯಾಗಿ ಜಪ್ತಿ ಮಾಡುವುದಕ್ಕೆ ಆರು ತಿಂಗಳು ಹಿಡಿದೀತು," ಎಂದರು.

ಅಧಿಕಾರಿ ಸಂಕೋಚದಿಂದ ಇನ್ನೂ ಹಿಂದೆ ಮುಂದೆ ನೋಡುತ್ತ ನಿಂತಿದ್ದ. ಅವನ ತೊಂದರೆಯನ್ನು ಗಮನಿಸಿ ತಂದೆಯವರು ಅವನ ಸಂಕೋಚ ನಿವಾರಣೆ ಮಾಡುತ್ತ, "ನನ್ನನ್ನು ಬಂಧಿಸುವುದಕ್ಕೂ ವಾರಂಟು ತಂದಿದ್ದೀರಾ?" ಎಂದು ವಿಚಾರಿಸಿದರು.

"ಹೌದು ಸರ್" ಎಂದು ಬಡಪಾಯಿ ವಾರಂಟನ್ನು ಹೊರತೆಗೆದ.

"ನಾನು ತಯಾರಾಗಿದ್ದೇನೆ. ಮೊದಲೇ ಯಾಕೆ ಎರಡೂ ವಾರಂಟು ತೋರಿಸಲಿಲ್ಲ?" ಎಂದು ತಂದೆಯವರು ಕೇಳಿದರು.

ಆಗಲೇ ಮಿತ್ರರೂ ಬೆಂಬಲಿಗರೂ ಆವಾರದಲ್ಲಿ ಸಂದಣಿಸುತ್ತಿದ್ದರು. ಪೋಲೀಸರ ಪೇಚಾಟ ಹೆಚ್ಚುತ್ತಿತ್ತು. ಭಾಯಿ ಕೂಡ ಅಷ್ಟರಲ್ಲಿ ಕಚೇರಿಯಿಂದ ಮನೆಗೆ ಧಾವಿಸಿದ್ದರು. ಅವರನ್ನೂ ಕೂಡಲೇ ಬಂಧಿಸಿದರು. ತಾಯಿ, ಕಮಲಾ ಮತ್ತು ನಾನು ತಂದೆಯವರಿಗೂ ಅಣ್ಣನಿಗೂ ವಿದಾಯ ಹೇಳಿದೆವು. ಮೆಟ್ಟಲಿಳಿದು ಅವರು ಪೋಲೀಸರು ತಂದಿದ್ದ ಕಾರಿನಲ್ಲಿ ಪ್ರವೇಶಿಸಿದರು. ತಾಯಿಯ ಪ್ರತಿಕ್ರಿಯೆ ಘನವಾಗಿತ್ತು. ಬಹುಶಃ ಅವಳು ತುಸುವೆ ನಡುಗಿರಬೇಕು; ಆದರೆ ಅವಳ ಕಣ್ಣುಗಳಲ್ಲಿ ನೀರಿರಲಿಲ್ಲ. ಅವುಗಳಲ್ಲಿ ಹೆಮ್ಮೆ ಉಕ್ಕುತ್ತಿತ್ತು. ತರಳೆಯಾದ ಕಮಲಾ ಕಣ್ಣೀರನ್ನು ತಡೆಹಿಡಿಯಲು ಹೋರಾಡುತ್ತಿದ್ದುದು ಸುವ್ಯಕ್ತವಾಗಿಯೆ ಇತ್ತು. ನನಗೋ ಕೋಪ ಉಕ್ಕುತ್ತಿತ್ತು. ಹೀಗೆ ಅವರು ಸೆರೆಮನೆಗೆ ಹೋದರು- ಮೊಟ್ಟಮೊದಲ ಬಾರಿ, ಆದ್ದರಿಂದ ಅತ್ಯಂತ ನಾಟಕೀಯವಾಗಿ. *

# ಪ್ರಾಚ್ಯವಸ್ತು ಸಂಗ್ರಹ

ಸವೆದ ಶಿಲೆಯೆದೆಯಾಳೆತ್ತರಕೆ
ಪುಡಿಪುಡಿಯಾಗಿ ರಾಶಿಗೊಂಡಿದೆ
ಬೆಳಗುಬ್ಬೆಗಿನ ಸಾಕ್ಷಿಮಣ್ಣಿನ ಜೇಡಿ
ಯುಗಾಂತರದಾಚಿನಿಂದಲೂ
ತುಡಿದು ಕಾಡುತ್ತಿರುವ
ಎರಡು ಪಕ್ಷದ ನೆನಹು ಅನುಭವ-
ಗಳನ್ನೆಲ್ಲ ಕಲಸಿ ಸೋಸಿ
ತನ್ನಲ್ಲೆ ತುಂಬಿ ಹೆಪ್ಪುಗಟ್ಟಿರುವ
ಮಣ್ಣ ಕಣಕಣದ ಸೂಕ್ಷ್ಮದರ್ಶಕ
ಫೋಟೋ ತೆಗೆದು
ಈ ಕೋಣೆಯಲ್ಲೆಲ್ಲ ತೂಗಾಡಿಸಬೇಕು.

ಕಂದುಮಣ್ಣಿನ ಪದರು ಪದರುಗಳಲ್ಲಿ
ಆಹಾರ ಲವಣ ಹೀರಿ ಸಾಗಿರುವ
ಸಂಚಾರಿ ನಾವೆಗಳ ಹೊತ್ತು
ಹರಿಯುತ್ತಿರುವ
ಕೆನ್ನೀರ ನಾಳಜಾಲರಿ ಸರಿಸಿ
ಹಾಲುಗಲ್ಲಿನ ಮೋರೆ ಕಾಣಬೇಕು.

ಒಂದು ಎರಡಾಗಿ, ಎರಡು ನಾಲ್ಕಾಗಿ
ಹೀಗೇ ಲಿಂಗವಿಲ್ಲದೆ ಬೆಳೆದ
ಪುರಾತನ ತಲೆಮಾರನ್ನೆಣಿಸಿ
ನಂತರ
ನನ್ನಲ್ಲೆ ಮಲಗಿರುವ
ವಾಲ್ಮೀಕಿ ವ್ಯಾಸ ಮುನಿವರೇಣ್ಯರ
ಮೂಳೆಮಾಂಸಗಳನ್ನಗೆದು
ಗೆದ್ದಲ ಕೊಡವಿ,
ಈ ಕಾಲದ ವಾರ್ನಿಷ್ (ಅಂಟಿದರೆ)
ಹಚ್ಚಿ,
ಅಥವಾ ಹಾಗೇ ಸಾಲಾಗಿ ಇಟ್ಟು
ಪ್ರಾಚ್ಯವಸ್ತು ಸಂಗ್ರಹಾಲಯದ
ಬೋರ್ಡು ಇಳಿಬಿಟ್ಟರೆ

ಹೇಗೆಂದು ಯೋಚಿಸುವ ನನ್ನ
ವಿಕಾರಕ್ಕೊಂದು
ಉತ್ತರ ಕಾಣಬೇಕು.

ಹೊಸಬತ್ತಿ ಹೊಸೆದು ಹಣತೆ ಹಚ್ಚುವ
ನಾಳೆ ಯಜಮಾನನಿಗೆ
ನಾ ನುಂಗಿಕೊಂಡಿರುವ ವಿಶ್ವರೂಪ
ಕಾಣಬೇಕು.

— ಡಾ. ಎಚ್. ಸಿ. ವಿಷ್ಣುಮೂರ್ತಿ



# ಆದರಿಂದ ನಿವೃತ್ತಿ ಸಾಧ್ಯವೇ ?

## ಇವು ನಾವು ಕೇಳಿದ ಪ್ರಶ್ನೆಗಳು

೧. ಸ್ವಾತಂತ್ರ್ಯದ ನಂತರ ನಮ್ಮ ದೇಶದಲ್ಲಿ ಎಲ್ಲ ರಂಗಗಳಲ್ಲಿ ಜಾತೀಯತೆ ಮೊದಲಿಗಿಂತ ಹೆಚ್ಚು ವ್ಯಾಪಕವಾಗಿದೆಯೆಂದು ಹೇಳಲಾಗುತ್ತಿದೆ. ಇದು ನಿಜವೇ ? ಅಥವಾ ಅತಿಶಯೋಕ್ತಿಯೇ ? ನಿಮ್ಮ ಅಭಿಪ್ರಾಯವೇನು ?

೨. ೧ನೇ ಪ್ರಶ್ನೆಗೆ ನಿಮ್ಮ ಉತ್ತರ 'ನಿಜ' ಎಂಬುದಾದರೆ ಇದಕ್ಕೆ ಏನು ಕಾರಣವೆಂದು ನಿಮ್ಮ ಅಭಿಪ್ರಾಯ ? ಅತಿಶಯೋಕ್ತಿಯೆಂದಾದರೆ ಅನೇಕ ಜನರಲ್ಲಿ ಈ ಅತಿಶಯೋಕ್ತಿಪೂರ್ಣ ನಂಬಿಕೆ ಏಕೆ ಉಂಟಾಗಿದೆ ?

೩. ಜಾತೀಯತೆಯನ್ನು ಬೆಳಸಿದವರು ವಿದೇಶಿ ಆಳರಸರೆಂಬ ಹೇಳಿಕೆ ನಿಮಗೆ ಒಪ್ಪಿಗೆಯೇ ಅಥವಾ ಜಾತಿಗಳು ಈ ದೇಶದಲ್ಲಿ ಇರುವುದರಿಂದ ಜಾತೀಯತೆ ಅನಿವಾರ್ಯವೆಂದು ಕೆಲವರು ಹೇಳುವುದು ಸರಿಯೇ ?

೪. ಹಿಂದೆ ನಮ್ಮ ದೇಶದಲ್ಲಿ ಜಾತಿಗಳ ಕಟ್ಟುಗಳು ಈಗಿಗಿಂತ ಬಿಗಿಯಾಗಿದ್ದರೂ ಜಾತೀಯ ಭಾವನೆ, ಪಕ್ಷಪಾತ ವಿಶೇಷವಾಗಿದ್ದಿಲ್ಲ; ಈಗ ಜಾತಿ ಕಟ್ಟುಗಳ ಪಾಲನೆ ತೀರ ಕಡಿಮೆಯಾಗಿದ್ದರೂ ಜಾತಿಭಾವನೆ ಹೆಚ್ಚಾಗಿದೆ. ಇದಕ್ಕೆ ಕಾರಣ ವೇನು ?

೫. ನಮ್ಮ ರಾಜ್ಯ ಸಂವಿಧಾನದಲ್ಲಿ ಜಾತಿ. ಮತಾತೀತವಾದ ಆದರ್ಶವನ್ನು ಸ್ವೀಕರಿಸಿದ್ದರೂ ವ್ಯವಹಾರದಲ್ಲಿ ತದ್ವಿರುದ್ಧ ಪ್ರವೃತ್ತಿ ಕಂಡುಬರಲು ಕಾರಣವೇನು ?

೬. ಸಾರ್ವತ್ರಿಕ ಮತಾಧಿಕಾರವುಳ್ಳ ಪ್ರಜಾಸತ್ತೆಯ ಪದ್ಧತಿ ಜಾತೀಯತೆಗೆ ಪೋಷಕವಾಗಿದೆ ಎಂಬ ಹೇಳಿಕೆಯಲ್ಲಿ ತಥ್ಯವಿದೆಯೆ ?

೭. ಸರಕಾರಗಳೂ ರಾಜಕೀಯ ಪಕ್ಷಗಳೂ ಜಾತೀಯತೆಯ ಹೆಚ್ಚಳಕ್ಕೆ ಎಷ್ಟು ಮಟ್ಟಿಗೆ ಹೊಣೆಯಾಗಿವೆ ?

೮. ಈ ದೇಶದಲ್ಲಿ ಜಾತಿಭೇದಗಳನ್ನು ನಿವಾರಿಸುವುದು ಸಮಸ್ಯೆಗೆ ಪರಿಹಾರವಾಗಬಲ್ಲದೇ ? ಒಂದು ವೇಳೆ ಅದು ಉತ್ತಮ ಪರಿಹಾರವಾದರೂ ಅದು ಸಾಧ್ಯವೆಂದು ಸದ್ಯದ ಲಕ್ಷಣಗಳಿಂದ ನಿಮಗೆ ನಿಸುತ್ತಿದೆಯೇ? ಈ ದೃಷ್ಟಿಯಿಂದ ಈಗ ಎಲ್ಲ ಕಡೆ ಉತ್ಕರ್ಷ ಹೊಂದುತ್ತಿರುವ ಧಾರ್ಮಿಕ, ಜಾತೀಯ ಸಂಸ್ಥೆಗಳು ಜಾತಿಭೇದ ನಿವಾರಣೆಗೆ ಆತಂಕವೆನಿಸುವುದಿಲ್ಲವೇ ?

೯. ಜಾತಿ ಭೇದಗಳಿದ್ದರೂ ನಮ್ಮ-ನಮ್ಮ ಧರ್ಮ ಜಾತಿಗಳನ್ನು ಖಾಸಗಿಯಾಗಿಟ್ಟುಕೊಂಡು ರಾಜಕೀಯ, ಆರ್ಥಿಕ, ಶೈಕ್ಷಣಿಕ ರಂಗಗಳಲ್ಲಿ ಜಾತಿ ಪ್ರಭಾವ ಬೀರದಂತೆ ಮಾಡಲು ಸಾಧ್ಯವೇ ? ಸಾಧ್ಯವಿದ್ದರೆ ಇದನ್ನು ವ್ಯವಹಾರಕ್ಕೆ ತರಲು ನಿಮ್ಮ ಸೂಚನೆಗಳೇನು ?

೧೦ ಜಾತೀಯತೆ ಇದೇ ಪ್ರಕಾರ ಮುಂದುವರಿದರೆ ಅದು ದೇಶದ ಭದ್ರತೆಗೆ ಗಂಡಾಂತರ ತರಬಹುದೆಂದು ನಿಮಗನಿಸುತ್ತದೆಯೆ ?

೧೧. ದೇಶದ ಆರ್ಥಿಕ ಸ್ಥಿತಿಗತಿ ಸುಧಾರಿಸಿ ಉದ್ಯೋಗಾವಕಾಶಗಳು ಧಾರಾಳವಾದರೆ ಜಾತೀಯತೆ ತಂತಾನೇ ಇಳಿಮುಖವಾದೀತೆಂದು ನಿಮಗೆ ಅನಿಸುತ್ತದೆಯೆ ?

೧೨. ಜಾತೀಯತೆಯಿಂದಲೇ ತಾವು ತಮ್ಮ ಯೋಗ್ಯತೆಗೆ ತಕ್ಕಂಥ ಅವಕಾಶಗಳನ್ನು ಪಡೆಯುತ್ತಿಲ್ಲವೆಂದು ಹತಾಶರಾದ ಬುದ್ಧಿಶಾಲಿ ತರುಣರಿಗೆ ನಿಮ್ಮ ಉಪದೇಶವೇನು ?

೧೩. ಜಾತೀಯತೆಯ ನಿವಾರಣೆಗೆ ನಿಮ್ಮ ಹತ್ತಿರ ಏನಾದರೂ ನಿಶ್ಚಿತವಾದ ಯೋಜನೆ ಇದ್ದರೆ ಸಂಕ್ಷೇಪವಾಗಿ ಹೇಳುವಿರಾ ?

ಯತೆ ಒಂದು. ಜೀವನದ ಯಾವ ರಂಗವೂ ಅದರಿಂದ ನಿರ್ಲಿಪ್ತವಾಗಿ ಉಳಿದಿಲ್ಲ. ಅದರ ಕೇಡುಗಳನ್ನು ಎಲ್ಲರೂ ಬಲ್ಲರು. ಪ್ರತಿಯೊಂದು ಜಾತಿಯೂ ಅನ್ಯಜಾತಿಗಳ ಜಾತೀಯತೆಯಿಂದ ತಾನು ಕಷ್ಟಕ್ಕೀಡಾದ ಪಕ್ಷವೆಂದೇ ಭಾವಿಸುತ್ತದೆ. ಒಟ್ಟು ಪರಿಣಾಮವೆಂದರೆ ದೇಶದ ಪ್ರಗತಿಯಲ್ಲಿ ಅಮೂಲ್ಯ ಸೇವೆ ಸಲ್ಲಿಸಬಹುದಾದ ಪ್ರತಿಭಾಶಾಲಿಗಳನೇಕರು ತಮ್ಮ ಯೋಗ್ಯತೆಗೆ ತಕ್ಕ ಸ್ಥಾನ ದೊರೆಯದೆ ನಿರಾಶರಾಗಿದ್ದಾರೆ. ಇಂಥ ಪೀಡಿತ ಪ್ರತಿಭೆ ನಾಳೆ ಕ್ರಾಂತಿಯ ಕಿಡಿಯನ್ನು ಕಾರಿ ದೇಶದಲ್ಲಿ ಉತ್ಪಾತವೆಬ್ಬಿಸಬಹುದು. ಜಾತೀಯತೆಯನ್ನು ಕುರಿತು ಜೀವನದ ವಿವಿಧ ರಂಗಗಳಲ್ಲಿ ಹೆಸರಾಂತ ಮಹನೀಯರಿಗೆ ನಾವೊಂದು ಪ್ರಶ್ನಮಾಲಿಕೆ ಕಳಿಸಿ ಅವರಿಂದ ಬಂದ ಉತ್ತರಗಳನ್ನು ಇಲ್ಲಿ ಪ್ರಕಟಿಸಿದ್ದೇವೆ.

# ಇಲ್ಲಿವೆ ಉತ್ತರಗಳು

## ಪ್ರಶ್ನೆಗಳ ಕ್ರಮಾಂಕದಲ್ಲಿ



**ವೀ. ಸೀ.**

ವೀ. ಸಿ. ಎಂದು ಹೆಸರಾಂತ ಪ್ರೊ. ವಿ. ಸೀತಾರಾಮಯ್ಯನವರು ಕನ್ನಡದ ಹಿರಿಯ ಕವಿಗಳು, ಲೇಖಕರು, ಅರ್ಥಶಾಸ್ತ್ರಿಗಳು, ಸಾಮಾಜಿಕ ಚಿಂತಕರು.

೧. ಹಾಗೆ ಕಾಣುತ್ತದೆ; ಅತಿಶಯೋಕ್ತಿಯೇನಲ್ಲ. ರೀತಿ ವಿಧಾನಗಳನು ನೋಡಿದರೂ, ಪ್ರಯೋಜನಗಳ ವಿತರಣೆಯನ್ನು ನೋಡಿದರೂ ಇದು ಅತಿಶಯೋಕ್ತಿ ಎಂದು ಕಾಣುವುದಿಲ್ಲ. ಒಂದೊಂದು ರಾಜ್ಯದಲ್ಲಿ ಒಂದೊಂದು ಜಾತಿಗೆ ಮೇಲ್ಗೈಯ್ ಎಂಬಂತೆ.

೨. ನಮ್ಮ ಸಮಾಜ ಬಹುಮಟ್ಟಿಗೆ ವರ್ಣಾಶ್ರಮದ ಅಸಮ ವ್ಯವಸ್ಥೆಗೆ ಏರ್ಪಟ್ಟದ್ದು.

ಒಂದು ಜಾತಿ ಮೇಲು ಒಂದು ಜಾತಿ ಕೀಳು ಎಂಬ ಅಸಮತೆ ಸಾಮಾಜಿಕವಾಗಿ ಮೊದಲಿನಿಂದಲೂ ನಡೆದುಕೊಂಡು ಬಂದಿದೆ. ಮೇಲು ಕೀಳು ಎಂಬುದು ಕರ್ಮಫಲ ಎಂಬುದು ನಂಬಿಕೆ. ಇದು ಸಾಮಾಜಿಕ ಅಸಮತೆ. ಒಂದು ಕಾಲದಲ್ಲಿ ನಾಲ್ಕು ವರ್ಣಗಳು ಇದ್ದು ಅವುಗಳಲ್ಲಿ ದ್ವಿಜ ಎಂದು ಒಂದು ವರ್ಗ. ಅವರಿಗೆ ಉಪಯನಯನ ಇದ್ದು ಮೊದಲ ಮೂರು ವರದವರಿಗೆ ಇದು ಸಂಸ್ಕಾರ ಕರ್ಮವಾಯಿತು. ಇನ್ನೊಂದು ವರ್ಗ ದ್ವಿಜ ವರ್ಗಕ್ಕೆ ಸೇವೆ ಸಲ್ಲಿಸಬೇಕೆಂಬುದು ರೂಢಿ. ಈ ನಾಲ್ಕನ್ನೂ ಹಿಂದೂ ಸಮಾಜ ಎನ್ನುವದು ಪದ್ಧತಿ. ಹಿಂದು ಎಂಬ ಮಾತು ಬಹುಮಟ್ಟಿಗೆ ಸಾವಿರ ವರ್ಷದಿಂದ ಈಚೆಗೆ ಮಾತ್ರ ಬಳಕೆಯಲ್ಲಿದೆ ಇದಕ್ಕೆ ಹೊರಪಟ್ಟ ಇನ್ನೊಂದು ವರ್ಗಕ್ಕೆ ಹಿಂದೂ ಸಮಾಜದಲ್ಲಿ ಗಾಂಧೀಜಿಯವರ ಕಾಲಕ್ಕೆ ಮುಂಚೆ ಸ್ಥಾನ ಮಾನ ಇರಲಿಲ್ಲ. ಅವರನ್ನು ಇನ್ನೂ ಕೀಳಾಗಿ ಕಾಣುವದು ರೂಢಿಯಾಗಿತ್ತು. ಲೋಕದ ಭಾಗ್ಯದಿಂದ ಅದು ಮೇಲ್ಪಡುತ್ತಿದೆ.

ನಾಡಿನ ಜೀವನ ವ್ಯವಸ್ಥೆಯಲ್ಲಿ ಅವರವರಿಗೆ

(ಪ್ರಶ್ನಾವಳಿ ನೋಡಿರಿ- ಪುಟ ೪)

(ವೀ. ಸೀ. ಮುಂದುವರಿದದ್ದು)

ಇಂತಿಂಥದೇ ಕೆಲಸ ವೃತ್ತಿ ಎಂದು ಇದ್ದುದರಿಂದಲೂ, ಹಳ್ಳಿಗಳಲ್ಲಿ ಒಬ್ಬರ ಮೇಲೆ ಒಬ್ಬರು ಅವಲಂಬಿಸಿಕೊಂಡಿದ್ದುದರಿಂದಲೂ ವಿರಸವಿಲ್ಲದೆ ಜೀವನ ನಡೆಯುತ್ತಿತ್ತು. ಒಂದು ಬಗೆಯ ಶ್ರಮವಿಭಾಗ ಏರ್ಪಟ್ಟಿತ್ತು. ಅವರಲ್ಲಿ ಬೆರಕೆ ಎಂಬುದು ಆಗುತ್ತಿರಲಿಲ್ಲ. ಈಚೆಗೆ ಎಲ್ಲವೂ ಕಲಸಿಕೊಂಡಿದೆ. ಸ್ಪೃಶ್ಯ ಅಸ್ಪೃಶ್ಯ ಎಂಬ ಭೇದ ಸಲ್ಲದು— ತಪ್ಪು ಎಂದು ಇಂದು ನಿರ್ಣಯವಾಗಿದೆ. ಒಟ್ಟು ಜನತೆಯಲ್ಲಿ ರಾಜ್ಯಾಂಗದ ದೃಷ್ಟಿಯಿಂದ ಸಮಾನ ಎಂಬ ಎಣಿಕೆ ಕಟ್ಟಿನಿಂತಾಗ ಜಾತಿಗಳ ಅಸಮತೆಯು ಅಯುಕ್ತವೆಂದಾಯಿತು. ಅಸಮತೆಯೇ ಲಕ್ಷಣವಾಗಿದ್ದ ಜಾತಿ ಪದ್ಧತಿಗೂ ಎಲ್ಲ ರಾಷ್ಟ್ರಕರೂ ೧೦೦ಕ್ಕೆ ೧೦೦ ಭಾಗ ರಾಷ್ಟ್ರಕ ದೃಷ್ಟಿಯಿಂದ ಸಮ ಎನ್ನುವ ಪ್ರಜಾಸತ್ತಾತ್ಮಕತೆಗೂ ಹೊಂದಿಕೆ ಕಷ್ಟ. ಸದ್ಯಕ್ಕೆ ಕ್ರೈಸ್ತ, ಮುಸ್ಲಿಮ, ಸಿಖ್, ಪಾರ್ಸಿಗಳನ್ನು ಇಲ್ಲಿ ಎಣಿಸಿಲ್ಲ. ಇವೂ ಒಂದೊಂದು ಬಗೆಯ ಜಾತಿಗಳೇ.

೩. ಬೆಳಸಿದವರು ವಿದೇಶಿ ಅರಸರೇ ಅಲ್ಲ. ಇದ್ದುದನ್ನು ಅವರು ಬಳಸಿಕೊಂಡರು. ಅವು ನಡೆಯುವ ವರೆಗೂ ಅನಿವಾರ್ಯವೇ. ಫಲಾಫಲಗಳು ನೇರವಾಗಿ ಅಲ್ಲದಿದ್ದರೆ ಪರೋಕ್ಷವಾಗಿ ಉಂಟಾಗುತ್ತವೆ. ಸದ್ಯಃ ಇದು ಪ್ರಯೋಜನಕಾಂಡ ವಿಶೇಷವಾಗಿ.

೪. ಮೇಲಿನ ಎರಡನೆಯ ಪ್ರಶ್ನೆಗೆ ಕೊಟ್ಟ ಉತ್ತರದಲ್ಲಿ ಇದಕ್ಕೆ ಅರ್ಧ ಉತ್ತರವಿದೆ. ಆಯಾ ಜಾತಿಗೆ ಆಯಾ ಕಸಬು, ಮರ್ಯಾದೆ ಎಂಬುದು ನಡೆದುಕೊಂಡು ಬಂದುದರಿಂದ ಸಮಾಜದಲ್ಲಿ ಅದು ವಿರಸ ಪ್ರಕರಣವಾಗದೆ ಇತ್ತು.

ಸಮಾಜ ವ್ಯವಸ್ಥೆ ಒಂದು ಅಂಗ. ದೇವರು ಮಾಡಿದ್ದು, ಇದನ್ನು ಮೀರುವದು ಪಾಪ ಪಾಪಕ್ಕೆ ಶಿಕ್ಷೆ ನರಕ ಎಂದು ಇದುದರಿಂದ ಇವುಗಳಲ್ಲಿ ನಂಬಿಕೆ ಇದ್ದ ಸಮಾಜ ಇದನ್ನು ನಡಸಿಕೊಂಡು ಬಂದಿತ್ತು. ಜನ ಈ ವ್ಯವಸ್ಥೆಯನ್ನು ಒಪ್ಪಿತ್ತು. ರಾಜರು, ಮಠಗಳು ಇವಕ್ಕೆ ರಕ್ಷಕರೂ ಪಾಲಕರೂ ಆಗಿದ್ದರು.

೫. ರಾಜ್ಯಾಂಗದ ಪ್ರಕಾರ ಶಾಸನಗಳಲ್ಲಿ ನಿರ್ಣಯ ಮಾಡಿ ಬಿಟ್ಟರೆ ಸುಧಾರಣೆಯಾಗುತ್ತದೆ ಎಂಬುದು ಭ್ರಾಂತಿ. ಸಾವಿರಾರು ವರ್ಷದಿಂದ ನಡೆದು ಬಂದ ಆಚಾರ ಬೇಗ ಮಾರ್ಪಡದು. ಮಡಿ ಎಂಬ ವ್ಯವಸ್ಥೆ ಇರುವ ಬ್ರಾಹ್ಮಣರ ಮನೆಗಳಲ್ಲಿ ಮನೆಯ ಮಕ್ಕಳನ್ನಾಗಲೀ ಆರು ಮಕ್ಕಳನ್ನು ಹೆತ್ತ ಮನೆಯ ಸೊಸೆಯನ್ನಾಗಲಿ ಅಡಿಗೆ ಮನೆಯ- ಒಳಕ್ಕೆ ಹೋಗಲಿ, ಹತ್ತಿರ ಬರಬಿಡುವದಿಲ್ಲ. ನಡೆವ ನೆಲ ಮೈಲಿಗೆ ಎಂದು ಸ್ನಾನ ಮಾಡಿದ ಮೇಲೆ ಒದ್ದೆ ಬಟ್ಟೆ ಉಟ್ಟುಕೊಂಡು ತಾವು ಹಿಡಿದ ಪಂಚಪಾತ್ರೆಯ ನೀರನ್ನು ಚೆಲ್ಲುತ್ತ ಅವರ ಮೇಲೆ ಮಾತ್ರ ನಡೆದು ಹೋಗುತ್ತಾರೆ. ಇಂಥದನ್ನು ಯಾವ ಶಾಸನ ತಪ್ಪಿಸುತ್ತದೆ? ಸಮಾಜದ ಆಚಾರ ಇದನ್ನು ಒಪ್ಪಬೇಕು. ಒಪ್ಪಿ ನಡೆಸುವವರೆಗೆ; ಸಮಾಜದ ಮುಂದಾಳು ಇದಕ್ಕೆ ಸ್ವೀಕಾರ ಕೊಡುವವರೆಗೆ. ತಪಸ್ಸಿನಿಂದ ಆ ಪದವಿ ಗಳಿಸಿದ್ದರೂ ವಸಿಷ್ಠರು ಒಪ್ಪಿದ ಹೊರತು ವಿಶ್ವಾಮಿತ್ರನಿಗೆ ಬ್ರಹ್ಮರ್ಷಿತ್ವ ಬರಲಿಲ್ಲ. ಕಾನ್ವೋಕೇಷನ್ನಿನಲ್ಲಿ ಡಿಗ್ರಿ ತೆಗೆದುಕೊಳ್ಳುವ ವರೆಗೂ ಬಿ. ಎ., ಎಂ. ಎ. ಎಂದು ಪರೀಕ್ಷೆ ಪಾಸು ಮಾಡಿದವರು ಹಾಕಿಕೊಳ್ಳುವಂತಿಲ್ಲ, ಹಾಗೆ. ಯೋಗ್ಯತೆ ಒಂದು, ಸ್ವೀಕಾರ ಒಂದು. ಎಲ್ಲಿಯೂ Recognition ಎಂಬುದು ಮುಖ್ಯ ಅಂಗ.

ಸಂವಿಧಾನಕ್ಕೆ ಸಂಬಂಧಿಸಿದ ನಡವಳಿಕೆಯೆಲ್ಲ ವ್ಯಾವಹಾರಿಕ. ಲೌಕಿಕ ಪ್ರಯೋಜನಗಳಲ್ಲದ್ದಕ್ಕೆ ಸಂವಿಧಾನದ ಸಂಬಂಧ ಉಂಟಾಗದು. ಪ್ರಯೋಜನಗಳಿಗೂ ಅಧಿಕಾರಗಳಿಗೂ ಮಾತ್ರ ಹೊಂದುವ ವಿಧಿನಿಷೇಧಗಳು ಸಂವಿಧಾನದಲ್ಲಿ ನಿರ್ಣಯವಾಗುತ್ತವೆ.

೬. ಅಭ್ಯರ್ಥಿಯಾದವನು ತನಗೆ ತಿಳಿದ, ತನ್ನಲ್ಲಿ ವಿಶ್ವಾಸವಿರುವವರ ಅಭಿಮತವನ್ನು

ತಾನೆ ಬೇಡುತ್ತಾನೆ? ಇದಕ್ಕೆ ಸ್ನೇಹಿತರ ವರ್ಗವೂ ಸೇರುತ್ತದೆ. ಆದರೆ ಇವನಿಗೆ ತಿಳಿದ ಜನ ಹೆಚ್ಚಾಗಿ ಇವನ ಜಾತಿಯವರು, ಕೋಮಿನವರು. ತಮ್ಮ ಜನರನ್ನು ತಮ್ಮ ಪ್ರತಿನಿಧಿಗಳಾಗಿ ಬಯಸುವುದು ಸಹಜ. ಅಲ್ಲಿ ಒಂದು ವಿಶ್ವಾಸದ, ಸಂಬಂಧದ ಕಟ್ಟು ಇರುತ್ತದೆ. ಇತರರೂ ತಮ್ಮ ಅಭಿಮತವನ್ನು ಕೋರಬಹುದು. ಜಾತಿಯ ಅಭಿಮಾನ ಹೆಚ್ಚು ನೇರ, ಸಹಜ. 'ಎಂಬಡವಾಳ್' ಎಂಬ ಮಾತನು ಕೇಳಿರಬಹುದು. ಸರಕಾರಗಳು ರಾಜಕೀಯ ಪಕ್ಷಗಳು ಜಾತೀಯತೆಯಿಂದ ಪ್ರಯೋಜನ ಪಡೆದು ಮೇಲೆ ಬಂದುದರಿಂದ, ರಚಿತವಾಗುವದರಿಂದ ಇವುಗಳಿಗೆ ಹೆಚ್ಚು ಪಕ್ಷಪಾತ ತೋರಿಸಬೇಕಾಗುತ್ತದೆ. ದಾಕ್ಷಿಣ್ಯ, ಹಂಗು, ನಿರೀಕ್ಷೆ—ಎಲ್ಲ ಇಂಥಲ್ಲಿ ಕಾರಣ. ಮುಂದಿನ ಸಲ ಚುನಾವಣೆಯಲ್ಲಿ ಇಂಥವರ ನೆರವೇ ಪುನಃ ಇವಕೆ ಬೇಕಾಗುವದಲ್ಲವೇ? ಹಣ ಕೊಡುವ ಯಜಮಾನನು ತಾನೆ ಇಂಥ ರಾಗ ಕೀರ್ತನೆ ಬಾರಿಸಬೇಕೆಂದು ಓಲಗದವರನ್ನು ಕೇಳುವವನು?

೮. ಜಾತಿ ಜನ್ಮತಾರಕ ಮಾರ್ಗವಲ್ಲ ಇಂದು. ಈಗ ಅದು ಒಂದು ಸಾಧನ, ಪುರುಷಾರ್ಥವಲ್ಲ. ಇದರ ನಿವಾರಣೆ ಒಂದು ಕಡೆ ಜಾತಿಯವರಿಗೆ ಬೇಕಾಗಿಲ್ಲ. ಹೊರಗಡೆಯವರಿಂದ ಆಗುವುದಿಲ್ಲ. ಆ ಅಭಿಮಾನಕ್ಕಿಂತ ದೊಡ್ಡದಾದ ಹೆಚ್ಚಿನ ಹಿತ ಇದೆ ಎಂದು ಅವರಿಗೆ ಕಂಡರೆ ಆಗ ಅದು ನಿವಾರಣೆಯಾಗುತ್ತದೆ. ಧಾರ್ಮಿಕ ಜಾತಿಯ ಸಂಸ್ಥೆಗಳು ಪೂರ್ವಾಚಾರಬದ್ಧವಾದವು. ಶ್ರುತಿ ಸ್ಮೃತಿ ಹೇಳಿದಂತೆ ನಡೆಯುವಂಥವು. ಅವುಗಳನ್ನು ಮೀರಿದರೆ ಪೀಠ ಬಿಟ್ಟು ಹೋಗಬೇಕಾಗುತ್ತದೆ. ಅವುಗಳ ಪಾಲನೆಗೇ ಏರ್ಪಟ್ಟವು ಅಂಥ ಸಂಸ್ಥೆಗಳು. ಇವೊತ್ತು ಪುರಿ ಸ್ವಾಮಿಗಳ ಮಾತು, ನಡತೆ ಕೇಳಿದವರಿಗೆ ಪೂರ್ವಾಚಾರ ಸಡಿಲುವದು ಎಷ್ಟು ಕಷ್ಟವೆಂಬುದು ಗೊತ್ತಾಗುತ್ತದೆ. ಅವರು ಬಾಯಲ್ಲಿ ಹೇಳಿದರು. ಉಳಿದ ಅನೇಕರು ಹೇಳುವದಿಲ್ಲ- ಅಷ್ಟೇ ವ್ಯತ್ಯಾಸ. ಬ್ರಾಹ್ಮಣರು ಮಾತ್ರವಲ್ಲ, ಅಸ್ಪೃಶ್ಯತೆಯನ್ನು ನಡೆಸುತ್ತಿರುವದು. ಹಲವೇಳೆ ಅತ್ಯುತ್ತಮ ವರ್ಣದಲ್ಲಿ ಹುಟ್ಟಿದವರೇ ಇಂಥ ಅನ್ಯಾಯಗಳು ನಿವಾರಣೆಯಾಗಬೇಕೆಂದು ಎಷ್ಟೋ ಸಲ ಬೋಧಿಸಿ ಸುಧಾರಣೆಯಾಗಬೇಕೆಂದು ತಿಳಿಸಿದ್ದಾರೆ. ಅದಕ್ಕೆ ದುಡಿದಿದ್ದಾರೆ. ವಚನಕಾರರೂ ದಾಸರೂ ಸಾಕ್ಷಿ. ರಾಮಾನುಜಾಚಾರ್ಯರ ಉದಾಹರಣೆಯನ್ನೇ ನೋಡಬಹುದು. ಸಮಾಜದವರೆಲ್ಲ ಸೌಹಾರ್ದ ಮನೋಭಾವವನ್ನು ತೋರಿಸಬೇಕು. ಅದಕ್ಕೆ ಹೆಚ್ಚು ಕಾಲ ಹಿಡಿಯುತ್ತದೆ. ಸಬಕೋ ಸನ್ಮತಿ ದೇ ಭಗವಾನ್ ಎಂದರು ಗಾಂಧೀಜಿ. ದೇವರೇ ಇದಕ್ಕೆ ನೆರವಾಗಬೇಕೇನೋ!

೯. ಬೇಷಕ್ ಸಾಧ್ಯ; ಸಾಧಿಸಬೇಕು ಮಾತ್ರ. ಒಂದು ಮಾತು ಹೇಳುವದಿದೆ: ಧರ್ಮ ಎಂಬುದು ಒಂದು. ಧರ್ಮ ಪಂಥಗಳು ನೂರಾರು ಎಂಬುದುಂಟು. ನಿಜ. ಆದರೆ ಆ ಒಂದು ಧರ್ಮವನ್ನು ನಡೆಸುವವರು, ಅರಿತವರು, ಎಷ್ಟು ಜನ?

೧೦. ಖಂಡಿತ. ಭದ್ರತೆ ಒಂದೇ ಅಲ್ಲ, ಇದರ ಸಮಸ್ತ ಏಳಿಗೆಗೂ ಅಡ್ಡಿಯಾಗುತ್ತದೆ. ದ್ವೇಷಾಸೂಯೆಗಳು ಹುಟ್ಟಿ ಜನವರ್ಗದಲ್ಲಿ ನಾಶಬುದ್ಧಿ ಪ್ರಚೋದಿತವಾಗುತ್ತದೆ.

೧೧. 'ತಂತಾನೆ' ಎನ್ನುವ ಮಾತಿಗಿಂತ ಕ್ರಮಕ್ರಮವಾಗಿ ಎನ್ನುವುದು ಮೇಲು. ಆರ್ಥಿಕ, ರಾಜಕೀಯ ದೃಷ್ಟಿಯಿಂದ ದೇಶದ ಸುರಕ್ಷಣೆ ದೃಷ್ಟಿಯಿಂದ ಅಂತಾರಾಷ್ಟ್ರೀಯ ವ್ಯವಹಾರ ದೃಷ್ಟಿಯಿಂದ ಜನಗಳ ಗಮನ ಬೇರೆ. ಜಾತಿ ಹಿತಕ್ಕಿಂತ ಸಾರ್ವಜನಿಕ ಹಿತ ಎಂಬುದರ ಕಡೆ ಹೋಗುವದಾದರೆ ಅದು ಔದಾರ್ಯಗಳನ್ನೂ ಹೊಂದಿಕೆಗಳನ್ನೂ ಬೆಳಸಬಲ್ಲದು.

ರೈಲು, ಬಸ್ಸು, ಹೊಟೆಲ್, ಸಿನಿಮಾ ಇವುಗಳ ಬಳಕೆಯುಳ್ಳವರು ಜಾತಿ ಮರ್ಯಾದೆಗಳನ್ನು ಇಂದು ಹೇಗೆ ಲಕ್ಷಿಸುವದಿಲ್ಲವೊ ಹಾಗೆ ಅಭ್ಯಾಸವಾಗಿ ಹೋಗುತ್ತದೆ. 'ಸರ್ವಂ ಕಾಲಮಪೇಕ್ಷತೇ'

೧೨. ಜಾತೀಯ ಯೋಗ್ಯ ಬುದ್ಧಿವಂತರು ಸರಕಾರಗಳ ಹುದ್ದೆಗಳಿಗೆ ಹಾತೊರೆಯುವದನ್ನು ಕೆಲವು ಕಾಲ ಬಿಟ್ಟು ಸ್ವತಂತ್ರ ಸಂಸ್ಥೆಗ

(ಪ್ರಶ್ನಾವಳಿ ನೋಡಿರಿ-ಪುಟ ೪)

(ವೀ. ಸೀ. ಮುಂದುವರಿದದ್ದು)

ಳನ್ನು ನಡಸಿ ಉನ್ನತಿ ಪಡೆಯುವದು ಶಕ್ಯ. ಅದಕ್ಕೆ ತಕ್ಕ ಸಂಘಶಕ್ತಿ, ಒಬ್ಬರಲ್ಲೊಬ್ಬರು ಬೆರೆಯುವ ಮನಸ್ಸು ಬೆಳಸಿಕೊಂಡು ಬಂದರಾದೀತು. ಇದು ಅಶಕ್ಯವೇನಲ್ಲ. ಆದರೆ ಬುದ್ಧಿವಂತರು ಸುಲಭವಾಗಿ ಒಟ್ಟಿಗೆ ಸೇರುವುದಿಲ್ಲ.

ಶಕ್ತರಿಗೂ ಕಾರ್ಯಕುಶಲರಿಗೂ ಸಾವಿರ ದಾರಿ ತೆರೆಯಬಲ್ಲದು. ದಾರಿ ಮಾಡಿಕೊಳ್ಳುವದೂ ಅವರ ಕೈಯಲ್ಲಿಯೇ ಇದೆ. ನಮ್ಮ ಅದೃಷ್ಟ ಇನ್ನೊಬ್ಬರ ಕೈಯಲ್ಲಿದೆ ಎಂಬುದು ಸಾಹಸಿಗಳ ಲಕ್ಷಣವಲ್ಲ. ಹತಾಶರಾಗುವ ಕಾರಣವಂತೂ ಇಲ್ಲ. ಹತಾಶರಾಗುವರೆಂದರೆ ತಾವು ಬುದ್ಧಿಶಾಲಿಗಳೇ ಅಲ್ಲ; ಹತಾಶರಾಗುವದು ತಮ್ಮ ವಿದ್ಯೆಯಲ್ಲಿ, ತಾವು ಧ್ಯೇಯವೆಂದು ನಂಬಿರುವುದರಲ್ಲಿ, ತಮ್ಮ ಆರಾಧ್ಯ ದೇವತೆಯಲ್ಲಿ ನಂಬಿಕೆ ಇಲ್ಲವೆಂದೇ ಅರ್ಥ. ಎಲ್ಲಕ್ಕಿಂತ ಹೆಚ್ಚಾಗಿ ತಮ್ಮಲ್ಲಿಯೇ ತಮಗೆ ವಿಶ್ವಾಸ ಇಲ್ಲವೆಂದು ಅರ್ಥ. ಇದಲ್ಲದಿದ್ದರೆ ಬೇರೊಂದು ಕೆಲಸ, ಇಲ್ಲಿ ಅಲ್ಲದಿದ್ದರೆ ಬೇರೊಂದು ಕಡೆ ಮಾಡಬೇಕು ಎನ್ನುವವನಿಗೆ, ಮಾಡಬಲ್ಲವನಿಗೆ ಎಲ್ಲೆಲ್ಲೂ ಸ್ಥಳವೇ, ಯಾವದೂ ದಾರಿಯೇ.

೧೩ ಅಂಥ ಯೋಜನೆ ಒಂದೂ ಇಲ್ಲ. ಜಾತೀಯ ಎಣಿಕೆಯನ್ನು ಮನೆಯಲ್ಲಿ, ಸಮಾಜದಲ್ಲಿ ಅವರವರ ಖಾಸಗೀ ಜೀವನಗಳಿಗೆ ಸೀಮಿತ ಮಾಡಿಕೊಂಡು, ಒಟ್ಟು ಭರತಖಂಡ ಒಂದು ರಾಷ್ಟ್ರ, ಅದರ ಹಿತ ಎಲ್ಲರ ಹಿತ, ಅದಿಲ್ಲದಿದ್ದರೆ ನಾವಿಲ್ಲ, ಅದಕ್ಕೆ ಅಹಿತವಾದ ಯಾವುದರಲ್ಲಿ ತೊಡಗಿದರೂ ಅದು ದೇಶದ್ರೋಹ ಕಾಲದ್ರೋಹ ಆಗುತ್ತದೆ ಎಂಬ ಭಾವನೆ ಬೆಳೆದರೆ ಜಾತಿಗೆ ಸಂಬಂಧಿಸಿದ ಎಲ್ಲ ಕಾರ್ಪಣ್ಯಗಳೂ ನಿವಾರಣೆಯಾದಾವು. ಇತ್ತ ಜಾತಿ ಪಕ್ಷಪಾತದ ಮೂಲಕ ಮುಂದುವರಿದು ಪ್ರಜಾಸತ್ತೆಯ ಸಾರ್ವಜನಿಕಕ್ಕೆ ನಡೆಯುವುದು ಸುಲಭವಾಗುತ್ತದೆ; ಇದನ್ನು ಒಂದು ಸಂಧಿ-(Transition) ಕಾಲವನ್ನಾಗಿ ಮಾಡಿಕೊಂಡರೆ. ಬೇಗ ಈ ಮಜಲನ್ನು ದಾಟಬೇಕಾಗುತ್ತದೆ. ದಾಟಲು ಮನಸ್ಸು ಮಾಡಬೇಕು. ಅಲ್ಲಿ ಕ್ರೋಧಾವೇಶಗಳನ್ನು ಬೆಳಸದೆ ಜನತೆಯನ್ನು ನಡಸುವ ನಾಯಕತನ ಬೇಕು. ಸಕಲ ಜನ ಹಿತಾಯ ಸಕಲ ಜನ ಸುಖಾಯ ಎಂಬುದು ಪ್ರಜಾಸತ್ತೆಯ ದಾರಿ.

ಮಹಾಭಾರತದಲ್ಲಿ ಒಂದು ಪದ್ಯ ಮೂರು ನಾಲ್ಕು ಕಡೆ ಬರುತ್ತದೆ.

ತ್ಯಜೇತ್ ಕುಲಾರ್ಥೇ ಪುರುಷಃ
ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್
ಗ್ರಾಮಂ ಜನಪದಸ್ಯಾರ್ಥೇ
ಆತ್ಮಾರ್ಥೇ ಪೃಥ್ವಿವೀಂ ತ್ಯಜೇತ್ ॥

ಇಲ್ಲಿ ತ್ಯಜೇತ್ ಎಂಬ ಮಾತನ್ನು ಬಿಡೋಣ. ವ್ಯಕ್ತಿಯಿಂದ ಕುಲಕ್ಕೆ ಹಾನಿಯಾಗುವದಾಗಿದ್ದರೆ ವ್ಯಕ್ತಿಯ ಕ್ಷೇಮಕ್ಕಿಂತ ಕುಲದ ಕ್ಷೇಮ ದೊಡ್ಡದು. ಒಂದು ಕುಲದ ಹಿತ ಒಂದು ಗ್ರಾಮದ ಹಿತಕ್ಕೆ ಅಡ್ಡಿಯಾಗುವ ಹಾಗಿದ್ದರೆ ಗ್ರಾಮದ ಹಿತ ಹಿರಿಯದಾಗಬೇಕೇ ಹೊರತು ಕುಲದ್ದಲ್ಲ. ಗ್ರಾಮಗಳ ಹಿತಕ್ಕಿಂತ ಜನಪದದ ಹಿತ ಸರ್ವಥಾ ಸಾಧಿಸಬೇಕಾದ್ದು. ಒಂದು ಗ್ರಾಮದ ಅಭಿವೃದ್ಧಿ ಜನಪದ ಹಿತಕ್ಕೆ ಅಡ್ಡಿಯಾಗುವುದಾಗಿದ್ದರೆ ಗ್ರಾಮದ ಹಿತವನ್ನು ಬಿಟ್ಟು ಜನಪದದ ಏಳಿಗೆಯನ್ನು ಸಾಧಿಸಬೇಕು ಎಂಬುದು ಅರ್ಥ. ವ್ಯಕ್ತಿ, ಕುಲ, ಗ್ರಾಮ, ಜನಪದ, ಕಡೆಗೆ ಆತ್ಮ.

ಇವು ನಿಜವಾಗಿ ಪರಸ್ಪರ ವೈರಿಗಳಾಗಬೇಕಿಲ್ಲ. ನಮ್ಮ ಮನೆಯನ್ನು ಚೆನ್ನಾಗಿ ಕಟ್ಟಿಕೊಳ್ಳುತ್ತೇನೆಂದರೆ ಅದಕ್ಕೆ ಒಂದು ಕಾಪೌಂಡ್ ಹಾಕಿಕೊಂಡು ಸಿಂಗರಿಸಿಕೊಳ್ಳುತ್ತೇನೆಂದರೆ ನೆರೆಯುವನಿಗಾಗಲಿ ಮುನಸಿಪಾಲಿಟಿಗಾಗಲಿ ವಿರುದ್ಧ ಆದೀತೆ? ಒಂದು ಇನ್ನೊಂದರೊಡನೆ ಜೊತೆಗೂಡಿ ಬೆರೆದು ಒಂದಕ್ಕೊಂದು ಹೊಂದಿಕೊಂಡು ಸಮರಸವಾಗಿ ಜೀವನ ಬೆಳೆಯಬೇ-



## ಡಾ. ಜಿ. ವಿ. ಜೋಶಿ

**ಹುಬ್ಬಳ್ಳಿಯ ಖ್ಯಾತ ಸರ್ಜನ್ನರು, ರೋಟರಿ ಪ್ರಮುಖರು, ಹಲವು ಆರ್ಥಿಕ ಶೈಕ್ಷಣಿಕ ಸಂಸ್ಥೆಗಳ ಅಧ್ಯಕ್ಷರುಗಳು, ಸಹಕಾರ ಮುಂದಾಳುಗಳು, ಪರಿಣತ ನಟರು, ನಿರ್ಭಯ ವಿಚಾರವಾದಿಗಳು.**

ನಿಮ್ಮ ಪ್ರಶ್ನೆಗಳಿಗೆ ಬಿಡಿಬಿಡಿಯಾಗಿ ಉತ್ತರ ಕೊಡುವುದಕ್ಕಿಂತ ಅವುಗಳಿಗೆ ಇಡಿಯಾಗಿಯೇ ಉತ್ತರಕೊಡುತ್ತೇನೆ.

ನಮ್ಮ ಈ ದೇಶದಲ್ಲಿದ್ದ ಬೇರೆ ಬೇರೆ ಧರ್ಮಗಳ ಜನರನು ಒಬ್ಬರ ವಿರುದ್ಧ ಇನ್ನೊಬ್ಬರನ್ನು ಎತ್ತಿಹಿಡಿಯುವದರ ಮೂಲಕ ಬ್ರಿಟಿಶರು ಪ್ರಯೋಜನವನ್ನು ಪಡೆದರು ಎಂಬುದು ಸತ್ಯ. ಆದರೆ ಅವರು ಸ್ವೀಕರಿಸಿದ ಧಾರ್ಮಿಕ ಭೇದದ ನೀತಿಗೂ ಇಂದಿರುವ ಜಾತೀಯ ಭೇದಭಾವ ನೀತಿಗೂ ವ್ಯತ್ಯಾಸವಿದೆ.

ನಮ್ಮ ದೇಶದ ಇಂದಿನ ಪರಿಸ್ಥಿತಿಯಲ್ಲಿ ರಾಜಕೀಯ ಪಕ್ಷಗಳ ಮೇಲೆ ಜಾತಿಗಳು ನಿಶ್ಚಯವಾಗಿಯೂ ಪ್ರಭಾವ ಬೀರುತ್ತವೆ. ಕೆಲವೊಂದು ಪ್ರಮುಖ ರಾಜಕೀಯ ಪಕ್ಷಗಳು ನಿಜವಾಗಿ ಜಾತೀಯ ಪಕ್ಷಗಳೇ ಎಂದು ಹೇಳಬಹುದು.

—ಮುಂದಿನ ಪುಟಕ್ಕೆ

(ವೀ. ಸೀ. ಮುಂದುವರಿದದ್ದು)

ಕಾದುದು ರಾಷ್ಟ್ರಕ್ಕೆ ಕ್ಷೇಮ. ಹಿರಿಯ ಹಿತ-ಸಾಧನೆಗಾಗಿ ಸಣ್ಣ ಹಿತವೂ, ಏಕದೇಶವಾದ ಪ್ರಯೋಜನವೂ ಹಿಂದೆ ನಿಲ್ಲಬೇಕು. ಕಡೆಯದಾಗಿ, ಒಬನ ಆತ್ಮಸಾಧನೆಗಾಗಿ ಒಂದು ರಾಜ್ಯವನ್ನೇ ತ್ಯಾಗ ಮಾಡತಕ್ಕದ್ದು ಎಂಬ ಮಾತು. ಒಂದು ರಾಜ್ಯದ ಬೆಲೆ ಹೆಚ್ಚಲ್ಲ. ಆತ್ಮಕಲ್ಯಾಣ ರಾಜ್ಯಲಾಭಕ್ಕಿಂತ ಹೆಚ್ಚಿನದು. ಅದಕ್ಕಾಗಿ ಎಲ್ಲ ಸ್ವಾಮ್ಯವನ್ನೂ, ಎಲ್ಲ ಅಧಿಕಾರವನ್ನಾದರೂ ಬಿಟ್ಟುಕೊಡಬೇಕು.

'What does it profit you if you gain the whole world and lose your soul'' ಎಂಬ ಪಾಶ್ಚಿಮಾತ್ಯರ ನುಡಿ ಇದೇ ಅರ್ಥದ್ದು.

ಪುಣ್ಯಸ್ಯ ಫಲಮಿಚ್ಛಂತಿ
ಪುಣ್ಯಂ ನೇಚ್ಛಂತಿ ಮಾನವಾಃ ।
ನ ಪಾಪಫಲಮಿಚ್ಛಂತಿ
ಪಾಪಂ ಕುರ್ವಂತಿ ಯತ್ನತಃ ॥

ಎಂಬ ನಡವಳಿಕೆ ಲೋಕದ ಚರಿತ್ರೆಯಲ್ಲಿ ಸರ್ವದಾ ಕಂಡದ್ದು. ನಾನು ನನ್ನದು ಎಂಬ ಪಕ್ಷಪಾತ ಬಿಟ್ಟು ನನ್ನದಲ್ಲದ ಇನ್ನೊಂದರ ಹಿತವನ್ನೋ ಪ್ರಿಯವನ್ನೋ ಬಯಸಿ ನಡೆದಾಗ ಮಾತ್ರ ಸಂಸ್ಕೃತಿ ಹುಟ್ಟುತ್ತದೆ. ಒಂದು ಹೆಜ್ಜೆ ಮುಂದೆ ಹೋಗುತ್ತದೆ. 'ಹಗೆಯ ಹೆಸರನ್ನು ಮಗನಿಗಿಡಬೇಕು' ಎಂಬ ಮಾತು ನಮ್ಮ ವೈರಿಯ ಪರವಾಗಿ ಕೂಡ ಒಂದು ನಯದ ನಡೆ ಉಂಟು. ಇಂದು ಹಗೆಯಾಗಿರುವವರು ನಾಳೆ ಕೆಳೆಯಾದಾರು, ಆಗಲಿ, ಎಂಬುದಕ್ಕೆ ನಾಂದಿಯಾದೀತು.

ನಮಗೆ ಹಗೆಯಾಗಿರುವ ಪಂಗಡಗಳ, ರಾಜ್ಯಗಳ ವಿಷಯದಲ್ಲಿಯೂ ಸೂಕ್ಷ್ಮವಾದ ನಡತೆ, ನಿಯಮ, ಕ್ರಿಯಾವಿಧಾನ ಸಮಯ ಉಂಟು, ಅದನ್ನು ಬಿಟ್ಟು ನಡೆಯುವ ಹಾಗಿಲ್ಲ. ಹೀಗೆಯೇ ಜಾತೀಯತೆಯ ವಿಷಯವೂ ಪ್ರಾಂತ ಭಾಷೆ, ಮತ ಬಣ ಎಂಬವುಗಳಂತೆಯೇ ಜಾತಿಯೂ ನೆರವಾಗಿ ಉಳಿಸಬಲ್ಲದು; ಹಗೆಯಾಗಿ ಒಡೆದು ನಾಶಮಾಡಬಲ್ಲದು

# ಜಾತೀಯತೆ: ಅದರಿಂದ ನಿವೃತ್ತಿ ಸಾಧ್ಯವೇ?

(ಪ್ರಶ್ನಾವಳಿ ನೋಡಿರಿ-ಪುಟ ೪)

(ಡಾ. ಜಿ. ವಿ. ಜೋಶಿ ಮುಂದುವರಿದದ್ದು)

ಸ್ವಾರ್ಥ ಮತ್ತು ಸ್ವಜಾತೀಯರ ಹಿತಸಾಧನೆಗಾಗಿ ಜಾತಿಮತಗಳನ್ನು ವಿಶೇಷವಾಗಿ ಬಳಸಿಕೊಳ್ಳುತ್ತಿರುವುದನ್ನು ಕಾಣಬಹುದು. ನಮ್ಮ ದೇಶದಲ್ಲಿ ಸರಕಾರ ಮತ್ತು ಅರೆ ಸರಕಾರಿ ಸಂಸ್ಥೆಗಳೇ ನೌಕರಿ ಕೊಡುವ ದೊಡ್ಡ ಮಾಲಕರಾಗಿರುವದರಿಂದಲೇ ಜಾತೀಯತೆಯ ಕೈವಾಡಕ್ಕೆ ಅವಕಾಶವಿರುವಂತಾಗಿದೆ. ಮುತ್ತಾವ ನಾಗರಿಕ ದೇಶದಲ್ಲಿ ಸರಕಾರವೇ ಅತಿ ದೊಡ್ಡ ಮಾಲಕನಾಗಿರುವದಿಲ್ಲ. ಯೋಗ್ಯತೆಯ ಅಭಾವದಿಂದ ಮತ್ತೆಲ್ಲೂ ನೌಕರಿ ಸಿಗದಿದ್ದಾಗ ಮಾತ್ರವೇ ಆ ದೇಶಗಳಲ್ಲಿ ಜನ ಸರಕಾರಿ ನೌಕರಿಗಳಿಗೆ ಸೇರಿಕೊಳ್ಳುತ್ತಾರೆ.

ಈ ಪರಿಸ್ಥಿತಿ ಸುಧಾರಿಸಬೇಕಾದರೆ ಸರಕಾರೇತರ ರಂಗದಲ್ಲಿ ಕೆಲಸ ಸಿಗುವ ಅವಕಾಶಗಳು ಹೆಚ್ಚಾಗಬೇಕೆಂದು ನನಗನಿಸುತ್ತದೆ. ಅದಕ್ಕಾಗಿ ಕೇಂದ್ರ ಮತ್ತು ರಾಜ್ಯಸರಕಾರಗಳೆರಡೂ ಖಾಸಗಿ ರಂಗಕ್ಕೆ ಸ್ವಾತಂತ್ರ್ಯ ನೀಡಬೇಕು. ಖಾಸಗಿ ಸಂಸ್ಥೆಯ ಮಾಲಕ ಸ್ವಾಭಾವಿಕವಾಗಿ ಯೋಗ್ಯತೆಯ ಮೇಲೆಯೆ ನೌಕರರನ್ನು ಆರಿಸಿಕೊಳ್ಳುತ್ತಾನೆ.

ಭಾಷಾವಾರು ರಾಜ್ಯ ರಚನೆಯೂ ಈ ಜಾತೀಯತೆಯ ಭಾವನೆಗೆ ಎಡೆಮಾಡಿಕೊಟ್ಟಿರುವ ಇನ್ನೊಂದು ಕಾರಣವಾಗಿದೆ. ಸರಕಾರದ ಆಡಳಿತ ಒಂದು ವಿಶಿಷ್ಟ ಭಾಷಾ ಪ್ರದೇಶಕ್ಕೆ ಸೀಮಿತವಾದಾಗ ದೃಷ್ಟಿಕೋನವು ತೀರ ಸಂಕುಚಿತವಾಗಿ ತನ್ನವರಿಗೇ ಸಹಾಯ ಮಾಡುವ ಪ್ರವೃತ್ತಿ ಬಲವಾಗುತ್ತದೆ.

ಸ್ವಾತಂತ್ರ್ಯ ಪ್ರಾಪ್ತಿಯ ನಂತರ ಭಾರತ ಸರಕಾರವು ಮೊದಲನೆಯ ಹೆಜ್ಜೆಯಾಗಿ ಜನಗಣತಿ ದಾಖಲೆಯಲ್ಲಿ ಜಾತಿಮತಗಳ ಉಲ್ಲೇಖವನ್ನು ಮಾಡುವದನ್ನು ಬಿಟ್ಟುಕೊಡಬೇಕಾಗಿತ್ತು. ಧಾರ್ಮಿಕ ನಂಬಿಗೆಗಳು ಸಂಪೂರ್ಣವಾಗಿ ವೈಯಕ್ತಿಕವೆಂಬ ಭಾವನೆ ಜನರಲ್ಲಿ ಬೆಳೆಯಲು ವ್ಯಾಪಕ ಪ್ರಚಾರ ಮಾಡಬೇಕು. ಜಪಾನಿನಲ್ಲಿ ಒಂದೇ ಕುಟುಂಬದಲ್ಲಿ ಬೇರೆಬೇರೆ ಧರ್ಮ ಹಾಗೂ ಪರಂಪರೆಗಳ ಜನರು ಇರುವುದನ್ನು ಕಾಣಬಹುದು. ಆ ವಿಚಾರವನ್ನು ಅಲ್ಲಿ ಯಾರೂ ಗಣನೆಗೆ ತಂದುಕೊಳ್ಳುವದಿಲ್ಲ. ಅಂಥ ಸಮಾಜ ರಚನೆ ನಮ್ಮಲ್ಲಿ ಆಗಬೇಕಾದರೆ ಇನ್ನೂ ಬಹಳ ಯತ್ನವಾಗಬೇಕಾಗಿದೆ ಎಂದು ನಾನು ಬಲ್ಲೆ.

ಹಿಂದು ವರ್ಣಾಶ್ರಮದ ಅರ್ಥವನ್ನು ಸರಿಯಾಗಿ ತಿಳಿದುಕೊಳ್ಳದೇನೇ ಜಾತೀಯ ಭೇದ ಭಾವಕ್ಕೆ ಅದೇ ಕಾರಣವೆಂದು ಹೇಳಲಾಗುತ್ತಿದೆ. ವರ್ಣಾಶ್ರಮದಲ್ಲಿ ಪ್ರತಿಯೊಬ್ಬನು ಯಾವ ಯಾವ ಕೆಲಸಕ್ಕೆ ಯೋಗ್ಯ ಎಂದಿಷ್ಟೇ ಹೇಳಿದೆ. ಅದು ಯಾವ ಬಗೆಯ ಸಾಮಾಜಿಕ ನಿಬಂಧನೆಯನ್ನೂ ಹೇರಲಿಲ್ಲ. ಬೇರೆ ಬೇರೆ ವರ್ಣಾಶ್ರಮದ ಜನರು ಒಟ್ಟಾಗಿ ಸುಖದಿಂದ ಬಾಳುತ್ತಿದ್ದರು. ಬೇರೆ ಬೇರೆ ವರ್ಣಗಳ ಜನರು ಪರಸ್ಪರ ಲಗ್ನವಾಗಲು ಪ್ರತಿಬಂಧವಿರಲಿಲ್ಲ. ಜನರು ಮೇಲಿನ ಅಥವಾ ಕೆಳಗಿನ ವರ್ಣಗಳನ್ನು ತಂತಮ್ಮ ಯೋಗ್ಯತಾನುಸಾರವಾಗಿ ಸ್ವೀಕರಿಸಲು ನಿರ್ಬಂಧವೇನೂ ಇರಲಿಲ್ಲ

ಜಾತೀಯತೆಯ ನಿರ್ಮೂಲನೆಗಾಗಿ ಅದನ್ನು ಕ್ರಮಕ್ರಮವಾಗಿ ಯೋಜಿಸದೆ ಇಡಿಯಾಗಿ ಬಿಡಿಸಬೇಕೆಂಬುದೇ ನನ್ನ ಅಭಿಪ್ರಾಯ. ಕೆಲಸಗಳನ್ನು ಯೋಗ್ಯತೆ ನೋಡಿಯೆ ಕೊಡುವಂತಾಗಬೇಕು, ಔದ್ಯೋಗಿಕ ಕ್ಷೇತ್ರದಲ್ಲಿ ಸರಕಾರದ ಪ್ರಭಾವವನ್ನು ಕಡಿಮೆ ಮಾಡಬೇಕು. ಸರಕಾರವು ಶಾಂತಿ ಸುವ್ಯವಸ್ಥೆಯ ರಕ್ಷಣೆಗಷ್ಟೆ ತನ್ನ ಕಾರ್ಯವನ್ನು ಸೀಮಿತಮಾಡಿಕೊಳ್ಳಬೇಕು. ತಮ್ಮೆಲ್ಲ ಸಮಸ್ಯೆ-ಕಷ್ಟಗಳ ನಿವಾರಣೆಗೆ ಸರಕಾರದ ಮುಖ ನೋಡುವ ಜನರ ಪ್ರವೃತ್ತಿಯನ್ನು ಕಡಿಮೆಮಾಡಬೇಕು.

ಸಂಕ್ಷಿಪ್ತದಲ್ಲಿ ಹೇಳುವದಾದರೆ ಔದ್ಯಮಿಕ ಸಾತಂತ್ರ್ಯ, ಬೇರೆ ಬೇರೆ ಜಾತಿಗಳಲ್ಲಿ ವಿವಾಹವಾಗುವ ಸ್ವಾತಂತ್ರ್ಯ, ಸಾರ್ವಜನಿಕವಾಗಿ ಧರ್ಮ ಜಾತಿಯ ಪ್ರದರ್ಶನ ಮಾಡದಂತೆ ತಡೆಗಟ್ಟುವದು ಇವೇ ಈ ಸಮಸ್ಯೆಗಳಿಗೆಲ್ಲ ತಕ್ಕ

— ಮುಂದಿನ ಪುಟಕ್ಕೆ



## ಅ ನ ಕೃ

**ಕನ್ನಡದ ಕಾದಂಬರೀ ಸಮ್ರಾಟರಾದ ಅ. ನ. ಕೃಷ್ಣರಾಯರು ಸಾಹಿತ್ಯ ಕಲೆಗಳ ವಿಷಯದಲ್ಲಿ ಮಾತ್ರವಲ್ಲ, ಸಾಮಾಜಿಕ ಪ್ರಶ್ನೆಗಳಲ್ಲಿ ಕೂಡ ಗಾಢ ಚಿಂತನೆ ಮಾಡಿ ಪ್ರಗತಿಯ ಪಕ್ಷದಲ್ಲಿ ಯಾವಾಗಲೂ ಹೋರಾಡುತ್ತ ಬಂದವರು.**

೧. ನಿಜ. ಸ್ವಾತಂತ್ರ್ಯಪೂರ್ವದಲ್ಲಿ ನಮ್ಮ ಜನತೆಯಲ್ಲಿದ್ದ ತ್ಯಾಗ ಮನೋಭಾವ, ದೇಶಭಕ್ತಿ, ನಿಃಸ್ವಾರ್ಥ ಸೇವಾಬುದ್ಧಿ ಮೊದಲಾದವು ಸ್ವಾತಂತ್ರ್ಯ ಬಂದ ನಂತರ ಕ್ಷೀಣವಾಗುತ್ತ ಬಂದವು ಅವುಗಳ ಜಾಗದಲ್ಲಿ ಜಾತೀಯತೆ ತಲೆಯೆತ್ತತೊಡಗಿತು.

೨. ಇದಕ್ಕೆ ಸ್ವಾರ್ಥವೇ ಕಾರಣ. ತಾನು, ತನ್ನ ಜಾತಿಯ ಜನ ಸೌಖ್ಯವಾಗಿರಬೇಕು ಎಂಬ ಭಾವನೆ ಯಾವಾಗ ಮೂಡಿತೋ, ಆಗ ರಾಜ್ಯ, ರಾಷ್ಟ್ರ ಎಂಬ ಸರ್ವಾಂಶ ವಿಶಾಲಮನೋಭಾವ ಕಡಿಮೆಯಾಯಿತು.

೩. ವಿದೇಶಿ ಆಡಳಿತಗಾರರು ಬೆಳೆಸಿದರು ಎಂಬುದಕ್ಕಿಂತ ಜಾತೀಯತೆಗೆ ಪುಟ ಕೊಟ್ಟರು ಎಂಬುದು ಸರಿ ಎಂದು ನನ್ನ ಅಭಿಪ್ರಾಯ. ಜಾತೀಯತೆ ಅನಿವಾರ್ಯ ಖಂಡಿತ ಅಲ್ಲ. ಜಾತೀಯತೆಗೆ ಜನ ಹೋರಾಡುತ್ತಾರೆ ಎನ್ನುವುದೂ ಸರಿಯಲ್ಲ; ಸ್ವಾರ್ಥಕ್ಕಾಗಿ ಸ್ವಜನ, ಸ್ವಜಾತಿಯವರಿಗಾಗಿ ಹೋರಾಡುವ ಜನ ಜಾತೀಯತೆಯನ್ನು ಬಳಸಿಕೊಳ್ಳಲಾರಂಭಿಸಿದರು.

೪. ಜಾತಿಯ ಕಟ್ಟುಪಾಡು ಹಿಂದೆ ಅವರವರ ಮತಗಳಲ್ಲೇ ಸೀಮಿತವಾಗಿದ್ದಿತು. ಹೊರ ಪ್ರಪಂಚಕ್ಕೆ ಬಂದಾಗ ಜನ ಸಭ್ಯ ನಾಗರಿಕರಾಗಿಯೇ ನಡೆಸುಕೊಳ್ಳುತ್ತಿದ್ದರು. ಪೂಜೆಪುನಸ್ಕಾರ, ಆಚಾರ ಮೊದಲಾದವು ಅವರವರಲೇ ಇದ್ದವು. ಇದರಿಂದ ಇತರರಿಗೆ ಬಾಧಕವೇನೂ ಇರಲಿಲ್ಲ. ಈಗ ಕಟ್ಟುನಿಟ್ಟುಗಳು ಸಡಿಲವಾಗಿವೆ. ನಾನು ನನ್ನ ಜಾತಿಯನ್ನು ಪಟ್ಟಾಗಿ ಹಿಡಿದರೆ ಸ್ವಾರ್ಥಸಾಧನೆಯಾಗುತ್ತದೆ ಎಂಬ ಮನೋಭಾವ ಬೆಳೆದುಬಿಟ್ಟಿದೆ.

೫. ಪ್ರಜಾಸತ್ತಾತ್ಮಕ ಸಮಾಜವಾದೀ ಸಂವಿಧಾನವೆಂಬುದು ವೇದಕಾಲದಲ್ಲಿ ಇದ್ದಿತು. ಗುಪ್ತರ ಕಾಲದ ನಂತರ ಸ್ವಲ್ಪ ಬದಲಾಯಿತು. ಆಗ ಸಮ್ರಾಟ್, ಸಾಮ್ರಾಜ್ಯ ಎಂಬುದು ಬಂದಿತು. ರಾಜನು ಪ್ರಜಾಹಿತರಕ್ಷಕನಾದ. ಸಾಂಕುಶಪ್ರಭು ಆದ. ಎಲ್ಲ ಜನರಿಗೂ ಅವರವರ ಮತ ಧರ್ಮಗಳನು ಅನುಸರಿಸುವುದಕ್ಕೆ ಅವಕಾಶ ಕೊಟ್ಟ. ಆದರೆ ಅದರಿಂದ ಇತರ ಜಾತಿ-ವರ್ಣದವರಿಗೆ ಯಾವ ಅಡ್ಡಿ-ಆತಂಕವೂ ಆಗುತ್ತಿರಲ್ಲ. ಈಗಿನ ಸಮಾಜವಾದೀ ಸಮಾಜ ರಚನಾನೀತಿ ಆಗ ಹೊಸತಾಗಿತ್ತು ಅಷ್ಟೇ. ಈ ಹೊಸತಕ್ಕೆ ಹೊಂದಿಕೊಳ್ಳುವುದು ಇನ್ನೂ ಆಗಿಲ್ಲ. ೨೦-೩೦ ವರ್ಷ ಹೋದರೆ ಆಗಲೇ ಬೇಕು, ಆಗುತ್ತದೆ.

—ಮುಂದಿನ ಪುಟಕ್ಕೆ

---

**(ಡಾ. ಜಿ. ವಿ. ಜೋಶಿ ಮುಂದುವರಿದದ್ದು)**

ಪರಿಹಾರ. ದೇಶದ ಎಲ್ಲ ನಾಗರಿಕರಿಗೂ ಒಂದೇ ನಾಗರಿಕ ಕಾನುದೆಯಿರಬೇಕು. ಜಾತಿ-ಮತಗಳ ತಳಹದಿಯ ಮೇಲೆ ಪ್ರಾಶಸ್ತ್ಯವಿರಕೂಡದು. ಶಾಸನ ಸಭೆಗಳ ಗಾತ್ರವನ್ನು ಕಡಿಮೆಮಾಡಬೇಕು. ವಿಧಾನ ಪರಿಷತ್ತುಗಳನ್ನು ತೆಗೆದು ಹಾಕಬೇಕು, ಪ್ರತಿಯೊಂದು ರಾಜ್ಯದಲ್ಲೂ ಮಂತ್ರಿಮಂಡಳದ ಗಾತ್ರವನ್ನು ಈಗಿನ ಒಂದು ನಾಲ್ಕನೆಯ ಅಂಶಕ್ಕೆ ಕಡಿಮೆಮಾಡಬೇಕು.

ನನ್ನ ಅಭಿಪ್ರಾಯ ತೀವ್ರಗಾಮಿಯಾಗಿ ಕಾಣಬಹುದು. ಆದರೆ ಈ ಸಮಸ್ಯೆಯ ಪರಿಹಾರಕ್ಕೆ ತೀವ್ರ ಉಪಾಯವೇ ಬೇಕು. *

# ಜಾತೀಯತೆ : ಆದರಿಂದ ನಿವೃತ್ತಿ ಸಾಧ್ಯವೇ ?

(ಪ್ರಶ್ನಾವಳಿ ನೋಡಿರಿ-ಪುಟ ೪)

(ಅ. ನ. ಕೃ. ಮುಂದುವರಿದದ್ದು)

ಸಾಮಾನ್ಯವಾಗಿ ಜಾತೀಯ ಮನೋಭಾವ ನೀಗಿ ನಾವೆಲ್ಲ ಒಂದೇ ಎಂಬ ಮನೋಭಾವ ಮೂಡುವುದು ರಾಷ್ಟ್ರಕ್ಕೆ ವಿಪತ್ತು, ವಿದೇಶೀಯರ ದಾಳಿ ಸಂಭವಿಸಿದಾಗ. ಇದನ್ನು ಇತ್ತೀಚೆಗೆ ನಾವೇ ಕಂಡಿದ್ದೇವೆ. ರಾಷ್ಟ್ರೀಯ ಭಾವನೆ ಬಲಿಷ್ಠಗೊಳ್ಳಲು ಇಂಥ ಸಂದರ್ಭ ಸನ್ನಿವೇಶಗಳು ನಿಮಿತ್ತವಾಗುತ್ತವೆ. ಆ ಸಂದರ್ಭದಲ್ಲಿ ಮೂಡುವ ಐಕ್ಯ ಮುಂದುವರಿದು ಬೆಳೆಯಬೇಕು.

೬. ಜಾತೀಯತೆಗೆ ಈ ಪದ್ಧತಿ ಪೋಷಕವಾಗಿಲ್ಲ. ಇದರ ವಿನಿಯೋಗ ವಿಧಾನ ಪೋಷಕವಾಗಿದೆ ಅಷ್ಟೆ. ಅಂದರೆ ವಿನಿಯೋಗ ಸಮರ್ಪಕವಾಗಿಲ್ಲ. ರಾಷ್ಟ್ರೀಯ ದೃಷ್ಟಿ ಬೆಳೆಯಬೇಕು. ನಮ್ಮಲ್ಲಿ ಎಷ್ಟು ಭಾಷೆಯ ಜನ ಇರಲಿ, ಯಾವ ಪ್ರಾಂತದವರಿರಲಿ ನಾವೆಲ್ಲ ಭಾರತದವರು. ಒಂದೇ ನಾಡಿನ ನೆಲದವರು ಎಂಬ ಭಾವನೆ ಮೂಡಬೇಕು. ಅಮೆರಿಕ, ಸ್ವಿಜರ್ಲೆಂಡ್ ದೇಶಗಳನ್ನು ಉದಾಹರಿಸಬಹುದು. ಅಲ್ಲಿ ಪ್ರಪಂಚದ ವಿವಿಧ ರಾಷ್ಟ್ರಗಳಿಂದ ಬಂದು ನೆಲೆಸಿರುವ ಹಲವು ಹನ್ನೊಂದು ಭಾಷೆಯ ಜನಾಂಗದವರು ಇದ್ದಾರೆ. ಆದರೆ 'ನಾವು ಅಮೆರಿಕದವರು; ನಮ್ಮ ಅಧ್ಯಕ್ಷ ಅಮೆರಿಕದ ಅಧ್ಯಕ್ಷ' ಎಂದೇ ಪ್ರತಿಯೊಬ್ಬನೂ ಹೇಳುತ್ತಾನೆ. ಈ ಭಾವನೆ ನಮ್ಮಲ್ಲಿ ಬೆಳೆಯಬೇಕು. ರಾಷ್ಟ್ರನಿಷ್ಠೆ ಜಾಗೃತವಾಗಬೇಕು.

೭. ಜಾತೀಯತೆಯನ್ನು ಬೆಳೆಸಲು ರಾಜಕೀಯ ಪಕ್ಷಗಳು ಹಾಗೂ ಸರಕಾರಗಳೇ ಕಾರಣ. ಸರಕಾರ ಕಟ್ಟುವವರು ಜಾತಿಯ ಹೆಸರಲ್ಲೇ, ಜಾತಿಗೆ ಅಂಟಿಕೊಂಡೇ ಬರುತ್ತಾರೆ.

೮. ಜಾತೀಯ ಸಂಸ್ಥೆಗಳಿಂದ ಖಂಡಿತವಾಗಿಯೂ ಆತಂಕವಿದೆ. ಜಾತಿಭೇದನಿವಾರಣೆ ಆದರೆ ಇಂಥ ಸಂಸ್ಥೆಗಳು ತಾವಾಗಿ ಕಣ್ಮರೆಯಾಗುತ್ತವೆ. ಸದ್ಯದ ಸ್ಥಿತಿ,ಲಕ್ಷಣ ಹೋಗಲೇಬೇಕು. It is a must. ಈಗಲೇ ಈ ಕ್ಷಣದಲ್ಲೇ ಇದು ಆಗುವುದಿಲ್ಲ ಎನಿಸಿದರೂ ಇದರಿಂದ ನಿರಾಶರಾಗುವ ಕಾರಣವೇನಿಲ್ಲ. ರಾಜ್ಯದ, ರಾಷ್ಟ್ರದ ನಾಯಕರಾದವರು, ಸಾಹಿತ್ಯ, ಕಲೆ ಮೊದಲಾದ ಎಲ್ಲ ಕ್ಷೇತ್ರಗಳಲ್ಲೂ ಜಾತೀಯ ಮನೋಭಾವವನ್ನು ನಿವಾರಿಸಿ ಜನಜಾಗೃತಿಯನ್ನುಂಟುಮಾಡಬೇಕು ಇದು ಅತ್ಯವಶ್ಯಕ.

೯. ಸಾಧ್ಯ, ಖಂಡಿತ ಸಾಧ್ಯ. ಹಿಂದಿನ ಕಾಲದಲ್ಲಿ ಹಾಗೆಯೇ ಇದ್ದಿತು. ಆಯಾಕ್ಷೇತ್ರದಲ್ಲಿ ಕೆಲಸ ಮಾಡುವವರು ಆಯಾಜಾತಿಯವರಿಗೆ ಮಾಡುತ್ತಿದ್ದೇವೆ ಎಂಬುದನ್ನು ಬಿಟ್ಟು ಎಲ್ಲ ಜಾತಿಯವರಿಗೂ ಹಿತವಾಗಲಿ, ಅನುಕೂಲವಾಗಲಿ ಎಂಬ ವಿಶಾಲ ಮನೋಭಾವದಿಂದ ಮಾಡಬೇಕು. 'ನಾನು ನನ್ನವರು' ಎಂಬುದು ಹೋಗಿ ನಾವು ನಮ್ಮವರು ಎಂಬ ಮನೋಭಾವ ಬರಬೇಕು.

೧೦. ಗಂಡಾಂತರ ಬಂದೇ ಬರುತ್ತದೆ. ಈ ನೆಲದಲ್ಲಿ ಹುಟ್ಟಿ, ಇಲ್ಲಿಯ ನೀರು ಕುಡಿದು, ಆಹಾರ ತಿಂದು,ಅನುಕೂಲ ಪಡೆದು ಬೆಳೆದ ಜನ ಪರರಾಷ್ಟ್ರ ನಿಷ್ಠೆ ತೋರಿಸುವ ಮನೋಭಾವ ಶುದ್ಧ ತಪ್ಪು, ಇದು ಇದ್ದರೆ ವಿಪತ್ಕಾರಿ, ಗಂಡಾಂತರಕಾರಿ. ನಮ್ಮ ದೇಶದ ಮೇಲೆ ನಿಷ್ಠೆ ಹೆಚ್ಚಲೇಬೇಕು.

೧೧. ಇಲ್ಲ; ಆರ್ಥಿಕ ಸ್ಥಿತಿ ಸುಧಾರಿಸಿದ ಮಾತ್ರಕ್ಕೆ ಜಾತೀಯತೆ ಇಳಿಮುಖವಾಗುವುದಿಲ್ಲ. ಜಾತೀಯ ಮನೋಭಾವ ಬೆಳೆದಿರುವುದು ಆರ್ಥಿಕ ಸ್ಥಿತಿಗತಿಯಿಂದ ಅಲ್ಲ. ಜಾತೀಯ ಮನೋಧರ್ಮ ಸುಧಾರಿಸಿದರೆ ಮಾತ್ರ ಅದು ಸುಧಾರಿಸುತ್ತದೆ. ಗುಣಕರ್ಮ ವಿಭಾಗಶಃ ಎಂಬ ಗೀತೋಕ್ತಿಯಲ್ಲಿ ನನಗೆ ಅಪಾರ ವಿಶ್ವಾಸವಿದೆ. ಎಲ್ಲ ಜನಕ್ಕೂ ಅನುಕೂಲ ಮಾಡುವ ಸಾಮರ್ಥ್ಯವಿದ್ದರೆ ಮಾಡಬೇಕು. ಜಾತಿಭೇದ ಸಲ್ಲ, ಹೊಲ್ಲ.

೧೨. ಹತಾಶರಾಗಲು ಕಾರಣವೇನಿಲ್ಲ. ಉದ್ಯೋಗ ಒಂದು ಕಡೆ ಸಿಗದೆ ಇದ್ದರೆ ಇನ್ನೊಂದು ಕಡೆ ಪ್ರಯತ್ನಿಸಬೇಕು. ಬುದ್ಧಿ

— ಮುಂದಿನ ಪುಟಕ್ಕೆ



## ಕೆ. ವಿ. ಶಂಕರೇಗೌಡರು

**ಮೈಸೂರಿನ ಶಿಕ್ಷಣ ಮಂತ್ರಿಗಳು. ಭಾರತದ ಸಂವಿಧಾನ ಸಭೆಯ ಸದಸ್ಯರಾಗಿದ್ದರು. ಕನ್ನಡದ ಅಭಿಮಾನಿಗಳು ಮಾತ್ರವಲ್ಲ ಕನ್ನಡ ಸಾಹಿತ್ಯದಲ್ಲಿ ತುಂಬಾ ಅಭಿರುಚಿಯುಳ್ಳವರು.**

೧. ಸ್ವಲ್ಪ ಮಟ್ಟಿಗೆ ನಿಜ. ಇದಕ್ಕೆ ಕಾರಣ ಸ್ವಾರ್ಥ, ಅಧಿಕಾರ ಲಾಲಸೆ ತಲೆಯೆತ್ತಿರುವುದು. ಸ್ವಾತಂತ್ರ್ಯಕ್ಕೆ ಮುನ್ನ ಎಲ್ಲರ ಲಕ್ಷ್ಯವೂ ಸ್ವಾತಂತ್ರ್ಯ ಗಳಿಸುವುದೇ ಆಗಿತ್ತು. ಅನಂತರ ಈ ಜಾತೀಯ, ಪ್ರಾಂತೀಯ ಭಾವನೆ ತಲೆದೋರತೊಡಗಿತು.

೨. ಮುಖ್ಯ ಕಾರಣ ಚುನಾವಣೆಗಳಲ್ಲಿ ಅಭ್ಯರ್ಥಿಗಳನ್ನು ನಿಲ್ಲಿಸುವಾಗ ಜಾತೀಯ ಆಧಾರದ ಮೇಲೆ ನೋಡುವುದು. ಇನ್ನು ಕೆಲವರು ಉದ್ಯೋಗಗಳನ್ನೂ ಜಾತೀಯ ಆಧಾರದ ಮೇಲೆ ಕೊಡಲು ಪ್ರಯತ್ನಿಸುವುದು. ನನ್ನ ಅಭಿಪ್ರಾಯದಲ್ಲಿ ಈ ಜಾತೀಯತೆ ಹೆಚ್ಚುವುದಕ್ಕೆ ಕೆಲ ಮುಖಂಡರು ಕಾರಣ. ಅವರುಗಳು ಬಾಯಲ್ಲಿ ಹೇಳುವುದನ್ನು ಕಾರ್ಯತಃ ನಡೆಸುವುದಿಲ್ಲ. ಹೀಗಾಗಕೂಡದು.

೩. ವಿದೇಶೀಯರು ಬೆಳೆಸಲಿಲ್ಲ. ನಮ್ಮಲ್ಲೇ ಮೊದಲಿಂದ ಇತ್ತು. ಜನ ಕಟ್ಟುಬಿದ್ದಿದ್ದಾರೆ ಇದಕ್ಕೆ. ಅದರಿಂದ ಕಳಚಿಕೊಂಡು ಹೊರ ಬರದೆ ಮುಂದುವರಿದಿದಾರೆ. [ಬ್ರಿಟಿಷರೂ ಇದನ್ನು ಸ್ವಲ್ಪಮಟ್ಟಿಗೆ ಬಳಸಿಕೊಂಡರು ಎನ್ನಬಹುದು]. ಹಿಂದೆ ಸಮಾಜ ಈಗಿನ ಹಾಗೆ ಇರಲಿಲ್ಲ. ಸರಳವಾಗಿತ್ತು. ಚುನಾವಣೆಗಳು ಎಂದಿರಲಿಲ್ಲ. ಉದ್ಯೋಗಗಳಿಗೆ ಹೀಗೆ ಹಾತೊರೆಯುತ್ತಿರಲಿಲ್ಲ. ಜಾತೀಯತೆ ಇದ್ದರೂ ಹೊರಕ್ಕೆ ಗೋಚರವಾಡುವಂತಹ ವಾತಾವರಣ ಇರಲಿಲ್ಲ. ಈಗ ವಾತಾವರಣವೇ ಬದಲಾಗಿದೆ. ಎದ್ದು ಕಾಣುತ್ತಿದೆ.

೪. ಮೊದಲು ಹೇಳಿದ ಕಾರಣವೇ. ಹಿಂದೆ ಇದ್ದರೂ ಗೋಚರಿಸುತ್ತಿರಲಿಲ್ಲ.

೫. ಯಾವುದನ್ನೂ ಕಾನೂನು, ಸಂವಿಧಾನದಿಂದ ತಿದ್ದುವುದು ಕಷ್ಟ. ಮನೋಭಾವ ಬದಲಾಗಬೇಕು.

೬. ತಥ್ಯವಿದೆ. ರಾಜಕೀಯ ಪಕ್ಷಗಳು ಜಾತಿ ನೋಡಿ ಅಭ್ಯರ್ಥಿಗಳನ್ನು ನಿಲ್ಲಿಸುತ್ತವೆ. ಪ್ರಚಾರವೂ ಸಹ ಜಾತೀಯ ಸಾಧನದಿಂದಲೇ ನಡೆಯುತ್ತದೆ. ಮತದಾನದಲ್ಲಿ ಕೂಡ ಜಾತೀಯತೆ ಇದೆ. ನಮ್ಮ ಜಾತಿಯವರಿಗೇ ಮತ ಕೊಡೋಣ ಎಂಬ ಭಾವನೆ!

೭. ಜಾತೀಯತೆ ನೀಗಲು ಸಮಾಜದಲ್ಲಿ ವಾತಾವರಣ ಬದಲಾಗಬೇಕು. ಸನ್ನಿವೇಶ ಹಾಗಾಗಬೇಕು. ಆಗಲೇ ಜನರ ಮನೋಭಾವವೂ ಬದಲಾಗಲು ಸಾಧ್ಯ. ಕಾನೂನು ಈ ಕೆಲಸ ಮಾಡದು.

೮. ಸಾಧ್ಯ. ಆದರೆ ವ್ಯವಹಾರಕ್ಕೆ ತರಬೇಕು. ಬರೀ ತರುವುದಕ್ಕೆ ಸಾಕಷ್ಟು ಪ್ರಚಾರ

---

(ಅ. ನ. ಕೃ. ಮುಂದುವರಿದದ್ದು)

ಶಾಲಿಯಾದವನು, ಸಾಮರ್ಥ್ಯಶಾಲಿ 'ಮರಳು ಗಾಡಿನಲ್ಲಿ ಎಣ್ಣೆ ತೆಗೆಯಬಲ್ಲ' ಎನ್ನುತ್ತಾರೆ. ಇಂಥವರು ಹತಾಶರಾಗಬೇಕು ಯಾಕೆ? ಮಾರ್ಗಗಳು ಹಲವು ಇವೆ; ಮಾಡುವ ಛಾತಿ ಇದೆ. ಇನ್ನೇನು ಬೇಕು. ಪರಿಸ್ಥಿತಿಗೆ ಹೊಂದಿಕೊಂಡು ಹೋಗಬೇಕು ಅಷ್ಟೇ.

೧೩. ನಿಶ್ಚಿತವಾದ ಯೋಜನೆ ಎಂದು ಮತ್ತೆ ಹೇಳಲು ಏನೂ ಇಲ್ಲ. ಮೇಲಿನ ಪ್ರಶ್ನೆಗಳಿಗೆ ಕೊಟ್ಟಿರುವ ಉತ್ತರಗಳಲ್ಲೇ ನನ್ನ ಯೋಜನೆ ಅಡಕವಾಗಿದೆ. *

# ಜಾತೀಯತೆ : ಆದರಿಂದ ನಿವೃತ್ತಿ ಸಾಧ್ಯವೇ ?

(ಪ್ರಶ್ನಾವಳಿ ನೋಡಿರಿ-ಪುಟ ೪)



ಎಸ್. ಆರ್. ಬೊಮ್ಮಾಯಿ

ಎಂ. ಎನ್. ರಾಯರ 'ಹ್ಯೂಮನಿಸ್ಟ್' (ಮಾನವತಾವಾದಿ) ವಿಚಾರಧಾರೆಯ ಗಾಢ ಅಭ್ಯಾಸದಿಂದ ಮಾನವೀ ಸಮಸ್ಯೆಗಳ ನಾಡಿಯನ್ನು ಅರಿತವರು. ಸದ್ಯ ಮೈಸೂರಿನ ವಿಧಾನಸಭಾಸದಸ್ಯರು.

೧. ನಿಜ. ಇದು ರಾಜಕೀಯ ಮತ್ತು ಸಂಘ ಸಂಸ್ಥೆಗಳ ಅಧಿಕಾರ ಬಯಸುವವರಲ್ಲಿ ಹೆಚ್ಚಿನ ಪ್ರಮಾಣದಲ್ಲಿದೆ.

೨. ಇದಕ್ಕೆ ಮೂಲಭೂತ ಕಾರಣ ನಮ್ಮ ದೇಶದ ಜನತೆಯ ಬಡತನ, ಅನಕ್ಷರತೆ ಮತ್ತು ರಾಜಕೀಯ ಜಾಗೃತಿಯಾಗದಿರುವುದು ಮತ್ತು ಪ್ರಜಾಪ್ರಭುತ್ವದ ಪ್ರಯೋಗ ನಮ್ಮ ಜನತೆಗೆ ಹೊಸದಾಗಿರುವುದು. ಅಲ್ಲದೆ ಅಧಿಕಾರಲಾಲಸೆ. ರಾಜಕೀಯ ಪಕ್ಷಗಳು - ಅದರಲ್ಲಿಯೂ ರಾಷ್ಟ್ರೀಯ ಪಕ್ಷಗಳು ಸಹ ಚುನಾವಣೆಯಲ್ಲಿ ಗೆಲ್ಲುವ ಒಂದೇ ಉದ್ದೇಶದಿಂದ ಅಭ್ಯರ್ಥಿಗಳನ್ನು ಜಾತೀಯ ತಳಹದಿಯ ಮೇಲೆ ಗುಣವನ್ನು ನೋಡದೇ ಆರಿಸತೊಡಗಿದ್ದು; ಅನೇಕ ಸಂದರ್ಭಗಳಲ್ಲಿ ಆರಿಸಿದ್ದು ಮತ್ತು ಮುಂದುವರಿಸಿದ್ದು; ಅಲ್ಲದೆ, ಸರಕಾರಿ ಮತ್ತು

— ಮುಂದಿನ ಪುಟಕ್ಕೆ

(ಶಂಕರೇಗೌಡರು ಮುಂದುವರಿದದು)

ಕಾರ್ಯ ನಡೆಯಬೇಕು.

೯. ಜಾತಿ-ಧರ್ಮ ಎರಡೂ ಒಂದೇ ಅಲ್ಲ. ಧರ್ಮ ಬೇರೆ. ವೈಯಕ್ತಿಕವಾಗಿ ಅವರವರು ಅವರವರ ಧರ್ಮ-ಕರ್ಮಾದಿಗಗಳನ್ನು ಮಾಡಿದರೆ ಯಾರಿಗೂ ತೊಂದರೆ ಇಲ್ಲ. ಆದರೆ ಅಲ್ಲಿ ಜಾತೀಯತೆ ತಲೆ ಹಾಕಿ, ಮೇಲು-ಕೀಳು ಎಂಬ ಭಾವನೆ ಬಂದರೇ ತೊಂದರೆ. ಈ ಕೆಲಸ ಉಚ್ಚ-ಇದು ನೀಚ ಎಂಬ ಮನೋಭಾವ ತಪ್ಪು. ಎಲ್ಲರೂ ದೇವರ ಸೃಷ್ಟಿಯೇ, ಎಲ್ಲರೂ ಒಂದೇ ಎಂಬ ಭಾವನೆ ಮೂಡಿಬರಬೇಕು.

೧೦. ಗಂಡಾಂತರ ಖಂಡಿತ. ಬೇರೆ ಹೇಳಬೇಕಾದ್ದಿಲ್ಲ. ಜಾತೀಯ ಭಾಪನೆ ಅಪಾಯಕಾರಿ.

೧೧. ಸರಕಾರೀ ನೌಕರಿಗಳು, (ಉದ್ಯೋಗ ಹಂಚಿಕೆ) ಮತ್ತು ಚುನಾವಣೆಗಳಲ್ಲಿ ಸ್ಪರ್ಧೆಗಳು— ಈ ಎರಡು ಕಡೆ ಜಾತೀಯತೆ ಕಾಣಿಸುತ್ತದೆ. ಎಲ್ಲರಿಗೂ ಕೈತುಂಬ ಕೆಲಸವಿದ್ದು, ಉದ್ಯೋಗ ಸಿಗುತ್ತದೆ ಎಂದು ಆದರೆ, ಜೀವನಕ್ಕೆ ತೊಂದರೆ ಇಲ್ಲ ಎಂಬುದು ಖಚಿತವಾದರೆ, ನಿಶಯವಾಗಿ ಜಾತೀಯತೆ ಕಡಿಮೆಯಾಗುತ್ತದೆ.

೧೨. ಇದು ಸರಿಯಲ್ಲ. ಸತ್ಯಾಂಶವಿಲ್ಲ ಇದರಲ್ಲಿ. ಉದಾಹರಣೆಗೆ ರಾಜ್ಯ ಹಾಗೂ ಅಖಿಲ-ಭಾರತ ಮಟ್ಟದಲ್ಲಿ ಪಬ್ಲಿಕ್ ಸರೀಸ್ ಕಮಿ-ಶನ್ ಉದ್ಯೋಗ ಕೊಡಲು ಸಂದರ್ಶನ ಮಾಡುವಾಗ ಜಾತೀಯತೆಯನ್ನೂ ನೋಡುವುದಿಲ್ಲ. ಖಾಸಗೀ ಉದ್ಯಮ ರಂಗದಲ್ಲಿ ಕೆಲವೆಡೆ ಹೀಗೆ ಮಾಡಿಯಾರು. ಯೋಗ್ಯತೆ ಇದ್ದವರಿಗೆ ಪುರಸ್ಕಾರ ಇದ್ದೇ ಇದೆ; ಸಿಕ್ಕೇ ಸಿಗುತ್ತದೆ.

೧೩. ನಮ್ಮ ಸನಾತನಧರ್ಮ, ಭಾರತೀಯ ಸಂಸ್ಕೃತಿಯನ್ನು ಸರಿಯಾಗಿ ಅರಿತುಕೊಂಡರೆ ಸಾಕು; ಜಾತೀಯ, ಪಕ್ಷೀಯ, ಪ್ರಾಂತೀಯ, ಭಾಷಾ ಪ್ರಭೇದಗಳು ತಾವೇ ನೀಗುತ್ತವೆ. ಧಾರ್ಮಿಕ ಮುಖಂಡರು, ಮಠಾಧಿಪತಿಗಳು ನಾಯಕರುಗಳು ಈ ಬಗ್ಗೆ ಹೆಚ್ಚಿನ ಲಕ್ಷ್ಯ ಕೊಡಬೇಕು. ಹೇಳಬೇಕು, ಹೇಳಿದಂತೆ ಆಚರಿಸಬೇಕು. ಆದರ್ಶವಾಗಬೇಕು. ನಮ್ಮ ಶಾಲಾಶಿಕ್ಷಣದಲ್ಲೂ ಪಠ್ಯಪುಸ್ತಕಗಳಲ್ಲೂ ಸ್ವಲ್ಪ ಭಾಗವನ್ನು ಈ ಬಗ್ಗೆ ಸೇರಿಸಬೇಕು *

(ಬೊಮ್ಮಾಯಿ ಮುಂದುವರಿದದ್ದು)

ಖಾಸಗಿ ಸಂಸ್ಥೆಗಳಲ್ಲಿ ಜಾತಿಯ ತಳಹದಿಯ ಮೇಲೆ ಉದ್ಯೋಗ ಕೊಡುತ್ತ ಬಂದಿರುವುದು.

೩. ವಿದೇಶಿ ಆಳರಸರು ತಮ್ಮ ಅಧಿಕಾರದ ಕಪಿಮುಷ್ಟಿಯನ್ನು ಬಲಪಡಿಸಲು ಜಾತೀಯತೆಯನ್ನು ಬೆಳೆಸಿದ್ದು ನಿಜ. ಅವರ ಕಾಲದಲ್ಲಿ ಜಾತೀಯತೆಯು ಧರ್ಮ—ಧರ್ಮದ ಜನರಲ್ಲಿ ಅಂದರೆ, ಹಿಂದು, ಮುಸಲ್ಮಾನ-ಕ್ರಿಶ್ಚಿಯನ್, ಶೀಖ್ ಇಂಥ ದೊಡ್ಡ ಗುಂಪುಗಳಿಗೆ ಮಾತ್ರ ಪರಿಮಿತಿಗೊಂಡಿತ್ತು. ಆದರೆ ಸ್ವಾತಂತ್ರ್ಯದ ನಂತರ ಈ ಜಾತೀಯತೆಯು ಪ್ರತಿ ಧರ್ಮದ ಗುಂಪು, ಒಳಗುಂಪುಗಳಿಗೂ ಹೋಗಿ ಮುಟ್ಟಿದೆ. ದೇಶದಲ್ಲಿ ಜಾತಿಗಳಿದ್ದ ಮಾತ್ರಕ್ಕೆ ಜಾತೀಯತೆಯು ಅನಿವಾರ್ಯವೆಂಬುದನ್ನು ಒಪ್ಪಲಿಕ್ಕಾಗದು.

೪. ಈ ಪ್ರಶ್ನೆಗೆ ಉತ್ತರ ಮೊದಲನೆಯ ಪ್ರಶ್ನೆಯ ಉತ್ತರದಲ್ಲಿಯೇ ಕಂಡುಕೊಳ್ಳಬಹುದು. ಸ್ವಾತಂತ್ರ್ಯದ ನಂತರ ಭಾರತೀಯರಿಗೆ ಅಧಿಕಾರದ ಅನೇಕ ಅವಕಾಶಗಳು ಉಂಟಾದವು. ಅವುಗಳನ್ನು ಅರ್ಹತೆಯ ಮೇಲೆ ಪಡೆಯಲು ಶಕ್ಯವಿಲ್ಲದ ಜನ ಸ್ವಾರ್ಥಕ್ಕಾಗಿ ಜಾತೀಯತೆಯನ್ನು ಬಳಸಿಕೊಳ್ಳಲಿಕ್ಕೆ ಪ್ರಾರಂಭಿಸಿದರು. ಅದು ಪರಿಣಾಮಕಾರಿಯಾಗಿ ಅನುಕೂಲವಾದ್ದರಿಂದ ದಿನ ದಿನಕ್ಕೆ ಬೆಳೆಯುತ್ತಾ ಹೋಗಿರುವುದು. ಇಲ್ಲಿ ಧರ್ಮಕ್ಕೂ ಜಾತಿಗೂ ಇರುವ ಭೇದವನ್ನು ಈ ಅಧಿಕಾರ ಲಾಲಸೆಯ ವರ್ಗ ಮರೆತುಬಿಟ್ಟಿದೆ. ಧರ್ಮದ ನಿಜವಾದ ಜ್ಞಾನ ಪ್ರಸಾರ ಮಾಡಲು ನಮ್ಮ ಧರ್ಮಪೀಠಗಳು ತಪ್ಪಿರುತ್ತವೆಂದು ಹೇಳಿದರೆ ತಪ್ಪಾಗಲಾರದು.

೫. ನಮ್ಮ ಸಂವಿಧಾನವು ಜಾತ್ಯತೀತವಾದರೂ ಅದು ಧರ್ಮಬಾಹಿರವೆಂದು ನಾನು ನಂಬುವುದಿಲ್ಲ. ಭಾರತದೇಶ ವೇದಕಾಲದಿಂದಲೂ ತನ್ನ ಉದಾತ್ತ ಧರ್ಮದ ಆದೇಶವನ್ನು ಜಗತ್ತಿಗೆ ಬೀರಿದೆ. ರಾಜಕಾರಣಿಗಳು ತಾವು ಜಾತ್ಯತೀತರು ಎನ್ನುವುದನ್ನು ಎತ್ತಿ ತೋರಿಸುವ ಗಡಿಬಿಡಿಯಲ್ಲಿ ಧರ್ಮವನ್ನೇ ಮರೆತು, ಧರ್ಮದ ಬಗ್ಗೆ, ನಮ್ಮ ಜೀವನದ ಅನೇಕ ರಂಗಗಳಲ್ಲಿ ಯೋಗ್ಯಸ್ಥಾನ ಕೊಡದಿರುವುದೇ ಜಾತೀಯತೆ ಬೆಳೆಯಲು ಕಾರಣವಾಗಿದೆ.

೬. ಇದನ್ನು ಒಪ್ಪಲಿಕ್ಕಾಗುವುದಿಲ್ಲ. ಪ್ರಜಾಪ್ರಭುತ್ವದ ಪ್ರಯೋಗದ ಬಾಲ್ಯಾವಸ್ಥೆಯಲ್ಲಿ ಇಂಥ ಪರಿಸ್ಥಿತಿ ಉಂಟಾಗುವುದು ಸ್ವಾಭಾವಿಕ. ಜನತೆಯಲ್ಲಿ ಜ್ಞಾನ-ಪ್ರಸಾರ ಹೆಚ್ಚಿದಂತೆ ಅದು ಮರೆಯಾಗುತ್ತದೆ.

೭ ಬಹುಮಟ್ಟಿಗೆ ಕಾರಣವಾಗಿವೆ. ಸರಕಾರಗಳಾಗಲೀ ರಾಜಕೀಯ ಪಕ್ಷಗಳಾಗಲೀ ರಾಜಕೀಯ ಧುರೀಣರಾಗಲೀ ಅಧಿಕಾರವನ್ನು ಯಾವ ಕಾಲಕ್ಕೂ ಹೇಗಾದರೂ ಮಾಡಿ ತಮ್ಮ ಹಿಡಿತದಲ್ಲಿಯೇ ಇಟ್ಟುಕೊಳ್ಳಬೇಕೆಂಬ ಮಹತ್ವಾಕಾಂಕ್ಷೆಯೇ ಜಾತೀಯತೆಯ ಹೆಚ್ಚಳಕ್ಕೆ ದಾರಿಮಾಡಿಕೊಟ್ಟಿದೆ.

೮. ಜಾತಿಗಳ ನಿರ್ಮೂಲನವೊಂದೇ ಜಾತೀಯತೆಯ ಸಮಸ್ಯೆಗೆ ಪರಿಹಾರ ಮಾರ್ಗವೆಂದು ಒಪ್ಪಲಿಕ್ಕಾಗುವುದಿಲ್ಲ. ಅಲ್ಲದೆ ಜಾತಿ ಪಂಥಗಳ ಪೂರ್ಣ ನಿರ್ಮೂಲನೆ ಅಸಾಧ್ಯ. ಈಗ ಬೆಳೆಯುತ್ತಿರುವ ಧಾರ್ಮಿಕ, ಜಾತೀಯ ಸಂಸ್ಥೆಗಳಿಗೆ ಸಾರ್ವಜನಿಕ ಜೀವನದಲ್ಲಿ ಅವಾಸ್ತವ ಪ್ರಾಮುಖ್ಯತೆ ಕೊಡುವುದನ್ನು ಸರಕಾರ, ರಾಜಕೀಯ ಪಕ್ಷಗಳು, ಸಾರ್ವಜನಿಕ ಮುಖಂಡರು ಬಿಟ್ಟದ್ದಾದರೆ ಅವು ತಮ್ಮಿಂದ ತಾವೇ ಮಾಯವಾಗುತ್ತವೆ.

೯. ಸಾಧ್ಯ.

ನಮ್ಮ ಸಾರ್ವಜನಿಕ ಜೀವನದ ಪ್ರತಿರಂಗದಲ್ಲಿಯೂ ಧೈರ್ಯದಿಂದ ಗುಣಕ್ಕೆ ಪ್ರಾಧಾನ್ಯ ಕೊಡುವುದೇ ಏಕೈಕ ಮಾರ್ಗ. ಇದರರ್ಥ ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕವಾಗಿ ದುರ್ಬಲ ಗುಂಪುಗಳಿಗೆ ರಕ್ಷಣೆ ಕೊಡಬಾರದೆಂದಲ್ಲ. ಆದರೆ ಅದು ಒಂದು ನಿರ್ದಿಷ್ಟವಾದ ಪ್ರಮಾಣದಲ್ಲಿರಬೇಕು. ಮತ್ತು ಅಂಥ ಗುಂಪುಗಳಿಗೆ ಪ್ರಾತಿನಿಧ್ಯ ಕೊಡುವುದರಲ್ಲಿ ಸಹ ಅವರಲ್ಲಿಯೇ ಹೆಚ್ಚಿನ ಗುಣವಂತರನ್ನು ಆರಿಸುವ ಪರಿಪಾಠ

# ಜಾತೀಯತೆ: ಆದರಿಂದ ನಿವೃತ್ತಿ ಸಾಧ್ಯವೇ?

(ಪ್ರಶ್ನಾವಳಿ ನೋಡಿರಿ-ಪುಟ ೪)

(ಬೊಮ್ಮಾಯಿ ಮುಂದುವರಿದದ್ದು)

ಆಗಬೇಕು.

೧೦. ಜಾತೀಯತೆ ಇದೇ ರೀತಿ ಮುಂದರಿದರೆ ನಮ್ಮ ದೇಶದ ಭದ್ರತೆಗೆ ಗಂಡಾಂತರವಲ್ಲದೇ, ನಮ್ಮ ಸ್ವಾತಂತ್ರ್ಯ ಅಳಿದು ಹೋಗಿ ನಾವೊಂದು ಜನಾಂಗವಾಗಿ ಸಹ ಕಣ್ಮರೆಯಾಗಬಹುದು.

೧೧. ಬಹುಮಟ್ಟಿಗೆ ಇಳಿಮುಖವಾಗುವುದೆಂದು ಹೇಳಬಹುದು. ಆದರೆ ಆರ್ಥಿಕ ಸ್ಥಿತಿ ಉತ್ತಮಗೊಳ್ಳುವುದರ ಜೊತೆಗೆ ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ನಿಜ ಧರ್ಮದ ಜ್ಞಾನೋದಯ ಸಹ ಅಷ್ಟೇ ಮಹತ್ವದ್ದು. ಆರ್ಥಿಕ ಏಳಿಗೆಯೊಂದಿಗೆ ಅದೂ ಬೆಳೆದು ಬರುವುದು ಅವಶ್ಯ.

೧೨. ಸಹನೆಯಿಂದ ಅವರು ಇರಬೇಕು. ಯಾಕೆಂದರೆ ಜಾತೀಯತೆಯ ವಾತಾವರಣ ತಾತ್ಕಾಲಿಕ. ಇಂತಹ ತರುಣರು ನಿರಾಶರಾಗದೇ ಧೈರ್ಯದಿಂದ ಅದರ ನಿರ್ಮೂಲನೆಗೆ ಯತ್ನಿಸುವುದೇ ತಮ್ಮ ಯೋಗ್ಯತೆಗೆ ತಕ್ಕ ಮನ್ನಣೆ ಪಡೆಯುವ ಮಾರ್ಗ.

೧೩. ಆರ್ಥಿಕ ಉನ್ನತಿ ಅಂದರೆ ನಮ್ಮ ದೇಶದ ಒಕ್ಕಲುತನ, ಔದ್ಯೋಗಿಕ ಪ್ರಗತಿ ಭರದಿಂದಾಗಿ ಪ್ರತಿಯೊಬ್ಬ ನಾಗರಿಕನಿಗೆ ಅತ್ಯಂತ ಕನಿಷ್ಠ ಜೀವನದ ಅವಶ್ಯಕತೆಗಳು ದೊರೆಯುವಂತೆ ಯೋಚಿಸಿ ಕಾರ್ಯಕ್ರಮ ಕೈಗೊಳ್ಳುವುದು. ಹಾಗೆಯೇ ಸಾರ್ವಜನಿಕ ಅಧಿಕಾರ ಸ್ಥಾನಗಳಿಗೆ ಯೋಗ್ಯತೆಯ ಮೇಲೆ ಅವಕಾಶ ಮಾಡಿಕೊಡುವುದು ಮತ್ತು ನಮ್ಮ ಶಿಕ್ಷಣದಲ್ಲಿ ಜಾತೀಯತೆಯನ್ನು ಎದುರಿಸಲು ನಮ್ಮ ತರುಣರನ್ನು ತರಬೇತಿಗೊಳಿಸುವಂತೆ ಉಚ್ಚ ಮಟ್ಟದ ಧರ್ಮ — ನೀತಿಯನ್ನೊಳಗೊಂಡ ಶಿಕ್ಷಣ ಕೊಡುವ ಏರ್ಪಾಡು ಮಾಡುವುದು. ಇದಲ್ಲದೆ, ಪ್ರತಿ ರಂಗದಲ್ಲಿಯೂ ಗುಣಕ್ಕೆ ಪ್ರಾಧಾನ್ಯ ಕೊಡುವಂತೆ ಸಾರ್ವತ್ರಿಕ ಅಭಿಪ್ರಾಯವನ್ನು ರೂಢಿಸುವುದು. ಈ ಸಮಸ್ಯೆಯ ಪರಿಹಾರಕ್ಕೆ ನಿರ್ದಿಷ್ಟವಾದ, ನಿಶ್ಚಿತವಾದ ಯೋಜನೆ ಕೊಡುವುದು ಕಷ್ಟ. ಆದರೆ ಪ್ರತಿಯೊಬ್ಬ ಭಾರತೀಯನು ಮೊದಲನೆಯದಾಗಿ ತಾನು ಈ ಜಾತೀಯತೆಯ ಭೂತದಿಂದ ದೂರವಿರಲು ಪ್ರತಿಜ್ಞೆಗೈಯಬೇಕು. ಮತ್ತು ತನ್ನ ನಿತ್ಯ ಜೀವನದಲ್ಲಿ ಆಚರಿಸಿ ತನ್ನ ಸುತ್ತ ಮುತ್ತಲಿನ ಜನರ ಮೇಲೆ ಪರಿಣಾಮ ಬೀರಬೇಕು. ಹೀಗೆ ಎಲ್ಲರೂ, ಅದರಲ್ಲಿಯೂ ವಿದ್ಯಾವಂತರು, ರಾಜಕೀಯ ಸಾಮಾಜಿಕ, ಧಾರ್ಮಿಕ ಮುಖಂಡರು ಆಲೋಚಿಸಲಿಕ್ಕೆ, ಆಚರಿಸಲಿಕ್ಕೆ ಪ್ರಾರಂಭಿಸಿದರೆ ತೀವ್ರವಾಗದಿದ್ದರೂ, ಸಾವಕಾಶವಾಗಿಯಾದರೂ ಈ ಸಮಸ್ಯೆಗೆ ಪರಿಹಾರ ದೊರೆಯಬಹುದೆಂದು ನನ್ನ ನಂಬಿಕೆ.

೧೯೬೭ರ ಚುನಾವಣೆಯು ನಮ್ಮ ಮತದಾರರು ಪ್ರಜ್ಞಾವಂತರಾಗಿರುವರೆಂದು ಸೂಚಿಸುತ್ತದೆ. ಚುನಾವಣೆಯ ಪರಿಣಾಮ ಪರಿಶೀಲಿಸಿದರೆ ಪಕ್ಷಕ್ಕಿಂತ ವ್ಯಕ್ತಿಗೆ ಮತ್ತು ಅವನ ಗುಣಕ್ಕೆ ಹೆಚ್ಚು ಪ್ರಾಧಾನ್ಯ ಕೊಡುವ ಮನೋಭಾವ ಕಂಡುಬರುತ್ತದೆ. ಇದೊಂದು ರೀತಿಯ ಆಶಾಕಿರಣ. *

(ಮುಂದಿನ ತಿಂಗಳು ಇನ್ನೂ ಕೆಲವು ಅಭಿಪ್ರಾಯಗಳು)



# ಗಣಕಯಂತ್ರ

ಆಧುನಿಕ ವಿಜ್ಞಾನದ ಅದ್ಭುತಗಳಲ್ಲಿ ಗಣಕ ಯಂತ್ರಗಳು ಅದ್ಭುತತರವಾಗಿವೆ. ಮನುಷ್ಯನ ಮಿದುಳನ್ನು ಅನುಕರಿಸಿ, ಮಿದುಳು ಮಾತ್ರ ಮಾಡಬಲ್ಲದೆಂದು ನಂಬಲಾಗಿದ್ದ ಅನೇಕ ಕಾರ್ಯಗಳನ್ನು ಮಿದುಳಿಗಿಂತಲೂ ವೇಗವಾಗಿ ಮಾಡಬಲ್ಲ ಈ ಯಂತ್ರಗಳು ಅನೇಕ ವಿಚಾರಿಗಳನ್ನು ಚಿಂತೆಗೂ ಈಡುಮಾಡಿವೆ. ಅವುಗಳ ಕಥೆ ಮಿತಿಗಳನ್ನು ಇಲ್ಲಿ ಓದಿರಿ.

## 1 ಅಂಕೆ ತಪ್ಪಿದ ಸಂಖ್ಯೆ

ಒಂದು, ಎರಡು, ಮೂರು ಮುಂತಾದ ಎಣಿಕೆಯ ಸಂಖ್ಯೆಗಳನ್ನು ಮನುಷ್ಯ ಯಾವಾಗ ಕಂಡುಹಿಡಿದನೆಂದು ಖಚಿತವಾಗಿ ಹೇಳುವುದು ಸಾಧ್ಯವಿಲ್ಲ. ಶೈಶವಾವಸ್ಥೆಯಿಂದಲೂ ನಮ್ಮಲ್ಲಿ ಪ್ರತಿಯೊಬ್ಬನ ಬೆಳವಣಿಗೆಯೂ ಸಂಖ್ಯೆಗಳೊಡನೆ ಆಗಿದೆ. ಆದರೆ ಅವುಗಳನ್ನು ಕುರಿತು ನಮ್ಮ ಕಲ್ಪನೆ ನಾವು ತಿಳಿದಿರುವಷ್ಟು ಸುಲಭವಲ್ಲ. ಜ್ಞಾನದ ಪ್ರಾರಂಭದ ದಿನಗಳಲ್ಲಿ ಏನು ನಡೆದಿರಬಹುದು ಎನ್ನುವುದನ್ನು ಈ ಕೆಳಗಿನ ಉದಾಹರಣೆಯು ಸ್ಪಷ್ಟಪಡಿಸುವುದು. ವಾನರ ನರನಾಗುತ್ತಿದ್ದ ದಿನಗಳು. ಇಬ್ಬರಲ್ಲಿ ಒಂದು ಸ್ಪರ್ಧೆ ಮೂಡಿತು. ಅತಿ ದೊಡ್ಡ ಸಂಖ್ಯೆ ಯಾವುದು? ಮೊದಲಿನವನು ದೀರ್ಘಕಾಲ ಚಿಂತಿಸಿ "ಒಂದು" ಎಂದನು. ಎರಡನೆಯವನು ಇನ್ನಷ್ಟು ಹೊತ್ತು ಯೋಚಿಸಿ "ಎರಡು" ಎಂದು ಹಿಗ್ಗಿನಿಂದ ನುಡಿದನು. ಪುನಃ ಮೊದಲನೆಯವನ ಸರತಿ. ಅನೇಕ ದಿವಸಗಳ ನಂತರ ಅವನು "ಮೂರು" ಎಂದು ಹೇಳಿದನು ಎರಡನೆಯವನಿಗೆ ಮುಂದುವರಿಸಲಾಗಲಿಲ್ಲ–ಸೋಲನ್ನು ಒಪ್ಪಿಕೊಂಡನು ಮೊದಲನೆಯವನಿಗೆ ಇದ್ದುದು ಒಂದು ಹೆಂಡತಿ, ಒಂದು ಬಿಡಾರ, ಒಂದು ದನ, ಒಂದು ಆಯುಧ— ಈ ಮೂರ್ತ ವಸ್ತುಗಳಿಗೆ ಸಾಮಾನ್ಯವಾಗಿದ್ದ ಒಂದುತನವೆಂಬ ಅಮೂರ್ತ ಗುಣವನ್ನು ಅರಿಯಲು ಅವನಿಗೆ ಕಾಲಾವಕಾಶ ಬೇಕಾಯಿತು. ಇದೇ ಕಾರಣದಿಂದ ಇತರ ಮೂರ್ತವಸ್ತುಗಳ ಅಮೂರ್ತ ಗುಣವಾದ ಎರಡುತನವನ್ನು ತಿಳಿಯಲು ಮತ್ತು ಅದು ಮೊದಲಿನ ಗುಣಕ್ಕಿಂತ ದೊಡ್ಡದು ಎಂದು ತರ್ಕಿಸಲು ಎರಡನೆಯವನಿಗೆ ಇನ್ನಷ್ಟು ಸಮಯ ಅವಶ್ಯವಾಯಿತು. ಅವರ ತರ್ಕದ ಪರಿಧಿ ಮೂರನ್ನು ದಾಟಲು ಸಮರ್ಥವಾಗಲಿಲ್ಲ. ಅವರು ಮೊದಲು ಕಂಡುಕೊಂಡ ಸಂಖ್ಯೆಗಳೂ ಮತ್ತು ಅದೇ ರೀತಿ ಬೆಳೆದು ಬಂದ ಮುಂದಿನ ಸಂಖ್ಯೆಗಳೂ ಸೇರಿ ಒಂದು ನೂತನ ಅಮೂರ್ತ ಪ್ರಪಂಚವನ್ನೇ ಸೃಷ್ಟಿಸಿದುವು. ಈ ಪ್ರಪಂಚದ ವ್ಯವಹಾರಿಗಳು ಸಂಖ್ಯೆಗಳು. ಅವುಗಳ ಪರಸ್ಪರ ಕ್ರಿಯೆ, ಪ್ರತಿಕ್ರಿಯೆಗಳಿಗೆ (ಕೂಡುವಿಕೆ, ಇತ್ಯಾದಿ) ನಿಯಮಗಳು ವಿಪುಲವಾಗಿ ಬೆಳೆದುವು. ಹೀಗೆ ಮೂರ್ತ ಪ್ರಪಂಚದ ವಾಸ್ತವಿಕತೆಯಿಂದ ಅಮೂರ್ತ ಪ್ರಪಂಚದ ಕಲ್ಪನೆಗಳು ಪ್ರಭಾವಿತಗೊಂಡು ಮುಂದೆ ಸ್ವತಂತ್ರವಾಗಿ ವರ್ಧಿಸಿದುವು. ಅಲ್ಲಿ ಲಭಿಸಿದ ಫಲಿತಾಂಶಗಳು ವಾಸ್ತವಿಕ ಪ್ರಪಂಚದ ಮೇಲೆ ಪ್ರಭಾವ ಬೀರಿದುವು ನಮ್ಮ ಯಾವ ವ್ಯವಹಾರವೂ- ಮಕ್ಕಳ ಸಂಖ್ಯೆ, ರೇಷನ್ ಲೆಕ್ಕ, ನಕ್ಷತ್ರ ಲೋಕ— ಸಂಖ್ಯೆಗಳ ಬಳಸುವಿಕೆ ಇಲ್ಲದೆ ನಡೆಯುವುದಿಲ್ಲ.

ಈ ಕಾರಣದಿಂದ "ದೇವರು ಮಾನವನನ್ನು ಸೃಷ್ಟಿಸಿದ, ಮಾನವ ಸಂಖ್ಯೆಯನ್ನು ಸೃಷ್ಟಿಸಿದ" ಎಂಬ ಉದ್ಗಾರ ಜನಿಸಿದೆ. ಸೃಷ್ಟಿಮಾಡಿದೊಡನೆಯೇ ಮಾನವ ತನ್ನ ಸೃಷ್ಟಿಯಾದ ಸಂಖ್ಯಾ ಪ್ರಪಂಚದ ಮೇಲೆ ಹತೋಟಿ ಕಳೆದುಕೊಂಡ. 37054 × 6349 = ?; 960754—897653 = ? ಇಂಥ ಪ್ರಶ್ನೆಗಳನ್ನು ಉತ್ತರಿಸಲು ಮಿದುಳಿಗೆ ಕಾಲಾವಕಾಶ ಬೇಕು, ಶಿಕ್ಷಣವೂ ಬೇಕು. ಇಲ್ಲಿ ತಪ್ಪು ಘಟಿಸುವ ಸಂಭವವೂ ಸಾಕಷ್ಟಿದೆ.

ತನ್ನ ಸೃಷ್ಟಿಯ ಮೇಲೆ ತನಗೆ ಹಿಡಿತವಿಲ್ಲ—ಈ ಅಪಮಾನವನ್ನು ಮಾನವ ಸಹಿಸಲಾರ. ಸಂಶೋಧನೆ ಮುಂದುವರಿಯಿತು. ಇದರ ಫಲಿತಾಂಶವಾಗಿ ಕೂಡುವಿಕೆ ಮುಂತಾದ ಗಣಿತ ಪರಿಕರ್ಮಗಳನ್ನು ಸುಲಭವಾಗಿ ನೆರವೇರಿಸುವ ಮಣಿಚೌಕಟ್ಟಿನ (abacus) ನಿರ್ಮಾಣವಾಯಿತು. ಇದೇ ಪ್ರಥಮ ಗಣಕಯಂತ್ರ (computer). ಗಣಿಸುವ ಅಥವಾ ಎಣಿಕೆ ಮಾಡುವ ಸಾಧನೆ ಅಥವಾ ರಚನೆಯ ಹೆಸರು ಗಣಕಯಂತ್ರ, ಸಂಕ್ಷೇಪವಾಗಿ ಗಣಕ. ಇಲ್ಲಿ ಗಣನೆ, ಎಣಿಕೆ ಎಂಬ ಪದಗಳನ್ನು ವಿಶಾಲಾರ್ಥದಲ್ಲಿ ಬಳಸಲಾಗಿದೆ. ಒಂದು ಉದಾಹರಣೆಯನ್ನು ಪರಿಶೀಲಿಸಿ.

ನನ್ನ ಎದುರು ಒಂದು ಸಮಸ್ಯೆ ಇದೆ. ನಾನೊಬ್ಬ ಯುನಿವರ್ಸಿಟಿ ಪ್ರಾಧ್ಯಾಪಕ. ವರ್ಷ ಮೂವತ್ತು. ಅವಿವಾಹಿತ. ಜಾತಿ, ಮತ, ಕುಲಾಚಾರಗಳಲ್ಲಿ ನನಗೆ ನಂಬಿಕೆ ಇಲ್ಲ. ಗಣಿತಶಾಸ್ತ್ರ ಪದವೀಧರೆ, ಇಪ್ಪತ್ತೈದು ವರ್ಷ ಪ್ರಾಯ ಮೀರದ, ಸ್ಫುರದ್ರೂಪಿ ಭಾರತೀಯ ಕನ್ಯೆಯನ್ನು ನಾನು ಮದುವೆಯಾಗಬೇಕೆಂದಿದ್ದೇನೆ. ಅವಳೆಲ್ಲಿದ್ದಾಳೆ?

"ಎಲ್ಲಿರುವೆ ಕನ್ಯೆ ಬಾರೇ ?" ಎಂದು ಬೆಹಾಗ್ ರಾಗದಲ್ಲಿ ಹಾಡುತ್ತ ಅರಸುವುದು ಒಂದು ಮಾರ್ಗ. ದಿನಪತ್ರಿಕೆಯಲ್ಲಿ ಜಾಹೀರಾತು ಪ್ರಸಿದ್ಧಿಸಿ ಮುಂದುವರಿಸುವುದು ಎರಡನೆಯ ಹಾದಿ. ಈ ಸಮಸ್ಯೆಯನ್ನು ಗಣಿತರೀತ್ಯಾ ವಿಶ್ಲೇಷಿಸುವುದು ಸಾಧ್ಯವಾದರೆ ? ನನ್ನ ಆವಶ್ಯಕತೆಗಳು, ಒಲವು, ನಿಲುವು ಇವುಗಳನ್ನು ಗಣಿತ ಸಂಕೇತಗಳಿಂದ ನಿರೂಪಿಸಿ, ಸಮಗ್ರವಾಗಿ ನನ್ನ ಸಮಸ್ಯೆಯನ್ನು ಈ ಸಂಕೇತಗಳ ನಾಡಿನಲ್ಲಿ ಒಂದು ಗಣಿತೋಕ್ತಿಯಾಗಿ ಬರೆಯಬಹುದು.

'ಕಸ್ತೂರಿ'ಯಲ್ಲಿ ಅಚ್ಚಾಗಿರುವ, ನಾವು ಮಾತಾಡುವ ವಾಕ್ಯಗಳೆಲ್ಲವೂ ದೈನಂದಿನ ವ್ಯವಹಾರದಲ್ಲಿ ವಿನಿಮಯವಾಗುತ್ತಿರುವ ಭಾಷೆ. ಇದು ನಮ್ಮ ಮಿದುಳಿಗೆ ಉಣಿಸು ಎಂದು ಹೇಳಬಹುದು. ಗಣಿತೋಕ್ತಿಯೇ ಉಣಿಸಾಗಿರುವ ಒಂದು ಮಹಾ ಮಿದುಳು ಇದ್ದರೆ, ನನ್ನ ಸಮಸ್ಯೆಯನ್ನು ಅದಕ್ಕೆ ಉಣಿಸಿ ಅದರಿಂದ ಪರಿಹಾರ ಪಡೆಯುವುದು ಸಾಧ್ಯವಿದೆ. ಅಂದರೆ, ಆ

ಅಮೆರಿಕೆಯ ಸ್ಟ್ಯಾನ್‌ಫೋರ್ಡ್ ಸಂಶೋಧನಾಲಯ ತಯಾರಿಸಿದ ಒಂದು ಗಣಕಯಂತ್ರ.



ಮಿದುಳು ಹಲವಾರು ಅನುರೂಪ ಕನ್ಯೆಯರ ವಿಳಾಸ, ವಿವರ ನನಗೆ ನೀಡಬಲ್ಲುದು. ಮುಂದಿನ ದಾರಿ ಸ್ಪಷ್ಟವಾಗಿದೆ.

ಈ ಮಹಾ ಮಿದುಳೇ ಗಣಕ. ಗಣಿತೋಕ್ತಿ ಅದರ ಉಣಿಸು. ಇದೇನೂ ಭ್ರಮೆ ಅಲ್ಲ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ Matches are made in the heaven (ಈ ಗಂಡಿಗೆ ಈ ಹೆಣ್ಣು ಎಂದು ದೇವರು ಮೊದಲೇ ನಿರ್ಧರಿಸಿರುತ್ತಾನೆ) ಎಂಬ ನಾಣ್ಣುಡಿ ಇಂದು Matches are made by the computers (ಗಣಕಗಳು ಭಾವೀ ದಂಪತಿಗಳನ್ನು ನಿರ್ಧರಿಸುತ್ತವೆ) ಎಂದು ಪರಿವರ್ತನೆಗೊಂಡಿದೆ. ಅಲ್ಲಿ ಗಣಕವು ಒಂದು ವಿವಾಹ ವಿನಿಮಯ ಕೇಂದ್ರವಾಗಿ ಬಿಟ್ಟಿದೆ ವಿವಾಹೇಚ್ಛುಗಳು ತಮ್ಮ ವಿಶಿಷ್ಟ ವಿವರಗಳನ್ನೂ, ಆವಶ್ಯಕತೆಗಳನ್ನೂ ಅದಕ್ಕೆ ಮೊದಲೇ ಉಣಿಸಿರುವರು. ಇಂಥ ವಿವರಗಳು (ದತ್ತಾಂಶಗಳೆಂದು ಇವುಗಳನ್ನು ಕರೆಯುವುದಿದೆ) ಅದರ 'ಮಿದುಳಿ'ನಲ್ಲಿ ಸಂಗೃಹೀತವಾಗಿರುತ್ತವೆ. ಅಂದರೆ 'ನೆನಪಿ'ನ ಕವಾಟದಲ್ಲಿ ಹುದುಗಿರುತ್ತವೆ. ಹೊಸಬನೊ(ಳೊ)ಬ್ಬ ಬಂದು ತನ್ನ ಸಮಸ್ಯೆಯನ್ನು ಗಣಕದ ಮುಂದಿಟ್ಟಾಗ–ಅಂದರೆ, ಅದಕ್ಕೆ ಉಣಿಸಿದಾಗ— ಆ ಕ್ಷಣ ಗಣಕ ತನ್ನ ನೆನಪಿನ ಮೂಲೆಯಿಂದ ಬೇಕಾದ ವಿವರವನ್ನು ಹೆಕ್ಕಿ ಹೊರತೆಗೆದು ಸಮಸ್ಯೆಗೆ ಪರಿಹಾರ ನೀಡುತ್ತದೆ.

ಆದ್ದರಿಂದ ಗಣಿಸುವುದು, ಗಣನೆ, ಎಣಿಕೆ (to compute) ಎಂದರೆ ಸಮಸ್ಯೆಗಳನ್ನು ಸೂಚಿಸುವ ಸಂಕೇತಗಳ ಅಭ್ಯಾಸ, ಪರಿಹಾರ ಎಂದು ಮುಂತಾಗಿ ಹೇಳಬಹುದು.

## 2 ಗಣಕಯಂತ್ರ ಎಂದರೇನು ?

1850 ರಲ್ಲಿ ಸಂಖ್ಯೆಗಳ ಕೂಡುವಿಕೆಯನ್ನು ಸುಲಭವಾಗಿ ನೆರವೇರಿಸುವ ಒಂದು ಯಂತ್ರವನ್ನು ಶೋಧಿಸಿದರು ಮುಂದೆ ಇದರ ಸುಧಾರಿತ ರೂಪವಾಗಿ 1887ರಲ್ಲಿ ಕಾಂಪ್ಟೋಮೀಟರ್ ಎಂಬ ಯಂತ್ರ ಬಳಕೆಗೆ ಬಂದಿತು. ಈ ಯಂತ್ರಕ್ಕೆ ಒಂದು ಮುದ್ರಣವ್ಯವಸ್ಥೆಯನ್ನು ಜೋಡಿಸಿದರು. ಇದರ ಸಹಾಯದಿಂದ ಯಂತ್ರವು ಉತ್ತರಗಳನ್ನು ಮುದ್ರಿಸಿ ನೀಡುವುದು ಸಾಧ್ಯವಾಯಿತು ಕಾಂಪ್ಟೋಗ್ರಾಫ್ ಎಂದು ಇದನ್ನು ಕರೆದರು (1889). 1920ರ ಸುಮಾರಿಗಿನ್ನಷ್ಟು ಪರಿಷ್ಕೃತ ಕಾಂಪ್ಟೋಗ್ರಾಫ್ ಯಂತ್ರಗಳು ವಿದ್ಯುಚ್ಛಕ್ತಿಯ ಸಹಾಯದಿಂದ ಕೆಲಸ ಮಾಡಲು ಆರಂಭಿಸಿದುವು. ಈ ಸುಧಾರಣೆಯಿಂದ ಕಾಂಪ್ಟೋಗ್ರಾಫಿನ ಕಾರ್ಯವೇಗ ಅತ್ಯಧಿಕವಾಗಿ ವರ್ಧಿಸಿತು. ಇದರೊಂದಿಗೆ ನೂತನ ಪರಿಷ್ಕರಣಗಳು ಆಶ್ಚರ್ಯಕರವಾದ ರೀತಿಯಲ್ಲಿ ಬೆಳೆದುವು. ಹೀಗೆ ಪರಿಷ್ಕೃತಗೊಂಡ ಯಂತ್ರದ ಹೆಸರು ಕಂಪ್ಯೂಟರ್ ಎಂದು ಬದಲಾಯಿತು. ಇದೇ ಗಣಕ.

1940 ರಲ್ಲಿ ಪ್ರಥಮ ಆಧುನಿಕ ರೀತಿಯ ಗಣಕ ನಿರ್ಮಾಣವಾಯಿತು. ಒಂದು ನಿರ್ದಿಷ್ಟ ಸಮಸ್ಯೆಯ ಪರಿಹಾರ ಇದರ ಉದ್ದೇಶ. ಉದಾಹರಣೆ— ಬೆಂಗಳೂರು ನಗರದಲ್ಲಿ ಸಂಚಾರ ವ್ಯವಸ್ಥೆಯನ್ನು ಅತಿ ದಕ್ಷವಾಗಿ ಏರ್ಪಡಿಸುವುದು ಹೇಗೆ? ಸಿನಿಮಾ ಮಂದಿರದಲ್ಲಿ ಆಸನವ್ಯವಸ್ಥೆಯನ್ನು ಸಮರ್ಪಕವಾಗಿಡುವುದು ಹೇಗೆ? ಇವು ನಿರ್ದಿಷ್ಟ ಸಮಸ್ಯೆಗಳು. ಇಂಥ ಒಂದೊಂದು ಸಮಸ್ಯೆಗೆ ಪರಿಹಾರ ನೀಡಲು ಒಂದೊಂದು ಗಣಕವನ್ನು ನಿರ್ಮಿಸಬೇಕು. ಸಮಸ್ಯೆಗೆ ಅನುಗುಣವಾದ ರಚನೆ. ಒಂದು ನಿರ್ದಿಷ್ಟ ಉದ್ದೇಶದ ಪೂರೈಕೆಗಾಗಿ ರಚಿತವಾದ ಗಣಕ ಇನ್ನೊಂದು ಉದ್ದೇಶವನು ಸಾಧಿಸುವಂತಿಲ್ಲ. ಆದ್ದರಿಂದ ಇಂಥ ರಚನೆಗಳ ಉಪಯೋಗ ಮಿತವಾಗಿದೆ. ಎಲ್ಲ ವಿಧದ ಸಮಸ್ಯೆಗಳನ್ನೂ ಪರಿಹರಿಸಲು ಶಕ್ಯವಾಗುವಂತಹ ಒಂದೇ ಗಣಕವನ್ನು ನಿರ್ಮಿಸುವುದು ಸಾಧ್ಯವಾದೀತೇ ಎಂಬುದು ಮುಂದಿನ ವಿಚಾರ. 1944 ರಲ್ಲಿ ವಿವಿಧೋದ್ದೇಶಗಳಿಗೆ ಮೀಸಲಾದ ಒಂದು ಸಾಮಾನ್ಯ ಗಣಕದ ರಚನೆ, ಪೂರ್ಣಗೊಂಡಿತು. ಸಾಮಾನ್ಯ ಗಣಕವು ಗಣಿತದ ವಿವಿಧ ಸಮಸ್ಯೆಗಳನ್ನು ಸ್ವೀಕರಿಸಿ, ಅವುಗಳಿಗೆ ಅತಿಕ್ಷಿಪ್ರ ವೇಳೆಯಲ್ಲಿ ಪರಿಹಾರ ನೀಡಲು ಸಮರ್ಥವಾದ ಒಂದು ರಚನೆ. ಗಣಿತ ವಿದ್ವಾಂಸರುಗಳು ಹಲವಾರು ದಿವಸಗಳಲ್ಲಿ ಸಾಧಿಸಲಾಗದ ಪ್ರಮೇಯಗಳನ್ನು ಸಾಮಾನ್ಯ ಗಣಕ ಸೆಕೆಂಡುಗಳಲ್ಲಿ ಸಾಧಿಸುವುದು. ಇದರಿಂದ

ವಿಜ್ಞಾನದ ಮುನ್ನಡೆಗೆ ಅದೆಂಥ ವೇಗೋತ್ಕರ್ಷ ಲಭ್ಯವಾಯಿತು ಎಂದು ಊಹಿಸಿಕೊಳ್ಳಬಹುದು.

ಗಣಕವನ್ನು "ಮನುಷ್ಯನ ಮಿದುಳಿನ ವಿಸ್ತರಣೆ", "ಬೃಹನ್ಮಿದುಳು" ಎಂದು ಮುಂತಾಗಿ ಹೇಳುವುದುಂಟು. ಇಂದು ಗಣಕಗಳು ನಿರ್ವಹಿಸುವ ಕ್ರಿಯೆಗಳ ಸ್ಥೂಲ ವಿವರಗಳು ಹೀಗಿವೆ. ಜಟಿಲ ಗಣಿತ ಸಮೀಕರಣಗಳ ಬಿಡಿಸಿಕೆ; ಪರಮಾಣು ರಿಯಾಕ್ಟರುಗಳ ವರ್ತನೆಯ ಗಣನೆ; ನೆಗೆಯಲು ಸಿದ್ಧವಾಗಿರುವ ಒಂದು ಕ್ಷಿಪಣಿಯ ಅಥವಾ ವಿಮಾನದ ಆಚರಣೆಯ ಭವಿಷ್ಯ ನುಡಿಯುವುದು; ವಿದ್ಯುಚ್ಛಕ್ತಿ ಬಿಲ್‌ಗಳನ್ನೂ ಸಂಬಳದ ಚೀಟಿಗಳನ್ನೂ ನಿಯತ ಕಾಲದಲ್ಲಿ ತಯಾರು ಮಾಡುವುದು; ರಾಕೆಟ್‌ಗಳ ಮತ್ತು ನಿರ್ದೇಶಿತ ಕ್ಷಿಪಣಿಗಳ ಹಾರಾಟದ ನಿಯಂತ್ರಣ; ಹವೆಯ ಮುನ್ಸೂಚನೆ; ದೈತ್ಯ ಬಾಂಬರ್ ವಿಮಾನಗಳು ಹಾರುವುದರ ಮಾದರಿಗಳನ್ನು ನೆಲದ ಮೇಲೆ ಅನುಕರಿಸಿ ಸಮಸ್ಯೆಗಳಿಗೆ ಪರಿಹಾರ ಸೂಚಿಸುವುದು; ಸೈನಿಕರ ತುಕ್ಕಡಿಗಳನ್ನು ಅತಿ ದಕ್ಷವಾಗಿ ಅಣಿಗೊಳಿಸುವ ವಿಧಾನಗಳನ್ನು ತಿಳಿಸುವುದು; ಪೆಟ್ರೋಲಿಯಂ ಮತ್ತು ರಾಸಾಯನಿಕ ಶುದ್ಧೀಕರಣದ ನಿಯಂತ್ರಣ; ಆರ್ಥಿಕ ಪರಿಸ್ಥಿತಿಗಳ ಭವಿಷ್ಯ; ಚುನಾವಣಾ ಫಲಿತಾಂಶಗಳ ಮುನ್ಸೂಚನೆ; ತಪಶೀಲು ಪಟ್ಟಿಗಳ ನಿಯಂತ್ರಣ; ಪೂರ್ವಯೋಜಿತ ಕ್ರಮದಲ್ಲಿ ಯಂತ್ರದ ಹತ್ಯಾರುಗಳನ್ನು ಬಳಸುವುದು; ಅಪವ್ಯಯವು ಕನಿಷ್ಠ ಪ್ರಮಾಣದಲ್ಲಿರುವಂತೆ ವಸ್ತುಗಳ ಪೂರೈಕೆಯ ನಿರ್ವಹಣೆ; ಭೌತಶಾಸ್ತ್ರ ತಾಂತ್ರಿಕ ರಚನಾಶಾಸ್ತ್ರ ಮುಂತಾದುವುಗಳಲ್ಲಿ ಬರುವ ಸಮಸ್ಯೆಗಳಿಗೆ ಪರಿಹಾರ; ಅಧಿಕ ಲಾಭ ಬರುವಂತೆ ಯಾವ ಯಾವ ಸಾಮಗ್ರಿಗಳ ಮಾರಾಟ ಮಾಡಬಹುದೆಂಬ ಸೂಚನೆ; ಜೈವಿಕ ಮತ್ತು ದೈಹಿಕ ಕ್ರಿಯೆಗಳ ಸಂಬಂಧಗಳ ಅನ್ವೇಷಣೆ; ಜಲಾಂತರ್ಗಾಮಿ ನೌಕೆಗಳ ಮತ್ತು ಉಪಗ್ರಹಗಳ ಕಕ್ಷೆಗಳ ನಿಯಂತ್ರಣ; ಗಣಿತಶಾಸ್ತ್ರದ ಉತ್ಪನ್ನಗಳ ಬೆಲೆಗಳ ಯಾದಿಯನ್ನು ಅತಿ ಕ್ಷಿಪ್ರವಾಗಿ ತಯಾರಿಸಿ ಮುದ್ರಿಸುವುದು; ಒಂದು ವಿಮಾನ ಸಂಚಾರ ವ್ಯವಸ್ಥೆಯಲ್ಲಿ ಒಂದು ಊರಿನಿಂದ ಇನ್ನೊಂದು ಊರಿಗೆ ಹೋಗುವ ಪ್ರಯಾಣಿಕರ ಆಸನಗಳನ್ನು ಸಮರ್ಪಕವಾಗಿ ಹೊಂದಾಣಿಕೆ ಮಾಡುವುದು; ಸ್ವಯಂಚಾಲಿತ ಕಾರ್ಖಾನೆಗಳು; ಸ್ವತಂತ್ರ ಯೋಚನಾಶಕ್ತಿಯ ಮೂಲಕ ಸಮಸ್ಯೆಗಳಿಗೆ ಪರಿಹಾರ ನೀಡುವುದು.

ಈ ವಿವರಗಳಿಂದ ಗಣಕಗಳನ್ನು ಒಂದು ವಿಧದ ಸರ್ವಜ್ಞ, ಸರ್ವಶಕ್ತ ರಚನೆಯೆಂದೇನೂ ಭಾವಿಸಬೇಕಾಗಿಲ್ಲ. ಯಾವುದೇ ಒಂದು ಗಣಕವೂ ಅದನ್ನು ರಚಿಸಿರುವ ಉದ್ದೇಶ ಅಥವಾ ಉದ್ದೇಶಗಳ ವ್ಯಾಪ್ತಿಯೊಳಗೆ ಮಾತ್ರ ಕ್ರಿಯೆ ನಡೆಸುವುದು. ಹೀಗೆ ನಡೆಸುವ ಕ್ರಿಯೆಗೆ ಬೇಕಾಗುವ ಮೂಲ ದ್ರವ್ಯ ಅಥವಾ 'ಆಹಾರ'ವನ್ನು- ಅಂದರೆ ಸಮಸ್ಯೆಯ ಸಾಂಕೇತಿಕ ರೂಪವನ್ನು ಒಬ್ಬ ಮನುಷ್ಯನೇ ನೀಡಬೇಕು. ಗಣಕದ ಬಿಡಿಭಾಗಗಳಲ್ಲಿ ದೋಷ ಉಂಟಾಗಿ ಅದರ ಕ್ರಿಯಾಶಕ್ತಿ ಕುಂಠಿತಗೊಂಡರೆ ಅಥವಾ ಹಾಳಾದರೆ ಅದನ್ನು ಮನುಷ್ಯನೇ ನಿವಾರಿಸಬೇಕು. ಅಲ್ಲದೇ ಮನುಷ್ಯ ಗಣಕದ ಜನಕ; ಯಾವ ಗಣಕವೂ ಮನುಷ್ಯನ ಅಥವಾ ಇನ್ನೊಂದು ಗಣಕದ ಜನಕವಲ್ಲ.

## 3 ಗಣಕ ಕ್ರಿಯೆ

ಗಣಕಗಳು ನಿರ್ವಹಿಸುವ ಕ್ರಿಯೆಗಳು ವಿವೇಚನಾ ಕ್ರಮ ಅನ್ವಯವಾಗುವ ಎಲ್ಲ ಮಾನವೀಯ ಚಟುವಟಿಕೆಗಳನ್ನೂ ಒಳಗೊಂಡಿವೆ ಎಂದು ಮೇಲಿನ ಸಂಕ್ಷೇಪ ಯಾದಿಯಿಂದ ವ್ಯಕ್ತವಾಗುವುದು. ಅಂಗೀಕೃತವಾದ ಹಲವಾರು ಮೂಲ ದತ್ತಾಂಶಗಳಿಂದ ತೊಡಗಿ ವಿವಿಧ ನೂತನ ಸಿದ್ಧಾಂತಗಳನ್ನೂ ತೀರ್ಮಾನಗಳನ್ನೂ ತಾರ್ಕಿಕವಾಗಿ ಪಡೆಯುವ ವಿಧಾನವನ್ನು ವಿವೇಚನಾ ಕ್ರಮವೆನ್ನುತ್ತೇವೆ. ಉದಾಹರಣೆ—

1. ವನಸ್ಪತಿಗಳಲ್ಲಿ ಪೌಷ್ಟಿಕಾಂಶಗಳು ಇಲ್ಲ.
2. ಪೌಷ್ಟಿಕಾಂಶವಿಲ್ಲದ ಕೊಬ್ಬಿನ ಸೇವನೆಯಿಂದ ಹೃದ್ರೋಗ ಬರುವುದು
3. ಡಾಲ್ಡಾ ವನಸ್ಪತಿಯು ಅಧಿಕ ಪೌಷ್ಟಿಕಾಂಶಗಳಿಂದ ಕೂಡಿದೆ.

ಈ ಮೂರು ಉಕ್ತಿಗಳನ್ನು ನಿಜವೆಂದು

ಅಂಗೀಕರಿಸಿದರೆ (ಎಲ್ಲವನ್ನೂ ನಿಜವಲ್ಲವೆಂದು ಅಥವಾ ಕೆಲವು ನಿಜ ಕೆಲವು ನಿಜವಲ್ಲ ಎಂದೂ ಅಂಗೀಕರಿಸಬಹುದು – ಹೀಗೆ ಅಂಗೀಕರಿಸಿದ ಮೇಲೆ ಇವು ಮೂಲದತ್ತಾಂಶಗಳಾಗುವುವು.) ಅವುಗಳ ಪರಿಣಾಮವಾಗಿ ದೊರೆಯುವ ಕೆಳಗಿನ ಉಕ್ತಿಯೂ ನಿಜವೇ ಆಗಿರುವುದು—

4. ಡಾಲ್ಡಾ ವನಸ್ಪತಿಯು ಅಧಿಕ ಪೌಷ್ಟಿಕಾಂಶಗಳಿಂದ ಕೂಡಿರುವುದರಿಂದ ಅದರ ಸೇವನೆಯಿಂದ ಹೃದ್ರೋಗ ಬರುವುದಿಲ್ಲ.

ಈ ತೀರ್ಮಾನವನ್ನು ತಾರ್ಕಿಕವಾಗಿ ಪಡದಿದ್ದೇವೆ. ಹೀಗೆ ತೀರ್ಮಾನವನ್ನು ಪಡೆಯುವ ವಿಧಾನವನ್ನು ವಿವೇಚನಾಕ್ರಮವೆಂದು ಕರೆಯುತ್ತೇವೆ ವಿವೇಚನಾಕ್ರಮ ಒಂದು ಸ್ಪಷ್ಟ ನಿಯಮಾನುಸಾರ ಮುಂದುವರಿಯುವ ವಿಧಾನ. ಇಲ್ಲಿ ಕಾರ್ಯ ಕಾರಣ ಸಂಬಂಧಗಳು ಸ್ಪಷ್ಟವಾಗಿವೆ. ಇಂಥ ಸ್ಪಷ್ಟಕ್ರಿಯೆಗಳ ಕ್ಷೇತ್ರದಲ್ಲಿ ಗಣಕವು ಕ್ರಮಬದ್ಧವಾಗಿ, ಮನುಷ್ಯನಿಗಿಂತ ಅದೆಷ್ಟೋ ಕ್ಷಿಪ್ರವಾಗಿ ಕೆಲಸ ಮಾಡಿ, ಫಲಿತಾಂಶ ನೀಡುವುದು. ಈಚೆಗೆ ಎಪೊಲ್ಲೊ-8 ಎಂಬ ಆಕಾಶನೌಕೆ ಮೂರು ಜನ ನಾವಿಕರ ಸಮೇತ ಚಂದ್ರನಿಗೆ ಪ್ರದಕ್ಷಿಣೆ ಮಾಡಿ ಸುರಕ್ಷಿತವಾಗಿ ಭೂಮಿಗೆ ಮರಳಿದೆ ('ಕಸ್ತೂರಿ' ಫೆಬ್ರುವರಿ 1969). ಗಣಕಗಳ ನೆರವು ಇಲ್ಲದಿರುತ್ತಿದ್ದರೆ ಈ ಮಹಾಯಾನ ಪ್ರಾರಂಭವೇ ಆಗುತ್ತಿರಲಿಲ್ಲ.

ಒಂದು ಸ್ವಯಂಚಾಲಿತ ಗಣಕವು ಕ್ರಿಯೆಯೆಸಗುವ ವಿಧಾನದ ಸ್ಥೂಲ ವಿವರ ಹೀಗಿದೆ. ಗಣಕವು ಪರಿಹರಿಸಬೇಕಾದ ಸಮಸ್ಯೆಯನ್ನು ಒಂದು ವಿಶಿಷ್ಟ ಕ್ರಮದಲ್ಲಿ, ಸಾಂಕೇತಿಕ ಭಾಷೆಯಲ್ಲಿ ಬರೆಯಬರೆಯಬೇಕು. ಈ ಕ್ರಮಕ್ಕೆ "ಕಾರ್ಯಕ್ರಮ" (programme) ಎಂದು ಹೆಸರು. ಜಟಿಲ ಸಮಸ್ಯೆಯನ್ನು ಪರಿಹರಿಸುವಾಗ ಗಣಕವು ಅನುಸರಿಸಬೇಕಾದ ಮಾರ್ಗವನ್ನೂ ಸರಣಿಗಳನ್ನೂ ನಿವಾರಿಸಿಕೊಂಡು ಮುಂದುವರಿಯುವ ಏರ್ಪಾಡನ್ನೂ ಈ ಕಾರ್ಯಕ್ರಮದಲ್ಲಿ ಮೊದಲೇ ನಿರೂಪಿಸಿರಬೇಕು. ಹೀಗೆ ಪೂರ್ಣ ಸಿದ್ಧಗೊಳಿಸಿದ ಕಾರ್ಯಕ್ರಮ ಒಂದು ವ್ಯವಸ್ಥಿತ ರೀತಿಯಲ್ಲಿ ರಂಧ್ರಗಳನ್ನು ಕೊರೆದ ಕಾಗದದ ಹಾಳೆಯಲ್ಲಿರುವುದು. ಇದನ್ನು ಸಿದ್ಧಪಡಿಸುವ ವ್ಯಕ್ತಿ "ಕಾರ್ಯಕ್ರಮ ಸಹಾಯಕ" (programme assistant). ಈ ಹಾಳೆಯನ್ನು ಗಣಕದ 'ಬಾಯಿ'ಗೆ (ಸ್ವೀಕರಿಸುವ ಸ್ಥಳ) "ಆಹಾರ" ವಾಗಿಟ್ಟು ಒಂದು ಗುಂಡಿಯನ್ನು ಒತ್ತಬೇಕು. ಅಂದರೆ ಈಗ ಸಮಸ್ಯೆಯನ್ನು ಗಣಕಕ್ಕೆ ಉಣಿಸಿದಂತಾಯಿತು. ಗಣಕದಲ್ಲಿ ಪ್ರವಹಿಸುವ ಚೈತನ್ಯ ವಿದ್ಯುಚ್ಛಕ್ತಿ. ಈ ಚೈತನ್ಯದ ಉಪಯೋಗದಿಂದ ಗಣಕವು "ಆಹಾರವನ್ನು ಸೇವಿಸಿ" ಅಥವಾ ಆ ರಂಧ್ರಪೂರಿತ ಕಾಗದವನ್ನು "ಓದಿ" ತನ್ನ "ಉದರ" ದೊಳಗಿರುವ ಬೇರೆ ಬೇರೆ ಬಿಡಿ ಭಾಗಗಳಿಗೆ ಕಾರ್ಯಕ್ರಮದಲ್ಲಿ ವಿಧಿಸಿರುವ ಆದೇಶಗಳ ಪ್ರಕಾರ "ಜೀರ್ಣ" ಮಾಡಲು ರವಾನಿಸಿಬಿಡುವುದು. ಪ್ರತಿಯೊಂದು ಬಿಡಿ ಭಾಗವೂ ಅದರದರ ಕಾರ್ಯಭಾಗವನ್ನು ಕ್ರಮಬದ್ಧವಾಗಿ ವಿದ್ಯುದ್ವೇಗದಿಂದ ನಿರ್ವಹಿಸುವುದು. ಹೀಗೆ ಮಾಡುವಾಗ ಗಣಕವು ಅದರ "ನೆನಪಿ"ನ ಸಂಗ್ರಹದಿಂದ ಅನುಭವಗಳನ್ನು ಪಡೆಯುತ್ತದೆ. ಈ ರೀತಿಯಲ್ಲಿ ಪರಿಷ್ಕೃತವಾದ ಸಮಸ್ಯೆಯ ತುಣುಕುಗಳು ಸಮಗ್ರವಾಗಿ ಎರಕಗೊಂಡು, ಪರಿಹಾರವಾಗಿ "ನಿರ್ಗಮನ" ದ್ವಾರದ ಮೂಲಕ ಸಾಂಕೇತಿಕ ಲಿಪಿಯಲ್ಲಿ (ರಂಧ್ರಪೂರಿತ ಕಾಗದದ ಹಾಳೆ) ಕಾರ್ಯಕ್ರಮ ಸಹಾಯಕನಿಗೆ ದೊರೆಯುವುದು. ಒಂದು ಭಾರಯಂತ್ರದ ಮೇಲೆ ನಿಂತು ಕೀಲುಕಿಂಡಿಗೆ ಹತ್ತು ಪೈಸಾ ನಾಣ್ಯ ತೂರಿದರೆ ಕೂಡಲೇ ನಮ್ಮ ಭಾರವನ್ನು (ಅದೃಷ್ಟವನ್ನು ಕೂಡಾ!) ನೀಡುವ ಕಾರ್ಡು ದೊರೆಯುವ ಚಿತ್ರವನ್ನು ಸ್ಮರಿಸಿ— ಇದೂ ಒಂದು ರೀತಿಯ ಗಣಕ ಕ್ರಿಯೆಯೇ.

ಆದ್ದರಿಂದ ಗಣಕವು ತಾರ್ಕಿಕವಾಗಿ ಕ್ರಿಯೆಯನ್ನು ನಡೆಸುವ ಒಂದು ಯಂತ್ರ; ಅದಕ್ಕೆ ಉಣಿಸಿದ ದತ್ತಾಂಶಗಳ ಆಧಾರದ ಮೇಲೆ, ಪೂರೈಸಿದ ಕಾರ್ಯಕ್ರಮದ ಅನುಸಾರವಾಗಿ, ಅತಿ ಕ್ಷಿಪ್ರ ವೇಳೆಯಲ್ಲಿ ಕಾರ್ಯ ನಿರ್ವಹಿಸಿ, ನಾವು ವಿಧಿಸಿರುವ ಚೌಕಟ್ಟಿನೊಳಗೆ ಸಂಗತವಾದ ಪರಿಹಾರವನ್ನು ನೀಡುವುದು ಎಂದು ಹೇಳಬಹುದು. "ನಾವು ವಿಧಿಸಿರುವ ಚೌಕಟ್ಟು" ಎಂಬ ಪದಪುಂಜ ನಮ್ಮ ಜೀವನದ ದೈನಂದಿನ ವ್ಯವಹಾರ

ಗಳಲ್ಲಿಯೂ ಸತ್ಯವಾಗಿದೆ. "ಸೂರ್ಯನು ಪೂರ್ವ ದಿಕ್ಕಿನಲ್ಲಿ ಹುಟ್ಟುವನು" ಎಂಬುದು ಜನತೆ ಯುಗಯುಗಾಂತರಗಳಿಂದ ವಿಧಿಸಿ ಆಚರಿಸಿಕೊಂಡು ಬಂದಿರುವ ಸಂಪ್ರದಾಯ; ಈ ಚೌಕಟ್ಟಿನ ಒಳಗೆ "ಸೂರ್ಯ ಪಶ್ಚಿಮದಲ್ಲಿ ಹುಟ್ಟುವನು" ಎಂದರೆ ಅದು ಸುಳ್ಳಾಗುವುದು.

## 4 ನೆನಪು-ಭೂತಕಾಲ ವರ್ತಮಾನವಾದಾಗ

ನೆನಪು ಅಂದರೆ ಅನುಭವಗಳ ಸಂಗ್ರಹ ಮತ್ತು ಈ ಸಂಗ್ರಹದಿಂದ ಬೇಕಾದ ಅಂಶ ನಿರ್ದಿಷ್ಟ ಗಳಿಗೆಯಲ್ಲಿ ಯುಕ್ತ ಪ್ರಮಾಣದಲ್ಲಿ ಲಭಿಸುವ ಸೌಕರ್ಯ.

"ನಿನ್ನನ್ನು ಎಲ್ಲಿಯೋ ನೋಡಿದಂತಿದೆ" ಎಂದು ನೆನಪಿನ ಉಗ್ರಾಣದಲ್ಲಿ ಪರಡುವುದು ನಮ್ಮ ದೈನಂದಿನ ಅನುಭವ. ಇಲ್ಲಿ ನಿರ್ದಿಷ್ಟ ಗಳಿಗೆಯಲ್ಲಿ ನಮಗೆ ಬೇಕಾದ ಅಂಶ ದೊರೆಯುಲಿಲ್ಲ. ನೆನಪು ಚುರುಕಾಗಿರುವವರಿಗೆ, ಪ್ರಯತ್ನದಿಂದ ಅದನ್ನು ಬೆಳೆಸಿಕೊಂಡು ಬಂದವರಿಗೆ, ಈ ತರಹದ ಗಲಿಬಿಲಿ ಉಂಟಾಗುವುದಿಲ್ಲ. ನೆನಪಿನ ಆಧಾರದಿಂದ ಗಣಿತದ ಜಟಿಲ ಸಮಸ್ಯೆಗಳಿಗೆ ಪರಿಹಾರ ಪಡೆಯಲು ಮಿದುಳಿಗೆ ಸಾಧ್ಯವಾಗುವುದು. 436798 × 3542 = ? ಎಂಬ ಗುಣಾಕಾರದ ಲೆಕ್ಕವನ್ನು ಪರಿಶೀಲಿಸಬಹುದು. ಇಲ್ಲಿ 2, 4, 5, 3 ರ ಮಗ್ಗಿ ನೆನಪಿನ ದಾಸ್ತಾನಿನಿಂದ ಸರಿಯಾದ ಗಳಿಗೆಯಲ್ಲಿ ಯುಕ್ತ ಪ್ರಮಾಣದಲ್ಲಿ ಹೊರಗೆ ಜಿಗಿಯಬೇಕು. ಅದೇ ರೀತಿ ಆಯಾ ಗುಣಲಬ್ಧಗಳನು ಬರೆಯುವ ಕ್ರಮ, ಕೂಡುವಿಕೆಯ ಸೂತ್ರಗಳು, ಸಮಾವೇಶಗೊಳ್ಳಬೇಕು. ಇವೆಲ್ಲ ಪರಿಕರ್ಮಗಳ ಸಮಗ್ರ ಪರಿಣಾಮವಾಗಿ ಈ ಜಟಿಲ ಗುಣಾಕಾರ ಕ್ರಿಯೆಯು ನೆರವೇರುವುದು. ಪ್ರತಿಯೊಂದು ಸಲವೂ ಕೂಡುವಿಕೆಯ ಹಳೆಯ ರಾಗದಿಂದಲೇ, ಮಗ್ಗಿಯ ಸಾಮೂಹಿಕ ಗಾನದಿಂದಲೇ ನಾವು ಆರಂಭಿಸುವುದಾದರೆ ಇಂಥ ಮುಂದುವರಿದ ಕೆಲಸಗಳು ನಮ್ಮಿಂದ ಸಾಧ್ಯವಾಗಲಾರವು.

ಗಣಕಕ್ಕೂ ಇದೇ ತತ್ತ್ವ ಅನ್ವಯವಾಗುವುದು. ಗಣಕವು ಅನುಭವದ ಸಂಗ್ರಹ ಮಾಡಬೇಕು—ಅದು ಗಣಕದ ನೆನಪು. ಯುಕ್ತ ಮುಹೂರ್ತದಲ್ಲಿ ಈ ನೆನಪಿನ ಉಪಯೋಗ ಗಣಕಕ್ಕೆ ಲಭಿಸುವ ತಾಂತ್ರಿಕ ಏರ್ಪಾಡು ಇರಬೇಕು. ಒಂದು ಆಕಾಶ ನೌಕೆಯ ಪಥವನ್ನು ನಿಯಂತ್ರಿಸುವ ಕ್ಲಿಷ್ಟ ಕಾರ್ಯವನ್ನು ಗಣಕಕ್ಕೆ ವಹಿಸಲಾಗಿದೆ ಎಂದು ಊಹಿಸೋಣ. ಈ ಸಮಸ್ಯೆಯ ಪರಿಹಾರದಲ್ಲಿ ಪದೇ ಪದೇ ಎದುರಾಗುವ ಒಂದು ಪರಿಮಾಣ ಭೂಮಿಯ ಗುರುತ್ವಾಕರ್ಷಣ ಶಕ್ತಿ. ಇದನ್ನು G ಎಂದು ಬರೆಯುವುದಿದೆ. ವಿವಿಧ ಔನ್ನತ್ಯಗಳಲ್ಲಿ g ಯ ಬೆಲೆ ಎಷ್ಟು ಎನ್ನುವುದು ಗಣಕದ ನೆನಪಿನಲ್ಲಿ ಮೊದಲೇ ಸಂಗ್ರಹಗೊಂಡಿರಬೇಕು; ಮತ್ತು ಅವಶ್ಯವಾದಾಗ ಅದರ ಬೆಲೆ ದೊರೆಯುವಂತೆಯೂ ಇರಬೇಕು. ಇಂಥ ವಿವಿಧ ದತ್ತಾಂಶಗಳನ್ನು ಗಣಕದ ನೆನಪಿನಲ್ಲಿ ಸಂಗ್ರಹಿಸಿ ಇಡಲಾಗುವುದು. ಈ ನೆನಪು ಒಂದು ಮ್ಯಾಗ್ನೆಟಿಕ್ ಟೇಪ್ (magnetic tape) ಆಗಿರಬಹುದು; ಅಥವಾ ಬೇರೆಯೇ ಒಂದು ವಿಧದ ರಚನೆಯೂ ಆಗಿರಬಹುದು. (ಆಕಾಶವಾಣಿಯಲ್ಲಿ ಧ್ವನಿಮುದ್ರಣಗಳಿರುವಂತಹ ರಚನೆ) ಇಂಥ ಮುದ್ರಣ ಗಣಕದ ನೆನಪಿನಲ್ಲಿ ಒಂದು ಸಲ ಆಯಿತೆಂದರೆ ಅದನ್ನು ಅಳಿಸದಿದ್ದರೆ ಅದು ಮಾಸಲಾರದು. ಆದ್ದರಿಂದ ಮನುಷ್ಯನ ನೈಸರ್ಗಿಕ ಕೊರತೆ (?) ಎನ್ನಿಸಿರುವ ಮರೆವು ಗಣಕಕ್ಕೆ ಇರುವುದಿಲ್ಲ.

ಗಣಕದ ನೆನಪು ಇಷ್ಟು ನಿಶಿತವಾಗಿದ್ದರೆ ಅದು ಮನುಷ್ಯನಂತೆ ಯೋಚನೆ ಮಾಡಬಲ್ಲುದೇ? ಗಣಕಕ್ಕೆ ಉಣಿಸುವ ಕಾರ್ಯಕ್ರಮದಲ್ಲಿ ಯೋಚನೆಗೆ ಅವಕಾಶ ಮಾಡಿಕೊಟ್ಟರೆ ಅದು ಈ ಕ್ರಿಯೆಯನ್ನೂ ನಿರ್ವಹಿಸುವುದು. ಆದರೆ ಇಲ್ಲಿ ಯೋಚನೆ ಎಂಬ ಪದದ ವ್ಯಾಪ್ತಿಯನ್ನು ನಿರ್ದಿಷ್ಟಗೊಳಿಸುವುದು ಅವಶ್ಯ. ಒಂದು ನಿಶ್ಚಿತ ಪಥದಲ್ಲಿ ಸಾಗುತ್ತಿರುವ ಉಪಗ್ರಹಕ್ಕೆ ಅಕಸ್ಮಾತ್ತಾಗಿ ವಿಪತ್ತು ಒದಗಿ ಬಂದಾಗ ಅದು ಏನು ಮಾಡಬೇಕು? ಈ ಸಂದರ್ಭದಲ್ಲಿ ಗಣಕವು ಅದರ ನೆನಪಿನ ಸಹಾಯದಿಂದ ವಿಪತ್ತನ್ನು ನಿವಾರಿಸುವ ಹೊಸದಾರಿಯನ್ನು ಕಂಡುಕೊಳ್ಳಬಲ್ಲುದು. ಅಷ್ಟರ ಮಟ್ಟಿಗೆ ಗಣಕಕ್ಕೆ ಯೋಚಿಸಿ

ನಿರ್ಧರಿಸುವ ಸಾಮರ್ಥ್ಯವಿದೆ. ಇಲ್ಲಿ ಗಣಕ ಮಾಡುವ ಕೆಲಸ ಇಷ್ಟು—ಒದಗಿರುವ ವಿಪತ್ತನ್ನು ತಾರ್ಕಿಕವಾಗಿ ವಿಶ್ಲೇಷಿಸಿ, ಅದರ ಪರಿಹಾರಕ್ಕಾಗಿ ದಾರಿಗಳನ್ನು (ಪುನಃ ತಾರ್ಕಿಕವಾಗಿಯೇ) ಪರಾಮರ್ಶಿಸಿ, ಒಂದು ತಾರ್ಕಿಕ ತೀರ್ಮಾನವನ್ನು (ಗಣಕದ ರಚನೆಯ ಕಾರ್ಯಕ್ರಮದ ಚೌಕಟ್ಟಿನ ಮಿತಿಯೊಳಗೆ) ನೀಡುವುದು. ಇಷ್ಟು ಕ್ರಿಯೆ ಒಂದು ಸೆಕೆಂಡಿನ ಅತಿ ಸೂಕ್ಷ್ಮ ಭಾಗ ಕಾಲದಲ್ಲಿ ನೆರವೇರಿ ಹೋಗುವುದು.

ನಾವು ರೂಢಿಯಲ್ಲಿ ಬಳಸುವ ಪದ 'ಯೋಚನೆ'ಯಲ್ಲಿ ಎರಡು ವಿಧ—ಒಂದು ತಾರ್ಕಿಕ, ಇನ್ನೊಂದು ಸೃಷ್ಟಿಕಾರಕ. ನಾವು ವಿಧಿಸಿರುವ ಚೌಕಟ್ಟಿನ ಪರಿಮಿತಿಯಲ್ಲಿ ಕ್ರಿಯೆ ನಡೆಸುವುದು, ಅದರಿಂದ ಲಭಿಸಿದ ಅನುಭವದ ಉಪಯೋಗವನ್ನು ಮುಂದೆ ಪಡೆಯುವುದು ಮುಂತಾದುವು ತಾರ್ಕಿಕ ಯೋಚನೆಯ ಪರಿಧಿಯ ಒಳಗೆ ಬರುವುವು ಇದೊಂದು ವಿಧದ ಗಣಿತ ಕ್ರಿಯೆ. ಇಲ್ಲಿ ರಾಗ, ದ್ವೇಷ, ಉದ್ವೇಗ, ಹರ್ಷ, ಭಾವುಕತೆ ಮುಂತಾದ ಮಾನವೀಯ ಗುಣಗಳಿಗೆ ಪ್ರವೇಶವಿಲ್ಲ. ಚೌಕಟ್ಟಿನ ಬಂಧನದಿಂದ (ಅದು ಸ್ವಯಂನಿರ್ಮಿತವೇ ಆಗಿರಬಹುದು) ಮುಕ್ತವಾಗಿ, ಸ್ವತಂತ್ರವಾಗಿ ವಿಚಾರಿಸುವ ಶಕ್ತಿ ಸೃಷ್ಟಿಕಾರಕ ಯೋಚನೆಯ ವಿಭಾಗಕ್ಕೆ ಸೇರುವುದು. ಇದು ಸ್ಪಷ್ಟವಾಗಿ ಮನುಷ್ಯನ ಕ್ಷೇತ್ರಕ್ಕೆ ಮಾತ್ರ ಮೀಸಲು. ಈ ಸಾಮರ್ಥ್ಯದ ಫಲವಾಗಿ ಸಂಖ್ಯಾಪ್ರಪಂಚ ರೂಪುಗೊಂಡು ಮುಂದೆ ಗಣಕ ನಿರ್ಮಾಣ ಸಾಧ್ಯವಾಯಿತು ಗಣಕಗಳಿಂದ ಪರಿಹರಿಸಲಾಗದ ಸಮಸ್ಯೆಗಳಿಗೆ ಪರಿಹಾರ ಹುಡುಕುವ ಸೃಷ್ಟಿಕಾರಕ ಚಿಂತನೆಯನ್ನು ಪುನಃ ಮಾನವನೇ ಮಾಡಬೇಕು. ಆದ್ದರಿಂದ ಸೃಷ್ಟಿಕಾರಕ ಯೋಚನೆ ನಿಸರ್ಗ ನಿರ್ಮಿತ ಗಣಕವಾದ ಮನುಷ್ಯನದೇ ಕ್ಷೇತ್ರ; ಮನುಷ್ಯನ ವಿಶಿಷ್ಟ ಕ್ಷೇತ್ರ.

## 5 ಗಣಕದ ಭಾಷೆ

ಗಣಕದ ಭಾಷೆ ತಿಳಿಯುವ ಮೊದಲು ಭಾಷೆ ಬೆಳೆದು ಬಂದಿರುವ ರೀತಿಯನ್ನು ಸ್ವಲ್ಪ ಪರಿಶೀಲಿಸುವುದು ಆವಶ್ಯಕ. ಬೆಳವಣಿಗೆಯ ಒಂದನೆಯ ಸೋಪಾನದಲ್ಲಿ ಭೌತಿಕ ವಸ್ತುಗಳೂ ಅವುಗಳ ಗುಣಗಳೂ ಇವೆ. ಇವುಗಳ ಅನುಭವವನ್ನು ನಾವು ಪಂಚೇಂದ್ರಿಯಗಳ ಮೂಲಕ ಪಡೆಯುತ್ತೇವೆ. ಎರಡನೆಯ ಸೋಪಾನದಲ್ಲಿ ಇವುಗಳಿಗೆ ಹೆಸರುಗಳನ್ನು ನೀಡಿ, ಆಯಾ ಹೆಸರಿನಿಂದ ಆಯಾ ವಸ್ತುವನ್ನು ನಿರ್ದೇಶಿಸಲು ಕಲಿಯುತ್ತೇವೆ. ಇಂಥ ಪ್ರಯೋಗದಿಂದ, ವಸ್ತು ಅಥವಾ ತತ್ಸಂಬಂಧ ಗುಣ ಎದುರು ಇಲ್ಲದಿರುವಾಗಲೂ ಅದರ ಕಲ್ಪನೆ ನಮ್ಮ ಮತ್ತು ಕೇಳುವವರ ಮನದಲ್ಲಿ ಮೂಡುವುದು ಸಾಧ್ಯವಿದೆ. ಹೆಸರುಗಳು (ಪದಗಳೆಂದು ಇವುಗಳನ್ನು ಕರೆಯೋಣ) ಎಲ್ಲರೂ ಒಪ್ಪಿ ಬೆಳೆಸಿಕೊಂಡು ಬಂದಿರುವ ಒಂದು ನಿರ್ದಿಷ್ಟ ಕ್ರಮಾನುಸಾರ ಜೋಡಣೆಗೊಂಡು ವಾಕ್ಯಗಳಾದುವು. ಹೀಗೆ, ಕ್ರಮ (ವ್ಯಾಕರಣ)ಬದ್ಧವಾದ ಪದಗಳ ಜೋಡಣೆ ವಾಕ್ಯ (ಅಥವಾ ಭಾಷೆ) ಮನಸ್ಸಿನ ಭಾವವನ್ನು ಪ್ರಕಟಿಸುವ ಸಾಧನ. ಆದ್ದರಿಂದ, ಮನುಷ್ಯ ಎಂಬ ಜೀವಂತ ಗಣಕದ ಭಾಷೆ, ಒಂದು ಜನಸಮುದಾಯ ಒಟ್ಟಾಗಿ ಒಪ್ಪಿ ಪರಂಪರೆಯಿಂದ ರೂಪಿಸಿಕೊಂಡು ಬಂದಿರುವ ಒಂದು ವ್ಯಾವಹಾರಿಕ ಭಾಷೆ. ವಾಸ್ತವಿಕತೆಯ ಸಂಕೇತ ಭಾಷೆ.

ಇದೇ ರೀತಿ ಗಣಕಕ್ಕೂ ಒಂದು ಭಾಷೆ ಇರಬೇಕಷ್ಟೆ. ಗಣಕದಲ್ಲಿ ಕ್ರಿಯೆ ನಡೆಸುವ ಚೈತನ್ಯ ವಿದ್ಯುಚ್ಛಕ್ತಿ. ಆ ಚೈತನ್ಯಕ್ಕೆ ಮತ್ತು ಅದರಿಂದ ಚಾಲನೆ ಪಡೆಯುವ ವಿವಿಧ ಬಿಡಿ ಭಾಗಗಳಿಗೆ ನಮ್ಮ ವ್ಯಾವಹಾರಿಕ ಭಾಷೆ ಅರ್ಥವಾಗಲಾರದು. ಕನ್ನಡ ನಾಡಿನ ಬಂಧುವಿನ ಮುಂದೆ ಅಲ್ಬೇನಿಯಾ ಭಾಷೆಯಲ್ಲಿ ಏನು ಹೇಳಿದರೂ ಹೇಗೆ ಅರ್ಥವಾಗಲಾರದೋ ಅದಕ್ಕಿಂತ ಕಠಿನ ಪರಿಸ್ಥಿತಿ ಇಲ್ಲಿ. ವಿದ್ಯುಚ್ಛಕ್ತಿಗೆ ಅರ್ಥವಾಗುವ ಪರಿಭಾಷೆಯನ್ನು ನಾವು ಕಂಡುಹಿಡಿದು, ಆ ಭಾಷೆಗೆ ನಮ್ಮ ಭಾವನೆಯನ್ನು ತರ್ಜುಮಿಸಿ, ಅದನ್ನು ಗಣಕಕ್ಕೆ ಉಣಿಸಬೇಕು. ವಿದ್ಯುಚ್ಛಕ್ತಿಯ ಧರ್ಮವೆಂದರೆ ಒಂದೋ ಅದು ಪ್ರವಹಿಸುವುದು ಅಥವಾ ಪ್ರವಹಿಸುವುದಿಲ್ಲ. ಅಂದರೆ, ಗುಂಡಿ (switch) ಒತ್ತಿರುತ್ತೇವೆ (on) ಅಥವಾ ಬಿಟ್ಟ

ರುತ್ತೇವೆ (off). ಈ ಒತ್ತು-ಬಿಡು (on-off) ಇವುಗಳ ನಡುವಿನ ಅಥವಾ ಇವುಗಳಿಂದ ಹೊರಗಿನ ಕ್ರಿಯೆ ಎಂಬುದು ವಿದ್ಯುಚ್ಛಕ್ತಿಯ ಪ್ರವಾಹ ನಿಯಮದಲ್ಲಿ ಇಲ್ಲ. "ಬಿಡು"ವನ್ನು ಸೊನ್ನೆ (0) ಎಂದೂ, "ಒತ್ತು"ನ್ನು ಒಂದು (1) ಎಂದೂ ಸಂಕೇತಿಸೋಣ. ಇಲ್ಲಿ 0 ಮತ್ತು 1 ಎಂಬ ಎರಡೇ ಅಂಕಿಗಳಿರುವ ಒಂದು ಹೊಸ ಸಂಖ್ಯಾಪ್ರಪಂಚವನ್ನು ನಾವು ಪ್ರವೇಶಿಸುತ್ತೇವೆ. ಈ ಪ್ರಪಂಚದ ಹೆಸರು ದ್ವಯಾಂಶ ಪದ್ಧತಿ. ಇಲ್ಲಿಯೂ ನಮ್ಮ ಚಿರಪರಿಚಿತ ಕೂಡುವಿಕೆ, ಕಳೆಯುವಿಕೆ ಮುಂತಾದ ಗಣಿತ ಪರಿಕರ್ಮಗಳನ್ನು ಮಾಡಬಹುದು. ನಿಯಮಗಳು ದಶಮಾಂಶ ಪದ್ಧತಿಯವೇ. ಆದರೆ ಫಲಿತಾಂಶಗಳು ಬೇರೆ. ಕೆಳಗಿನ ಪಟ್ಟಿಯಲ್ಲಿ ದ್ವಯಾಂಶ ಮತ್ತು ದಶಮಾಂಶ ಪದ್ಧತಿಗಳ ಸಂಖ್ಯೆಗಳನ್ನು ಒಂದಕ್ಕೊಂದು ಹೊಂದಿಸಿ ಬರೆಯಲಾಗಿದೆ.

| ದ್ವಯಾಂಶ ಪದ್ಧತಿಯಲ್ಲಿ | ದಶಮಾಂಶ ಪದ್ಧತಿಯಲ್ಲಿ |
|---|---|
| 0 | 0 |
| 1 | 1 |
| 10 | 2 |
| 11 | 3 |
| 100 | 4 |
| 101 | 5 |
| 110 | 6 |
| 111 | 7 |
| 1000 | 8 |
| 1001 | 9 |
| 1010 | 10 |
| 1011 | 11 |
| 1100 | 12 |
| 1101 | 13 |
| 1110 | 14 |
| 1111 | 15 |
| 10000 | 16 |
| 10001 | 17 |
| 10010 | 18 |
| 10011 | 19 |

| ದ್ವಯಾಂಶ | ದಶಮಾಂಶ |
|---|---|
| $111 + 1001 = 10000$ | $7 + 9 = 16$ |
| $1010 - 111 = 11$ | $10 - 7 = 3$ |
| $100 \times 11 = 1100$ | $4 \times 3 = 12$ |
| $1111 \div 11 = 101$ | $15 \div 3 = 5$ |

ದ್ವಯಾಂಶ ಪದ್ಧತಿಯಲ್ಲಿ 10, 101, 111 ಮುಂತಾದವುಗಳನ್ನು ಕ್ರಮವಾಗಿ ಒಂದು ಸೊನ್ನೆ, ಒಂದು ಸೊನ್ನೆ ಒಂದು, ಒಂದು ಒಂದು ಒಂದು ಎಂದು ಓದಬೇಕು.

ಜಾರ್ಜ್ ಬೂಲ್ ಎಂಬ ಬ್ರಿಟಿಶ್ ಗಣಿತ ಮತ್ತು ತರ್ಕಶಾಸ್ತ್ರಜ್ಞನು (1815-1864) "ಬೂಲಿಯನ್ ಆಲ್ಜಿಬ್ರಾ" (ಅವನ ಹೆಸರಿನಿಂದ ಸುಪ್ರಸಿದ್ಧವಾಗಿರುವ ಬೀಜಗಣಿತ) ವನ್ನು ಸಂಶೋಧಿಸಿದ್ದ. ಕೆಲವು ಭಾವನೆಗಳನ್ನು ಸಾಂಕೇತಿಕವಾಗಿ ನಿರೂಪಿಸಿ ಅವುಗಳಿಗೆ ಗಣಿತ ಸೂತ್ರಗಳನ್ನು ಅನ್ವಯಿಸಿ ಕಟ್ಟಿದ ಒಂದು ಹೊಸ ಬೀಜಗಣಿತ ಇದು. ಒಂದು ಉದಾಹರಣೆಯನ್ನು ನೋಡಬಹುದು.

ಕ : ಹುಬ್ಬಳ್ಳಿಯು ಕರ್ನಾಟಕದಲ್ಲಿದೆ.

ಖ : 'ಕಸ್ತೂರಿ' ಶ್ರೇಷ್ಠ ಮಾಸಪತ್ರಿಕೆ.

ಇವೆರಡು ಉಕ್ತಿಗಳೂ ನಿಜವಾಗಿವೆ. ಇವುಗಳನ್ನು ಸಾಂಕೇತಿಕವಾಗಿ ಕ, ಖ ಎಂದು ನಿರೂಪಿಸಿದರೆ ಕ ನಿಜವಾಗಿದೆ, ಖ ನಿಜವಾಗಿದೆ ಎಂದು ಹೇಳಬಹುದು. ಇವುಗಳ ಬದಲು,

ಕ : ಹುಬ್ಬಳ್ಳಿಯು ಮಹಾರಾಷ್ಟ್ರದಲ್ಲಿದೆ.

ಖ : 'ಕಸ್ತೂರಿ' ದೈನಿಕ ಪತ್ರಿಕೆ,

ಎಂದು ಬರೆದರೆ, ಕೂಡಲೇ ಎರಡು ಉಕ್ತಿಗಳೂ ಸುಳ್ಳು ಎಂದೆನ್ನುತ್ತೇವೆ. ಇನ್ನು, ಕ ನಿಜವಾಗಿದ್ದು ಖ ಸುಳ್ಳಾಗಿರುವುದೂ, ಕ ಸುಳ್ಳಾಗಿದ್ದು ಖ ನಿಜವಾಗಿರುವುದೂ ಸಾಧ್ಯ. ಈ ವಿಭೇದಗಳನ್ನು ಕೆಳಗಿನ ಪಟ್ಟಿ ತೋರಿಸುವುದು

| | |
|---|---|
| ಕ—ನಿಜ, | ಖ—ನಿಜ |
| ಕ—ನಿಜ, | ಖ—ಸುಳ್ಳು |
| ಕ—ಸುಳ್ಳು, | ಖ—ನಿಜ |
| ಕ—ಸುಳ್ಳು, | ಖ—ಸುಳ್ಳು |

ಇಂಥ ಎರಡು ಪ್ರಾರಂಭಿಕೋಕ್ತಿಗಳಿಂದ ತೊಡಗಿ ಹಲವಾರು ಸಂಯುಕ್ತೋಕ್ತಿಗಳನ್ನು ರಚಿಸುವುದು ಸಾಧ್ಯವಿದೆ.

ಕ ಅಥವಾ ಖ : ಹುಬ್ಬಳ್ಳಿಯು ಕರ್ನಾಟಕ ದಲ್ಲಿದೆ ಅಥವಾ 'ಕಸ್ತೂರಿ' ಶ್ರೇಷ್ಠ ಮಾಸಪತ್ರಿಕೆ.

ಇದು ಒಂದು ಸಂಯುಕ್ತೋಕ್ತಿ, ಇದರ ಬಿಡಿ ಉಕ್ತಿಗಳಾದ ಕ ಮತ್ತು ಖಗಳ ನಿಜತನ, ಸುಳ್ಳುತನ (ನಿಜಮೌಲ್ಯವೆಂದು ಇದನ್ನು ಕರೆಯುವುದಿದೆ) ವನ್ನವಲಂಬಿಸಿ ಸಂಯುಕ್ತೋಕ್ತಿಯ ನಿಜ ಮೌಲ್ಯವನ್ನು ತಾರ್ಕಿಕವಾಗಿ ತೀರ್ಮಾನಿಸಬಹುದು. ಮೇಲಿನ ಉದಾಹರಣೆಯಲ್ಲಿ 'ಕ ಅಥವಾ ಖ' ಸಂಯುಕ್ತೋಕ್ತಿ ನಿಜವಾಗಿದೆ. ಆದರೆ 'ಹುಬ್ಬಳ್ಳಿಯು ಮಹಾರಾಷ್ಟ್ರದಲ್ಲಿದೆ ಮತ್ತು ಕಸ್ತೂರಿ ಶ್ರೇಷ್ಠ ಮಾಸಪತ್ರಿಕೆ' ಸಂಯುಕ್ತೋಕ್ತಿಯು ಸುಳ್ಳಾಗಿದೆ— ಕಾರಣ, ಇಲ್ಲಿನ ಒಂದನೆಯ ಬಿಡಿ ಉಕ್ತಿ ಸುಳ್ಳು.

ಬೂಲಿಯನ್ ಬೀಜಗಣಿತದಲ್ಲಿ ಸುಳ್ಳನ್ನು ಸೊನ್ನೆಯಿಂದಲೂ ನಿಜವನ್ನು ಒಂದರಿಂದಲೂ ಸೂಚಿಸಿ, ಕ ಮತ್ತು ಖ ಮುಂತಾದ ಬಿಡಿ ಉಕ್ತಿಗಳಲ್ಲಿ ಮೇಲೆ ಬರೆದಿರುವಂತಹ ವಿವಿಧ ಪರಿಕರ್ಮಗಳನ್ನು ಮುಂದುವರಿಸಿಕೊಂಡು ಹೋಗಲಾಗುವುದು. ಇದು ಬೆಳೆದು ಬಂದದ್ದು ಒಂದು ಬೌದ್ಧಿಕ ಹವ್ಯಾಸವಾಗಿ. ಆದರೆ ಮುಂದೆ ಹಲವಾರು ದಶಕಗಳ ನಂತರ ಗಣಕವು ರೂಪಿತವಾದಾಗ ಬೂಲಿಯನ್ ಬೀಜಗಣಿತದ ತಾರ್ಕಿಕ ತೀರ್ಮಾನಗಳೂ ನಿಯಮಗಳೂ ದ್ವಯಾಂಶ ಪದ್ಧತಿಯ ಪರಿಕರ್ಮಗಳೂ ಎರಕಗೊಂಡು ದ್ವಯಾಂಶ ಪದ್ಧತಿ ಗಣಕದ ಪರಿಭಾಷೆಯಾಯಿತು.

ನಮ್ಮ ಮನೆಗೆ ಮುಂದೆ ಒಂದು ಮತ್ತು ಹಿಂದೆ ಒಂದು ಹೀಗೆ ಎರಡು ಬಾಗಿಲುಗಳಿವೆ. ಎರಡು ಬಾಗಿಲುಗಳಿಗೂ ಕರೆಗಂಟೆಯ ಒಂದೊಂದು ಗುಂಡಿಯನ್ನು ಜೋಡಿಸಿ ಆ ಗುಂಡಿಗಳನ್ನು ಒಂದೇ ಕರೆಗಂಟೆಗೆ ಅಳವಡಿಸಿವೆ (ವೆ ಎಂದು ಊಹಿಸಿ. ಆಗ, ಮುಂದಿನ ಅಥವಾ ಹಿಂದಿನ ಗುಂಡಿಯನ್ನು ಅಥವಾ ಅವೆರಡನ್ನೂ ಒತ್ತಿದರೆ ಕರೆಗಂಟೆಯು ಬಾರಿಸುವುದೆಂದೂ ಎರಡನ್ನೂ ಒತ್ತದಿದ್ದರೆ ಅದು ಬಾರಿಸುವುದಿಲ್ಲವೆಂದೂ ಸುಲಭವಾಗಿ ತಿಳಿಯಬಹುದು. ಇದನ್ನು ಒಂದು ಸೂತ್ರರೂಪವಾಗಿ ಬರೆಯಲು ಸಾಧ್ಯವಿದೆ. ಇಲ್ಲಿ '1' ಒತ್ತುವಿಕೆಯನ್ನೂ '0' ಬಿಡುವಿಕೆಯನ್ನೂ ಸೂಚಿಸುವುವು. ಅದೇ ರೀತಿ, ಕರೆಗಂಟೆ ಬಾರಿಸಿದರೆ '1' ಬಾರಿಸದಿದ್ದರೆ '0' ಎಂದೂ ಸೂಚಿಸುತ್ತೇವೆ.

| ಮುಂದಿನ ಗುಂಡಿ | .. | ಹಿಂದಿನ ಗುಂಡಿ | .. | ಕರೆಗಂಟೆ |
|---|---|---|---|---|
| 1 | .. | 1 | .. | 1 |
| 1 | .. | 0 | .. | 1 |
| 0 | .. | 1 | .. | 1 |
| 0 | .. | 0 | .. | 0 |

ಇಂಥ ವ್ಯವಸ್ಥೆ ಗಣಕದ ಪರಿಭಾಷೆಯನ್ನು ರೂಪಿಸುವುದು. ಮೇಲೆ ಬರೆದಿರುವ ಉದಾಹರಣೆಯನ್ನು ಗಣಕದ "ಅಥವಾ ಬಾಗಿಲು" ಎಂದು ಕರೆಯುತ್ತಾರೆ. ಎರಡು ಬೇರೆ ಬೇರೆ ಕ್ರಿಯೆಗಳಲ್ಲಿ ಯಾವುದೇ ಒಂದು ಅಥವಾ ಎರಡೂ ನೆರವೇರಿದಾಗ ಪರಿಣಾಮ ಪೂರ್ಣಗೊಳ್ಳುವುದಾದರೆ ಆ ವ್ಯವಸ್ಥೆಯ ಹೆಸರು "ಅಥವಾ ಬಾಗಿಲು" ಇದೇ ರೀತಿ "ಮತ್ತು ಬಾಗಿಲು" "ಅಲ್ಲ ಬಾಗಿಲು" ಮುಂತಾದುವೂ ಇವೆ

ನಮ್ಮ ಗಣಿತ, ಭೌತಶಾಸ್ತ್ರ, ವಾಣಿಜ್ಯ, ವ್ಯವಹಾರ ಮುಂತಾದ ಸಮಸ್ಯೆ ಏನೇ ಇದ್ದರೂ ಮೊದಲು ಅದನ್ನು ಗಣಕದ ಪರಿಭಾಷೆಗೆ ತರ್ಜುಮಿಸಬೇಕು ಈ ಪರಿಭಾಷೆಯ ಸಂಕೇತಗಳನ್ನು ರಂಧ್ರಪೂರಿತ ಹಾಳೆಗಳ ಮೂಲಕ ಗಣಕಕ್ಕೆ ಉಣಿಸಬೇಕು. ಗಣಕದಿಂದ ದೊರೆತ ಪರಿಹಾರವನ್ನು ವ್ಯಾವಹಾರಿಕ ಭಾಷೆಗೆ ಪುನಃ ತರ್ಜುಮಿಸಬೇಕು. ತರ್ಜುಮೆಯನ್ನು ಕಾರ್ಯಕ್ರಮ ಸಹಾಯಕ ಮಾಡುತ್ತಾನೆ.

## 6 ಗಣಕದ ರೂಪಗಳು

ಎರಡು ವಿಧದ ಗಣಕಗಳಿವೆ— ಒಂದು ಅಂಕಗಣಕ (digital computer); ಇನ್ನೊಂದು ಸಾದೃಶ್ಯಗಣಕ (analogue computer). ಇವುಗಳ ರಚನಾವೈವಿಧ್ಯವನ್ನು ತಿಳಿಯಲು ಒಂದು ಉದಾಹರಣೆಯನ್ನು ಪರಿಶೀಲಿಸಬಹುದು.

ಹುಬ್ಬಳ್ಳಿಯಿಂದ ಧಾರವಾಡಕ್ಕೆ ಎಷ್ಟು ದೂರ? ಈ ಪ್ರಶ್ನೆಗೆ ಎರಡು ಭಿನ್ನರೀತಿಗಳಲ್ಲಿ ಉತ್ತರ ಪಡೆಯಬಹುದು.

ಮೊದಲನೆಯ ರೀತಿಯಲ್ಲಿ ಇಡೀ ದಾರಿಯನ್ನು ನಡೆದು, ಅಳೆದು, ದೂರವನ್ನು ತಿಳಿಯುತ್ತೇವೆ. ಅಂದರೆ ಇಲ್ಲಿ ದಾರಿಯನ್ನು ಬಿಡಿ ಬಿಡಿಯಾಗಿ (ಅಂಕೆ, ಅಂಕೆಗಳಾಗಿ) ಬಿಡಿಸಿ ಒಂದೊಂದರ ಉದ್ದವನ್ನೂ ಪ್ರತ್ಯೇಕವಾಗಿ ಅಳತೆ ಮಾಡಿ ಒಟ್ಟು ದೂರವನ್ನು ಗಣಿಸುತ್ತೇವೆ. ಇಲ್ಲಿ ತಪ್ಪು ಸಂಭವಿಸುವುದು ಕಡಿಮೆ

ಎರಡನೆಯ ರೀತಿಯಲ್ಲಿ ನಾವು ಒಂದು ವಾಹನದಲ್ಲಿ ಕುಳಿತು ಹುಬ್ಬಳ್ಳಿಯಿಂದ ಧಾರವಾಡಕ್ಕೆ ಹೋಗುತ್ತೇವೆ. ಅದರ ವೇಗವನ್ನು ತಿಳಿದು, ಪ್ರಯಾಣದ ಅವಧಿಯಿಂದ ಗುಣಿಸಿದರೆ ದೊರೆಯುವ ಗುಣಲಬ್ಧ ನಮಗೆ ಬೇಕಾದ ಉತ್ತರ. ಅಂದರೆ ಇಲ್ಲಿ ಪ್ರಶ್ನೆಗೆ ಸದೃಶವಾಗುವ ಒಂದು ಯಾಂತ್ರಿಕ ಮಾದರಿಯನ್ನು ಅಥವಾ ಇನ್ನೊಂದು ಯಾಂತ್ರಿಕ ಸಮಸ್ಯೆಯನ್ನು ರಚಿಸಿ ಅದರ ಮೂಲಕ ಉತ್ತರ ಪಡೆಯುತ್ತೇವೆ. ಈ ಕ್ರಮದಲ್ಲಿ ಹೆಚ್ಚಿನ ಸೌಕರ್ಯವಿದೆ ಆದರೆ ತಪ್ಪು ಸಂಭವಿಸುವ ಅಂಶ ಅಧಿಕ.

ಅಂಕಗಣಕವು ಮೊದಲಿನ ಉದಾಹರಣೆಯಲ್ಲಿ ವಿವರಿಸಿದ ರೀತಿಯಲ್ಲಿಯೂ ಸಾದೃಶ್ಯ ಗಣಕವು ಎರಡನೆಯ ಉದಾಹರಣೆಯಲ್ಲಿ ವಿವರಿಸಿದ ರೀತಿಯಲ್ಲಿಯೂ ಕ್ರಿಯೆ ನಡೆಸುವುದು.

ಅಂಕಗಣಕವು ಸರ್ವಶಕ್ತವಾಗಿದೆ. ಅದರ ಸಾಮರ್ಥ್ಯ ಅಪಾರ. ಅದಕ್ಕೆ ಜೋಡಿಸಿರುವ "ನೆನಪಿನ ಉಗ್ರಾಣ" ಹೊಸ ಹೊಸ ಸಮಸ್ಯೆಗಳನ್ನು ಸರಾಗವಾಗಿ ಎದುರಿಸಿ ಪರಿಹಾರ ನೀಡಲು ಶಕ್ತವಾಗಿದೆ ಇದರ ವ್ಯಾಪ್ತಿಗೆ ಒಳಪಡದ ಸಮಸ್ಯೆಯೇ ಇಲ್ಲ. ಈ ಕಾರಣದಿಂದ ಅಂಕ ಗಣಕದ ರಚನೆ ಮಾತ್ರ ಬಲು ಜಟಿಲವಾಗಿದೆ; ಬೆಲೆಯೂ ಅಧಿಕವಾಗಿದೆ.

ಸಾದೃಶ್ಯ ಗಣಕವು ಸರ್ವಶಕ್ತವಲ್ಲ. ಅದನ್ನು ರಚಿಸಿರುವ ಉದ್ದೇಶವನ್ನು ಮಾತ್ರ ಅದು ಸಮರ್ಥವಾಗಿ ನೆರವೇರಿಸಬಲ್ಲುದು ಹೊಸ ಸಮಸ್ಯೆ ಬಂದರೆ ಅದಕ್ಕಾಗಿ ಒಂದು ಹೊಸ ಗಣಕವನ್ನೇ ನಿರ್ಮಿಸಬೇಕು ಒಂದೊಂದು ಭೌತಸಮಸ್ಯೆಗೂ ಅನುರೂಪವಾದ ಒಂದೊಂದು ಬಿಡಿಭಾಗ ಇದರಲ್ಲಿರುವುದರಿಂದ ಭೌತಿಕ ಸಮಸ್ಯೆಯ ಒಂದು ಸಂಕ್ಷೇಪ ಯಾಂತ್ರಿಕ ರೂಪವೇ ಈ ಗಣಕವಾಗಿರುವುದು. ಆದ್ದರಿಂದ ಇದನ್ನು ಒಂದು ಮಾದರಿ ಎಂದು ಪರಿಗಣಿಸಿ ಭೌತಿಕ ಪ್ರಪಂಚದಲ್ಲಿ ಎದುರಾಗಬಹುದಾದಂಥ ವಿಶೇಷ ಪರಿಸ್ಥಿತಿಗಳನ್ನು ಕೃತಕವಾಗಿ ಇಲ್ಲಿ ರಚಿಸಿ ಅವುಗಳ ಅಭ್ಯಾಸವನ್ನು ವಾಸ್ತವಿಕ ಸನ್ನಿವೇಶದಲ್ಲಿ ಮಾಡಬಹುದು ಆದರೆ ಸಮಸ್ಯೆ ದೊಡ್ಡ ಅಥವಾ ಜಟಿಲವಾದಂತೆ ಬಿಡಿಭಾಗಗಳು ವೃದ್ಧಿಗೊಂಡು ಗಣಕ ಅಳತೆ ಮೀರಿ ಬೆಳೆಯುವ ಸಾಧ್ಯತೆಯೂ ಇದೆ.

ಒಟ್ಟಾಗಿ ಹೇಳುವುದಾದರೆ ಜಟಿಲ ಮತ್ತು ವಿವಿಧ ಪ್ರಾಚಲಗಳಿಂದ ಕೂಡಿರುವ ಸಮಸ್ಯೆಗಳ ಪರಿಹಾರಕ್ಕೆ ಅಂಕಗಣಕವೇ ಸರಿ. ನಿರ್ದಿಷ್ಟ ಭೌತ ಸಮಸ್ಯೆಗಳಿಗೆ ಪರಿಹಾರವನ್ನು ಆ ಉದ್ದೇಶಕ್ಕಾಗಿಯೇ ಕಡಿಮೆ ಖರ್ಚಿನಿಂದ ಸುಲಭವಾಗಿ ನಿರ್ಮಿಸಿದ ಸಾದೃಶ್ಯ ಗಣಕದಿಂದ ಪಡೆಯಬಹುದು.

ನಿಮ್ಮ ಭಾರವನ್ನು ತಿಳಿಯಲು ಒಂದು ಸಾದೃಶ್ಯ ಗಣಕ ಸಾಕು. ಆದರೆ ಒಂದು ಆಕಾಶ ನೌಕೆಯ ಪಥವನ್ನು ಕ್ಷಣ ಕ್ಷಣ ನಿಯಂತ್ರಿಸಲು ಒಂದು ಅಂಕಗಣಕವೇ ಬೇಕು. ಇವೆರಡೂ ಅಲ್ಲದೆ ಮೂರನೆಯ ವಿಧದ ಒಂದು ಗಣಕವೂ ಇದೆ. ಅದರಲ್ಲಿ ಅಂಕ ಮತ್ತು ಸಾದೃಶ್ಯಗಣಕಗಳೆರಡರ ಗುಣಗಳನ್ನೂ ಅಳವಡಿಸಿಕೊಳ್ಳಲಾಗಿದೆ. ಇದರ ಹೆಸರು ಮಿಶ್ರಗಣಕ.

## 7 ಗಣಕಗಳು ಏನೇನು ಮಾಡುತ್ತವೆ?

ಗಣಕಗಳು ಇಂದು ಸಾಧಿಸುತ್ತಿರುವ

ವಿಸ್ಮಯಕರ ಚಟುವಟಿಕೆಗಳನ್ನು ಅತಿ ಸಂಕ್ಷೇಪವಾಗಿ ನಿರೂಪಿಸಿದರೂ ಅದೊಂದು ಪ್ರತ್ಯೇಕ ಪುಸ್ತಕವಾದೀತು.

ಸಾಮರ್ಥ್ಯಪೂರಿತ ಯಂತ್ರಗಳು— ಮನುಷ್ಯನ ಅವಯವಗಳು. ಅವುಗಳ ರಚನೆಯ ವೈಶಿಷ್ಟ್ಯಕ್ಕೆ ಅನುಗುಣವಾಗಿ ಭಾರವನ್ನು ಹೊರುತ್ತವೆ ಭಾರ ಒಂದು ಮಿತಿಯನ್ನು ಮೀರಿದ ಮೇಲೆ ಯಂತ್ರಗಳ ಸಹಾಯದಿಂದ ಮಾತ್ರ ಕೆಲಸವನ್ನು ಮಾಡಬೇಕಾಗುವುದು. ಮನುಷ್ಯನ ದೇಹಕ್ಕೆ ಒಂದು ಚೌಕಟ್ಟನ್ನು ಜೋಡಿಸುತ್ತಾರೆ. ಇದು ವಿದ್ಯುತ್ತಿನಿಂದ ಕಾರ್ಯ ನಡೆಸುವುದು. ಒಂದು ಭಾರವನ್ನು ಎತ್ತಲು ವ್ಯಕ್ತಿ ಬಗ್ಗಿ ಕೈ ಮುಂದಾಗುವಾಗ ಈ ಚೌಕಟ್ಟಿನ ಹಿಡಿ ಅಧಿಕ ಚೈತನ್ಯವನ್ನು ಮನುಷ್ಯನ ಕೈಗೆ ಸರಬರಾಜು ಮಾಡುವುದು. ಇದರ ಪರಿಣಾಮವಾಗಿ ಆ ಮನುಷ್ಯ ಅಧಿಕ ಭಾರವನ್ನು ಸುಲಭವಾಗಿ ಎತ್ತಲು ಸಮರ್ಥನಾಗುತ್ತಾನೆ. ಅದನ್ನು ಹೊತ್ತು ನಡೆಯುವಾಗ ಕಾಲುಗಳಿಗೆ ಬೇಕಾದ ಹೆಚ್ಚಿನ ಶಕ್ತಿಯನ್ನು ಅಲ್ಲಿಗೆ ಜೋಡಿಸಿರುವ ಚೌಕಟ್ಟುಗಳು ಪೂರೈಕೆ ಮಾಡುತ್ತವೆ ಇಂಥ ಯಂತ್ರದ ಮೇಲೆ ಅದನ್ನು ಧರಿಸಿ ಬಳಸುವವನಿಗೆ ಸಾಕಷ್ಟು ಹಿಡಿತವಿಲ್ಲದಿದ್ದರೆ ಅವನ ಹಿಡಿತ ಧೃತರಾಷ್ಟ್ರಾಲಿಂಗನವೇ ಆಗಬಹುದು! ಈ ತರದ ಚೌಕಟ್ಟುಗಳನ್ನು ಗಣಕಗಳ ಸಹಾಯದಿಂದ ನಡೆಸುವುದು ಸಾಧ್ಯವೇ ಎಂಬುದನ್ನು ಕುರಿತು ಸಂಶೋಧನೆ ಮುಂದುವರಿದಿದೆ ಇದರಲ್ಲಿ ಫಲಪ್ರಾಪ್ತಿಯಾದರೆ ಚೌಕಟ್ಟಿಗೆ ಆಧಾರವಾಗಿ ಮನುಷ್ಯನ ಆವಶ್ಯಕತೆ ಇರುವುದಿಲ್ಲ.

ಗಣಕಚಾಲಿತ ಕರಗಳು— ಅಣುರಿಯಾಕ್ಟರಿನೊಳಗೆ ನಡೆಸಬೇಕಾದ ಅಪಾಯಕಾರೀ ಕ್ರಿಯೆಗಳು ಸಾಕಷ್ಟಿವೆ. ಮನುಷ್ಯ ಅದನ್ನು ಪ್ರವೇಶಿಸಿ ಈ ಕೆಲಸ ನಡೆಸುವುದರಿಂದ ಅವನಿಗೆ ಅಣುವಿಕಿರಣದಿಂದ ಹಾನಿ ತಟ್ಟುವುದು ಇದರಿಂದ ಪಾರಾಗಲೂ ಬೇಕು; ಕೆಲಸ ನಡೆಯಲೂ ಬೇಕು ಪರಿಹಾರ?

ಕಾದು ಕುದಿಯುತ್ತಿದೆ ಲೋಹರಸ. ಅಲ್ಲಿ ರಾಸಾಯನಿಕ ಮಿಶ್ರಣ ಮಾಡಿ ಎರಕ ಹೊಯ್ಯಲು ಮನುಷ್ಯ ಮುಂದೆ ಹೋಗಲೇಬೇಕೇ? ಪರಿಹಾರವಿದೆಯೇ?

ಸಮುದ್ರದ ಆಳದಲ್ಲಿ, ಅಣೆಕಟ್ಟುಗಳ ತಳದಲ್ಲಿ, ಮನುಷ್ಯ ಮುಳುಗಿ ತನ್ನ ಕೈಗಳಿಂದಲೇ ನಿರ್ವಹಿಸಬೇಕಾದ ಕೆಲಸಗಳು ಸಾಕಷ್ಟಿವೆ. ಆಳವಾದ ಗಣಿಯೊಳಗೆ ಸಾವಿನ ದವಡೆಯಲ್ಲಿ ಕೆಲಸ ಮಾಡಬೇಕಾಗುವುದು ಇಲ್ಲಿ ಮನುಷ್ಯನಿಗೆ ರಕ್ಷಣೆ ನೀಡುವುದು ಸಾಧ್ಯವೆ?

ಇವೆಲ್ಲವುಗಳಿಗೂ ಉತ್ತರ ಗಣಕಚಾಲಿತ ಕರಗಳು ೧೯೮೭ ರ ಸುಮಾರಿಗೆ ಇವು ನಗರ ನಿರ್ಮಲೀಕರಣದಲ್ಲಿ, ಒಳಚರಂಡಿಗಳ ಶುದ್ಧೀಕರಣದಲ್ಲಿ ಮನುಷ್ಯನಿಗೆ ಅಪಾರವಾದ ಸಹಾಯ ಮಾಡುವ ನಿರೀಕ್ಷೆ ಇದೆ.

ಓದಬಲ್ಲ ಗಣಕಗಳು— ಶಾಲೆ, ಆಸ್ಪತ್ರೆ, ಸರಕಾರೀ ಕಚೇರಿ ಎಲ್ಲಿ ನೋಡಿದರೂ ಅಲ್ಲಿಗೆ ನಿರಂತರವಾಗಿ ಬರುತ್ತಿರುವ ಲೆಕ್ಕ,ಮಿತಿಯಿಲ್ಲದ ಜನಪ್ರವಾಹ ಇದರ ಪರಿಣಾಮವಾಗಿ ಬೆಳೆಯುತ್ತಿರುವ ಕಾಗದ ಪತ್ರದ ಗುಡ್ಡಗಳು, ಇವುಗಳನ್ನು ಕ್ರೋಢೀಕರಿಸಿ ಆಡಳಿತೆಯ ಯಂತ್ರವನ್ನು ದಕ್ಷವಾಗಿ ನಡೆಸಲು ಅವಶ್ಯವಾಗಿರುವ ಗುಮಾಸ್ತರ ಪಡೆ, ಅವರೆಲ್ಲರೂ ಮಾಡಬೇಕಾಗಿರುವ ನಿರಂತರ ನೀರಸ ಕ್ರಿಯೆ— ಇವು ಯಾರನ್ನೂ ಭಯಗೊಳಿಸದಿರವು. ಮನುಷ್ಯನಿಗೆ ಈ ಗಾಣವೆತ್ತಿನ ಕೆಲಸದಿಂದ ಬಿಡುಗಡೆ ದೊರೆತೀತೇ? ಇದರ ಉತ್ತರ—ಓದಬಲ್ಲ ಗಣಕ. ಅರ್ಜಿಗಳ ಪರಂಪರೆಯನ್ನು ಒಂದು ಗಣಕಕ್ಕೆ ಓದಲು ಸಾಧ್ಯವಾದರೆ ಉಳಿದ ಕೆಲಸಗಳನ್ನು ಅದು ಸೆಕೆಂಡುಗಳ ಅವಧಿಯಲ್ಲಿ ಪೂರೈಸಿ ಉತ್ತರ ನೀಡಬಲ್ಲುದು ಆದರೆ ಗಣಕದ ಭಾಷೆ ನಮ್ಮ ಬರವಣಿಗೆಯ ಭಾಷೆ ಅಲ್ಲವಷ್ಟೆ. ಗಣಕವೇ ನಮ್ಮ ಭಾಷೆಯನ್ನು ತನ್ನ ಭಾಷೆಗೆ ತರ್ಜುಮಿಸಿಕೊಂಡು ಉತ್ತರವನ್ನು ನಮ್ಮ ಭಾಷೆಗೆ ತರ್ಜುಮಿಸಿ ಕೊಡುವಂತಿರಬೇಕು. ಈ ದಾರಿಯಲ್ಲಿ ಯೋಜನೆಗಳು ಮುಂದುವರಿದಿವೆ— ನಮ್ಮ ಲಿಪಿಯು ಕಾಂತಶಕ್ತಿಯಿಂದ ಕೂಡಿರುವಂತಹ ಶಾಯಿಯಲ್ಲಿರಬೇಕು; ಇದರ ಗೆರೆಗಳು, ವಕ್ರತೆಗಳು ಮುಂತಾದುವು ಗಣಕದಲ್ಲಿ ವಿವಿಧ ತೆರನಾದ ವಿದ್ಯುತ್ ಸ್ಪಂದನಗಳನ್ನು ಮೂಡಿಸಬೇಕು; ಇಂಥ ಸ್ಪಂದನಗಳ

ಮೂಲಕ ನಮ್ಮ ಲಿಪಿ ಗಣಕದ ದ್ವಯಾಂಶ ಭಾಷೆಯಾಗಿ ಆ ಕ್ಷಣವೇ ತರ್ಜುಮೆಗೊಳ್ಳಬೇಕು.

ಮಾತಾಡಬಲ್ಲ ಗಣಕಗಳು— ರೇಡಿಯೋ ಮಾತಾಡಬಲ್ಲ ಗಣಕವಲ್ಲ ಮಾತಾಡಬಲ್ಲ ಗಣಕವೆಂದರೆ, ಅದಕ್ಕೆ ನಾವು ಪ್ರಶ್ನೆ ಹಾಕಬೇಕು; ಅದು ಕೂಡಲೇ ಸರಿಯಾದ ಉತ್ತರವನ್ನು ಉಸುರಬೇಕು- ಇಬ್ಬರು ವ್ಯಕ್ತಿಗಳು ಪರಸ್ಪರ ಸಂಭಾಷಿಸಿದಂತೆ. ವ್ಯಕ್ತಿ—ವ್ಯಕ್ತಿಗಳ ಸಂಭಾಷಣೆಯಲ್ಲಿ ನಡೆಯುವಂತಹ ರಾಗ ಭಾವಗಳು, ಧ್ವನಿಯ ಏರಿಳಿತಗಳು ಯಾಂತ್ರಿಕವಾಗಿ ಎಂದೆಂದೂ ಅನುಕರಣೀಯವಾಗಲಾರವು ಆದರೆ ಕೆಲವು ನಿಶ್ಚಿತ ಪ್ರಶ್ನೆಗಳಿಗೆ ಗಣಕವು ಮಾತಿನ ರೂಪದಲ್ಲಿ ಉತ್ತರ ನೀಡುವುದು ಸಾಧ್ಯವಿದೆ. "ಗಂಟೆ ಎಷ್ಟು?" ಎಂದು ಒಂದು ಟೆಲಿಫೋನ್ ನಂಬರಿಗೆ ಫೋನ್ ಮಾಡಿದರೆ, ಅಲ್ಲಿ ಮೊದಲೇ ಧ್ವನಿಮುದ್ರಿತವಾಗಿ ಸಿದ್ಧವಾಗಿರುವ ಮನುಷ್ಯನ ಮಾತು ಒಂದು ಗಣಕದ ನೆರವಿನಿಂದ ಆಯ್ಕೆಗೊಂಡು ಪ್ರಸಾರವಾಗುವುದು. ಒಂದು ಗಣಕವು ಸಂಪೂರ್ಣವಾಗಿ ಧ್ವನಿಯ ಕಂಪನಗಳನ್ನು (ನಮ್ಮ ದೇಹದಲ್ಲಿ ಆಗುವಂತೆ) ಸೃಷ್ಟಿಸಿ, ಅವುಗಳ ಸ್ಥಾಯಿ, ಶ್ರುತಿ ಮುಂತಾದುವನ್ನು ಹಿತಮಿತವಾಗಿ ಪಲ್ಲಟಿಸಿ ಕೇಳಿದ ಪ್ರಶ್ನೆಗೆ ಉತ್ತರ ಕೊಡಲಾರದು. ಮಾತಾಡಬಲ್ಲ ಗಣಕಗಳು ಇನ್ನೂ ಯೋಜನೆಯ ಹಂತದಲ್ಲಿಯೇ ಇವೆ.

ಆಟವಾಡುವ ಗಣಕಗಳು— ಇವು ಕೆಲವು ಸುಲಭವಾದ ಆಟಗಳನ್ನು ಯೋಜಿಸಿ ಆಡಲು ಶಕ್ತವಾಗಿವೆ. ಚದುರಂಗದಂತಹ ಆಟಗಳಲ್ಲಿ ಇವು ಮುಂದಾಲೋಚಿಸಿ ಕಾಯಿಗಳ ಚಲನವಲನವನ್ನು ನಿರ್ದೇಶಿಸಬಲ್ಲವು

ಯಂತ್ರನಿಯಂತ್ರಕ ಗಣಕಗಳು- ಆಧುನಿಕ ಯಂತ್ರಾಗಾರಗಳಲ್ಲಿ ಯಂತ್ರಗಳು ಬಲುಮಟ್ಟಿಗೆ ಸ್ವಯಂಚಾಲಿತವಾಗಿವೆ ಅಂದರೆ ಒಂದು ಗುಂಡಿಯನ್ನು ಒತ್ತಿದಾಗ ಇಡೀ ಯಂತ್ರಾಗಾರವೇ ಒಂದು ನಿರ್ದಿಷ್ಟ ಪರಂಪರೆಯಲ್ಲಿ ಕೆಲಸವನ್ನು ಮಾಡಿ ಪೂರೈಸಿದ ಮಾಲನ್ನು ಒದಗಿಸಿ ಕೊಡುವುದು. ಆದರೆ ಈ ಪರಂಪರೆಯನ್ನು ಮನುಷ್ಯ ನಿಯಂತ್ರಿಸಬೇಕಾಗುವುದು; ಅದರಲ್ಲಿ ತೊಂದರೆ ಉಂಟಾದರೆ ಅವನೇ ಸರಿಪಡಿಸಬೇಕು. ಮನುಷ್ಯ ಮಾಡುವಂತಹ, ಮೇಲು ಮಟ್ಟದ ಬೌದ್ಧಿಕ ಕ್ರಿಯೆಯನ್ನು ಸಹ ನಿರ್ವಹಿಸಬಹುದಾದ ಗಣಕಗಳ ಯೋಜನೆ, ನಿರ್ಮಾಣ ಸಾಗಿದೆ. ಇಂಥ ನಿಯಂತ್ರಕ ಗಣಕ ಹೊಣೆಗಾರಿಕೆಯನ್ನು ವಹಿಸಬೇಕು ಮತ್ತು ನಿರ್ಧಾರವನ್ನು ಕೈಗೊಳ್ಳಬೇಕು

ಮಾನವೀಯತೆ ಇರುವ ಗಣಕಗಳು- ಪ್ರೀತಿ, ಅನುಕಂಪ, ಭಾವುಕತೆ ಇವೇ ಮೊದಲಾದ ಮಾನವೀಯ ಗುಣಗಳನ್ನು ಅನುಕರಿಸುವುದು ಸಾಧ್ಯವೇ? ಈ ಸಮಸ್ಯೆಗೆ ಪ್ರಾಯೋಗಿಕ ಉತ್ತರ ಲಭಿಸಿದರೆ ಅದು ಮಾನವೀಯತೆ ಇರುವ ಗಣಕವಾಗುವುದು. ಇಂಥ ಗಣಕಗಳ ಸಹಾಯದಿಂದ ಮಾನವೀಯ ವೈಶಿಷ್ಟ್ಯಗಳಾದ ಈ ಗುಣಗಳ ವೈಜ್ಞಾನಿಕ ವಿಶ್ಲೇಷಣೆ ಸಾಧ್ಯವಾದೀತು. ಬುದ್ಧಿವಿಕಲರ ಚಿಕಿತ್ಸೆಯಲ್ಲಿ ಇದು ಒಂದು ದೊಡ್ಡ ಹೆಜ್ಜೆ ಎನ್ನಿಸಬಹುದು.

ಕಲಿಯುವ ಗಣಕಗಳು— ಹತ್ತು ಬೇರೆ ಬೇರೆ ವ್ಯಕ್ತಿಗಳ ಫೋಟೋಗ್ರಾಫುಗಳನ್ನೂ ಸಂಬಂಧಿಸಿದ ಹೆಸರುಗಳನ್ನೂ ಗಣಕಕ್ಕೆ ಉಣಿಸಲಾಯಿತು. ಮುಂದೆ ಪುನಃ ಆ ಫೋಟೋಗ್ರಾಫುಗಳನ್ನು ಗಣಕದ ಮುಂದೆ ಇಟ್ಟಾಗ ಅದು ಅವುಗಳ ಹೆಸರುಗಳನ್ನು ಸರಿಯಾಗಿ ಹೇಳಿತು. ಹೀಗೆ, ವಸ್ತು ಮತ್ತು ವಸ್ತುವಿನ ಹೆಸರು ಇವುಗಳನ್ನು ಹೊಂದಾಣಿಕೆಗೊಳಿಸುವುದು ಗಣಕಕ್ಕೆ ಸಾಧ್ಯವೆಂದು ಈ ಪ್ರಯೋಗದಿಂದ ಸಿದ್ಧ

---

## ಗಳಗನಾಥರ ಸಾಹಿತ್ಯ

ಹೊಲದೊಳಗೆ ಬೆಳೆ ಬರಲು ಹೊಸ
ಬೀಜ ಬಿತ್ತಿ
ಇದಕೆಂಬೆ ಗಳಗನಾಥರ ಶುಭ್ರ ಹತ್ತಿ.
ಪಕ್ವವಾಗದೆ ಜನರ ಅಭಿರುಚಿಯು ಕಾಲ
ಗಳಗನಾಥರು ಕೊನೆಗೆ ಮಾಡಿದರು
ಸಾಲ.

— ದಿನಕರ ದೇಸಾಯಿ

ವಾಗಿದೆ. ಕೊಲೆಪಾತಕರ, ಕಳ್ಳ ನೋಟು ತಯಾರಕರ ತಪಾಸಣೆಯಲ್ಲಿ ಇಂಥ ಗಣಕಗಳ ಉಪಯೋಗ ಬಹಳವಾಗಿದೆ.

ಬುದ್ಧಿವಂತಿಕೆಯಿಂದ ವರ್ತಿಸುವ ಗಣಕಗಳು—ಒಂದು ಮಗು ಶಾಲೆಗೆ ಹೋಗುವಾಗ ಗೊತ್ತಾದ ದಾರಿಯಲ್ಲಿಯೇ ಯಾಕೆ ಹೋಗುವುದು? ಆ ದಾರಿಯಲ್ಲಿ ಎಡೆಬಿಡದೆ ಬರುತ್ತಿರುವ, ನಿರಂತರವಾಗಿ ಬದಲಾಗುತ್ತಿರುವ ವಾಹನಗಳ ಮಾದರಿಯನ್ನು ಅದು ಸಹಜವಾಗಿ ನಿವಾರಿಸಿಕೊಂಡು ಸುರಕ್ಷಿತವಾಗಿ ಶಾಲೆಯನ್ನು ಹೇಗೆ ತಲುಪುವುದು? ಇಲ್ಲಿ ಬುದ್ಧಿವಂತಿಕೆಯು ಕೈವಾಡವಿದೆ. ಇಂಥ ಗಣಕಗಳ ನಿರ್ಮಾಣವಾಗಿದೆ. ಒಂದು ಕಾರ್ಯಕ್ರಮದ ಅನುಸಾರ ಅದು ಒಂದು ಕೋಣೆಯಿಂದ ಇನ್ನೊಂದು ಕೋಣೆಗೆ ಸ್ವಯಂ ಚಾಲಿತವಾಗಿ ಹೋಗಬಲ್ಲದು. ಅದಕ್ಕೆ ವಿಧಿಸಿದ ಕೆಲಸವನ್ನು ನಿರ್ವಹಿಸಬಲ್ಲುದು. ಹೀಗೆ ಸಾಗುತ್ತಿರುವಾಗ ಅದರ ಕಾರ್ಯಕ್ರಮದಲ್ಲಿ ಗೊತ್ತುಪಡಿಸದಿರುವ ಒಂದು ತೊಡಕು ಎದುರಾದರೆ ಅದನ್ನು ಪರಿಶೀಲಿಸಿ, ಅರ್ಥವಿಸಿ, ನಿವಾರಿಸಿಕೊಂಡು ಮುಂದೆ ಹೋಗಲು ಅದಕ್ಕೆ ಬುದ್ಧಿವಂತಿಕೆಯಿದೆ. (೧೮ನೇ ಪುಟದ ಚಿತ್ರ ನೋಡಿರಿ)

## ೮ ಗಣಕ ಮತ್ತು ಮನುಷ್ಯ

ಮನುಷ್ಯನು ಮಾಡುವ ಎಲ್ಲ ತಾರ್ಕಿಕ ಕ್ರಿಯೆಗಳನ್ನೂ ಗಣಕವು ಅತಿ ಕ್ಷಿಪ್ರವಾಗಿ ದಕ್ಷವಾಗಿ ನೆರವೇರಿಸುವುದು. ಒಂದು ನೂರು ಗುಮಾಸ್ತರು ಒಂದು ತಿಂಗಳಿನಲ್ಲಿ ಮಾಡಿ ಮುಗಿಸುವ ಕೆಲಸವನ್ನು ಒಂದು ಗಣಕವು ಕೆಲವೇ ಮಿನಿಟುಗಳಲ್ಲಿ ನಿರ್ವಹಿಸಿಬಿಡುವುದು. ಇದರ ಜೊತೆಗೆ, ಮುಷ್ಕರ, ರಜೆ, ಕೆಲಸ ನಿಧಾನಕ್ರಮ ಮುಂತಾದ ಕೊನೆಮಿತಿಯಿಲ್ಲದ ಕಿರುಕುಳಗಳೂ ಇಲ್ಲ. ಆದ್ದರಿಂದ ದೊಡ್ಡ ದೊಡ್ಡ ಸಂಸ್ಥೆಗಳು ಹೆಚ್ಚು ಹೆಚ್ಚು ಸ್ವಯಂಚಾಲಿತ ಅಥವಾ ಗಣಕಚಾಲಿತ ವ್ಯವಸ್ಥೆಗಳನ್ನು ಬಯಸುವುವು ಆರ್ಥಿಕವಾಗಿ ಪರಿಶೀಲಿಸಿದಾಗ ದೀರ್ಘ ಕಾಲಾವಧಿಯಲ್ಲಿ ಗಣಕಗಳೇ ಲಾಭದಾಯಕವಾಗಿ ಕಂಡುಬಂದಿವೆ.

ಸಂಸ್ಥೆಗಳ ಗಣಕೀಕರಣದಿಂದ ಒಂದು ಹೊಸ ಮಾನವೀಯ ಸಮಸ್ಯೆ ತಲೆದೋರುವುದು. ಮನುಷ್ಯನ ಕ್ಷೇತ್ರವನ್ನು ಗಣಕ ಆಕ್ರಮಿಸಿದರೆ ಮನುಷ್ಯ ಹೋಗುವುದೆಲ್ಲಿಗೆ? ಹಳೆಯ ಕತೆ "ಅರಬನೂ ಒಂಟೆಯೂ" ಇಲ್ಲಿ ಪುನರಾವರ್ತನೆ ಆಗುತ್ತಿದೆಯೇ? ಗಣಕೀಕರಣದ ಪರಿಣಾಮವಾಗಿ ಕೆಲಸ ಕಳೆದುಕೊಂಡ ಮತ್ತು ಕೆಲಸ ದೊರೆಯದ ಹತಭಾಗ್ಯರ ಭವಿಷ್ಯವೇನು? ಅವರೆಲ್ಲರೂ ಹಲವಾರು ಆರ್ಥಿಕ ಮತ್ತು ಸಾಮಾಜಿಕ ಕಾರಣಗಳ ದೆಸೆಯಿಂದ ಬೌದ್ಧಿಕವಾಗಿ ಮೇಲಿನ ಅಂತಸ್ತುಗಳಿಗೆ ತಲುಪಲಾರರು; ಇತರ ದೈಹಿಕ ಶ್ರಮದ ಕೆಲಸ ಇನ್ನು ಅವರಿಗೆ ದೊರೆಯದು. ಈಗಾಗಲೇ ನಿರುದ್ಯೋಗ ಸಮಸ್ಯೆಯಿಂದ, ಅತಿ ವಿರಾಮದಿಂದ ಸಾಕಷ್ಟು ಸಾಮಾಜಿಕ ಒತ್ತಡ, ಘರ್ಷಣೆ ತಲೆದೋರಿವೆ. ಗಣಕೀಕರಣ ಈ ಪರಿಸ್ಥಿತಿಯನ್ನು ಇನ್ನಷ್ಟು ಉಲ್ಬಣಾವಸ್ಥೆಗೆ ಕೊಂಡೊಯ್ಯದೇ?

ಈ ಪ್ರಶ್ನೆಗಳಷ್ಟೇ ಮಹತ್ವದ್ದಾದ ಇನ್ನಷ್ಟು ಪ್ರಶ್ನೆಗಳನ್ನೂ ಕೇಳಬಹುದು.

ಗಣಕೀಕರಣವಾಗಿರದಿದ್ದಾಗ ಆ ಸಂಸ್ಥೆಗಳಲ್ಲಿ ಜನ ಮಾಡಿದ್ದೇನು? ಅತಿ ಕಡಿಮೆ ಕೆಲಸ, ಅತಿ ಕಡಿಮೆ ಹೊಣೆಗಾರಿಕೆ, ಅತಿ ಹೆಚ್ಚು ಆರ್ಥಿಕ ಲಾಭ, ಅತಿ ಹೆಚ್ಚು ವಿರಾಮ—ಇದೇ ಜೀವನದ ಪರಮೋತ್ಕೃಷ್ಟ ಧರ್ಮವಾಗಿ ಆಚರಿಸಲಿಲ್ಲವೇ? ಅವರಿಗೆ ಅನ್ನ ನೀಡುವ ಸಂಸ್ಥೆ ನಶಿಸಿ ಹೋಗುತ್ತಿದ್ದರೂ ಆ ಜನ ತಮ್ಮ ವೃತ್ತಿಗೆ

---

ತೀರ್ಪು

ತೀರ್ಪು ಕೊಟ್ಟರು: ಇವನು ದೊಡ್ಡ
ಅಪರಾಧಿ.
ಈ ಪ್ರಾಣಿ ಕದ್ದದ್ದು ಒಂದು ಕಿಲೊ
ಗೋದಿ.
ಇನ್ನೊಬ್ಬ ಲೂಟಿ ಹಾಕಿದ್ದು ದಶಲಕ್ಷ.
ಈತನಿಗೆ ಅನ್ನುವರು: ಕರ್ತವ್ಯದಕ್ಷ.

—ದಿನಕರ ದೇಸಾಯಿ

ಶಿಸ್ತು ಸಂಯಮಗಳನ್ನು ತಂದರೆ? ಅಲ್ಲದೆ, ಸ್ವಂತ ಸಾಮರ್ಥ್ಯದಿಂದ, ಶ್ರಮದಿಂದ ಧನಾ-ರ್ಜನೆ ಮಾಡಿದ ಮಾಲಿಕನು ತನ್ನ ಸಂಸ್ಥೆಯಲ್ಲಿ ತನ್ನ ಹಣ ಹೇಗೆ ವಿನಿಯೋಗವಾಗಬೇಕೆಂದು ತೀರ್ಮಾನಿಸುವ ಹಕ್ಕು ಪಡೆದಿರುವುದೇ ಇಲ್ಲವೇ?

ಇಂಥ ಪ್ರಶ್ನೆಗಳಿಗೆ ಕರಾರುವಾಕ್ಕಾಗಿ ಉತ್ತರ ನೀಡುವುದು ಕಷ್ಟ. ಕಾಲಕಾಲಕ್ಕೆ ದೇಶ ದೇಶಕ್ಕೆ ಈ ಸಮಸ್ಯೆಗಳ ಹಿಂದಿರುವ ಬಲಗಳು ವ್ಯತ್ಯಾಸವಾಗುವುವು. ಪ್ರಸಕ್ತ ಲೇಖನದಲ್ಲಿ ಒಂದು ಸಾಮಾನ್ಯವಾದ ಸೂತ್ರವನ್ನು ಮಾತ್ರ ತಿಳಿಸಬಹುದು — ಆಯಾ ಸನ್ನಿವೇಶಗಳಿಗೆ ಅನುಗುಣವಾಗಿ ಒಂದು ಸಮಸ್ಥಿತಿಯನ್ನು ಕಾಪಾಡಿಕೊಂಡು ಮುಂದುವರಿಯುವುದು ಜಾಣ್ಮೆ. ಒಂದು ವಿಚಾರ ಮಾತ್ರ ಖಂಡಿತ—ವಿಜ್ಞಾನದಲ್ಲಿ ಒಂದೊಂದು ನೂತನ ಸಂಶೋಧನೆ ನಡೆದಾಗಲೂ ಅದರಿಂದ ಲಭಿಸಿದ್ದ ಸೌಕರ್ಯಗಳ ಜೊತೆಯಲ್ಲಿಯೇ ಸಾಕಷ್ಟು ನೂತನ ಸಮಸ್ಯೆಗಳೂ ತಲೆದೋರಿವೆ. ರೈಲು ಬಂಡಿ, ಮೋಟಾರು ಬಂಡಿ ರೂಢಿಗೆ ಬರುತ್ತಿದ್ದ ದಿನಗಳಲ್ಲಿ ಎತ್ತುಗಳ, ಕುದುರೆಗಳ, ಬಂಡಿ ತಯಾರಕರ, ಕೊನೆಯಲ್ಲಿ ಮನುಷ್ಯನ ಕಾಲುಗಳ ಭವಿಷ್ಯವೇನು ಎಂದು ಜನ ಹೆದರಿದ್ದರು. ಇದರಿಂದ ವಿಜ್ಞಾನ ತಂತ್ರಗಳ ಪ್ರಗತಿ ಕುಂಠಿತವಾಗಲಿಲ್ಲ. ಜನ ಬದಲಾದ ಪರಿಸ್ಥಿತಿಗೆ ಹೊಂದಿಕೊಂಡರು. ಗಣಕದ ವಿಚಾರದಲ್ಲಿಯೂ ಹೀಗೆಯೇ. ಗಣಕೀಕರಣವನ್ನು ನಿಷೇಧಿಸುವುದು ಎಷ್ಟು ಅವೈಜ್ಞಾನಿಕವೋ ಪ್ರತಿ ಕಾರ್ಯವನ್ನೂ ಗಣಕದಿಂದಲೇ ಸಾಧಿಸುತ್ತೇವೆ ಎನ್ನುವುದೂ ಅಷ್ಟೇ.

## 9. ಸೈಬರ್ನೆಟಿಕ್ಸ್

ಗಣಕವನ್ನು ಕುರಿತ ಯಾವ ಪ್ರಸ್ತಾಪವೂ ಸೈಬರ್ನೆಟಿಕ್ಸ್ (Cybernetics) ಶಾಸ್ತ್ರವನ್ನು ಹೆಸರಿಸದಿದ್ದರೆ ಪೂರ್ಣವಾಗಲಾರದು. ಪಂಚವಿಜ್ಞಾನಗಳ ಸಂಗಮದಿಂದ ಈ ಶಾಸ್ತ್ರದ ಜನನವಾಯಿತೆಂದು ಹೇಳುತ್ತಾರೆ: ಸ್ವಯಂಚಾಲಿತ ನಿಯಂತ್ರಣ, ಗಣಿತ ಶಾಸ್ತ್ರ, ತರ್ಕ ಶಾಸ್ತ್ರ, ಜೀವವಿಜ್ಞಾನ ಮತ್ತು ಸಂಪರ್ಕ ಸಿದ್ಧಾಂತ. ಬೆಂಕಿಯನ್ನು ಮುಟ್ಟಿದ ಕ್ಷಣ ಕೈ ಹಿಂದೆ ಸರಿಯುವುದು ಏಕೆ? ಆ ಚಲನೆಯನ್ನು ಮಿದುಳು ಹೇಗೆ ಅಷ್ಟು ಕ್ಷಿಪ್ರವಾಗಿ ಖಚಿತವಾಗಿ ನಿಯಂತ್ರಿಸಿತು? ಚಲನೆಯ ಪಥದ ಸಮೀಕರಣ (ಗಣಿತ) ಏನು? ಆ ಚಲನೆ ನೆರವೇರಿದ ಕ್ರಮವೇನು? ಬೆಂಕಿಯನ್ನು ಸ್ಪರ್ಶಿಸಿದ ಭಾಗದಲ್ಲಿ ಮಾತ್ರ ನೋವಿನ ಅನುಭವ ಆದದ್ದು ಹೇಗೆ? ಸ್ಪರ್ಶಭಾಗ ಮತ್ತು ಮಿದುಳು ಇವುಗಳ ನಡುವಿನ ಸಂಪರ್ಕ ವ್ಯವಸ್ಥೆಯೇನು? ಇಂಥ ಒಂದೊಂದು ಪ್ರಶ್ನೆಯ ಕೂಲಂಕಷ ಅಭ್ಯಾಸ ಮೇಲೆ ಬೆಳೆದಿರುವ ಒಂದೊಂದು ಶಾಸ್ತ್ರವಾಗುವುದು ಇವುಗಳನ್ನು ಸಮಗ್ರವಾಗಿ ಅಭ್ಯಸಿಸಿ ಮಿದುಳಿನ ಕೆಲಸ - ಒಂದು ಯಂತ್ರದ ಕೆಲಸ ಇವುಗಳನ್ನು ತುಲನಾತ್ಮಕವಾಗಿ ತಿಳಿದು ಮುಂದುವರಿಯುವ ಶಾಸ್ತ್ರ ಸೈಬರ್ನೆಟಿಕ್ಸ್. ಒಬ್ಬ ಸೈಬರ್ನೆಟೀಶಿಯನ್ ಶ್ರೇಷ್ಠ ಯಂತ್ರ ವಿಜ್ಞಾನಿಯೂ ಆಗಿರಬೇಕು, ಜೀವ ವಿಜ್ಞಾನಿಯೂ ಆಗಿರಬೇಕು. ಗಣಿತ ಪರಿಣತನಂತೂ ಆಗಿರಲೇಬೇಕು. ನಾರ್ಬರ್ಟ್ ವೀನರ್ ಎಂಬ ವಿಜ್ಞಾನಿಯು ಈ ಶತಮಾನದ ಪ್ರಥಮಾರ್ಧದಲ್ಲಿ ಸೈಬರ್ನೆಟಿಕ್ಸ್ ಶಾಸ್ತ್ರವನ್ನು ಪ್ರತಿಪಾದಿಸಿದನು. ಅವನ ಮಾತಿನಲ್ಲಿ "ಪ್ರಾಣಿಗಳಲ್ಲಿಯೂ ಯಂತ್ರಗಳಲ್ಲಿಯೂ ಸಂಪರ್ಕ ಮತ್ತು ನಿಯಂತ್ರಣವನ್ನು ಸೈದ್ಧಾಂತಿಕವಾಗಿ ಅಭ್ಯಸಿಸುವ ಶಾಸ್ತ್ರ ಸೈಬರ್ನೆಟಿಕ್ಸ್."

ಸೈಬರ್ನೆಟಿಕ್ಸ್ ಶಾಸ್ತ್ರದ ಸುಭದ್ರ ತಳಹದಿಯ ಮೇಲೆ ಗಣಕಯಂತ್ರ ಬೆಳೆದು ನಿಂತಿದೆ. *



# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

**ಶಬ್ದ ಭಾಂಡಾರವು ಹಣದ ಭಂಡಾರಕ್ಕಿಂತಲೂ ಅಮೂಲ್ಯವಾಗಿದೆ**

ಇಲ್ಲಿ ಪ್ರತಿ ತಿಂಗಳ [illegible] ಶಬ್ದಗಳನ್ನು [illegible] ಕೊಡಲಾಗುವುದು. ಪ್ರತಿ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದೆ. ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು [illegible] ಅರಿಸಿಕೊಳ್ಳಿರಿ. [illegible] ಪುಟದಲ್ಲಿ [illegible] ಸರಿಯಾದ ಅರ್ಥವನ್ನು ವಿವರಿಸಿದೆ.

೧. ನಿಟ್ವ

(ಅ) ಹಣೆ (ಆ) ಉಸಿರು (ಇ) ಪ್ರತಿ ದಿನ (ಈ) ಬದಿ

೨. ದಿವಾಭೀತ

(ಅ) ಹಗಲಿಗೆ ಅಂಜುವಾತ (ಆ) ನಕ್ಷತ್ರ (ಇ) ಸೂರ್ಯ (ಈ) ಚಂದ್ರ

೩. ಅಬಗಜೀ

(ಅ) ಕ್ರೈಸ್ತ ದೇವಾಲಯ (ಆ) ಅಂಬರಿ ಕೆಲಸ (ಇ) ಅಕ್ಕಿತೊಳೆದ ನೀರು (ಈ) ಬಹಳ ತ್ವರೆ

೪. ಜಂಘಾಬಲ

(ಅ) ಬಿರುಗಾಳಿ (ಆ) ಓಟದ ವೇಗ (ಇ) ಕಾಲಿನ ಬಲ (ಈ) ಜನಸಂದಣಿ

೫. ಕಳವೆ

(ಅ) ಕೀಳು (ಆ) ಭತ್ತ (ಇ) ಕಳ್ಳತನ (ಈ) ಬೀಳ್ಕೊಡುವ ಸಮಾರಂಭ

೬. ಸವರ್ಣ

(ಅ) ಬಂಗಾರ (ಆ) ಬಣ್ಣವುಳ್ಳದು (ಇ) ಸಮಾಧಾನ (ಈ) ಮದುವೆ

೭. ಅಗ್ರಪೂಜೆ

(ಅ) ಸುಲಭ ಪೂಜೆ (ಆ) ಕೊನೆಯ ಪ್ರಾರ್ಥನೆ (ಇ) ಪ್ರಥಮ ಮರ್ಯಾದೆ (ಈ) ಒತ್ತಾಯದ ಗೌರವ

೮. ಶ್ಲೇಷೆ

(ಅ) ಕುಂಕುಮ ತೊಡೆದ ಅಕ್ಕಿ (ಆ) ಉಳಿದದ್ದು (ಇ) ಕಫ (ಈ) ಒಂದು ಮಾತಿಗೆ ಎರಡರ್ಥ ಕೊಡುವ ಅಲಂಕಾರ

೯. ಅವಿಭಕ್ತ

(ಅ) ನಾಸ್ತಿಕ (ಆ) ಆಸ್ತಿಕ (ಇ) ಬೇರೆ ಬೇರೆ ಆಗದ (ಈ) ಧ್ವಂಸ ಹೊಂದಿದ

೧೦. ಅವಿಭಾಜ್ಯ

(ಅ) ಹೋಳುಮಾಡಲಾಗದ (ಆ) ಸಿಹಿ ತಿಂಡಿ (ಇ) ತಿನ್ನಲಾಗದ (ಈ) ತರಕಾರಿ

೧೧. ಮಿತ್ರಭೇದ

(ಅ) ಬೇರೆ ಗೆಳೆಯ (ಆ) ಸ್ನೇಹದ ಸೋಗಿನಿಂದ ಮೋಸ (ಇ) ಒಂದು ಬಗೆಯ ಸ್ನೇಹ (ಈ) ಸ್ನೇಹದಲ್ಲಿ ಒಡಕು ಹುಟ್ಟುವುದು.

೧೨. ತಳ್ಳಿ

(ಅ) ದೂಡುವುದು (ಆ) ಗೊಡವೆ (ಇ) ಸಂತಾನ (ಈ) ಒಂದು ಬಗೆಯ ತಿಂಡಿ

೧. ನಿಟ್ಟು (ಈ) ಬದಿ ದಿಕ್ಕು; ಮಾಡಿನ ಅಥವಾ ಗುಡ್ಡದ ಒಂದು ಬದಿ ಅಥವಾ ಇಳುಕಲು. ಉದಾ— ನಾಲ್ಕು ನಿಟ್ಟಿನ ನೋಟ. [ಸಂ. ನಿಷ್ಠ]

೨. ದಿವಾಭೀತ (ಅ) ಹಗಲಿಗೆ ಹೆದರುವವ, (ಆದ್ದರಿಂದ) ಸತ್ಯ ಅಥವಾ ವಸ್ತುಸ್ಥಿತಿಯನ್ನು ಎದುರಿಸುವುದಕ್ಕೆ ಹಿಂಜರಿಯುವವ; ಕಳ್ಳ; ಗೂಗೆ. ಉದಾ— ದಿವಾಭೀತರಿಂದ ಯಾವ ಮಹತ್ಕಾರ್ಯವೂ ಆಗದು. [ಸಂ. ದಿವಾ = ಹಗಲು, ಭೀತ = ಅಂಜುಗುಳಿ.]

೩. ಅಲಗರ್ಜಿ (ಅ) ಅರೆಬರೆ ಕೆಲಸ, ಅಪರಿಪೂರ್ಣ, ಅಲಕ್ಷದಿಂದ ಮಾಡಿದ್ದು. ಉದಾ— ನನ್ನ ಶಿಕ್ಷಣ ಅಲಗರ್ಜಿಯಾಗಿಯೆ ಉಳಿಯಿತು. [ಮರಾಠಿ— ಅಲಗರಜ]

೪. ಜಂಘಾಬಲ (ಇ) ಕಾಲಿನ ಬಲ, ಕೆಳತೊಡೆಯ ಬಲ, ನಿಲ್ಲುವ ಶಕ್ತಿ. ಉದಾ- ಪೋಲೀಸರನ್ನು ನೋಡಿ ಕಳ್ಳನ ಜಂಘಾಬಲವೇ ಉಡುಗಿ ಹೋಯಿತು. [ಸಂ. ಜಂಘಾ = ಕಾಲು, ಬಲ = ಶಕ್ತಿ]

೫. ಕಳಪೆ (ಅ) ಕೀಳು, ಕೆಳ ದರ್ಜೆಯದು. ಉದಾ- ಅವನು ಅವನ ತಂದೆಗಿಂತಲೂ ಕಳಪೆ ಮನುಷ್ಯ. [ಕನ್ನಡ. ಕಳೆ = ತೆಗೆದು ಹಾಕು.]

೬. ಸವರ್ಣ (ಅ) ಬಣ್ಣವುಳ್ಳದ್ದು, ಉತ್ತಮ ಬಣ್ಣದ್ದು, (ಹಿಂದುಗಳಲ್ಲಿ) ಹರಿಜನರಲ್ಲದ ಶ್ರೇಷ್ಠ ಜಾತಿಯವರೆನಿಸುವಂಥಾ [ಸಂ. ಸ = ಉಳ್ಳ, ವರ್ಣ = ಬಣ್ಣ, ಜಾತಿ]

೭. ಅಗ್ರಪೂಜೆ (ಈ) ಪ್ರಥಮ ಪೂಜೆ, ಎಲ್ಲರಿಗಿಂತ ಮೊದಲು ಯಾರೊಬ್ಬನಿಗೆ ಸಲ್ಲುವ ಮರ್ಯಾದೆ. ಉದಾ— ಎಲ್ಲಿ ಹೋದರೂ ಮಂತ್ರಿಗಳಿಗೇ ಅಗ್ರಪೂಜೆ. [ಸಂ. ಅಗ್ರ = ಎದುರು, ಪೂಜಾ.]

೮. ಶ್ಲೇಷೆ (ಈ) ಒಂದು ಮಾತಿಗೆ ಎರಡರ್ಥ ಬರುವಂತೆ ಜೋಡಿಸಿದ ಚಮತ್ಕಾರ. ಉದಾ— ಅವನ ಭಾಷಣದ ಕೊನೆಗೆ ಉಳಿದವರು ನಿಜವಾಗಿ ಶಿಷ್ಟರೆನಿಸಿದರು—ಎಂಬ ವಾಕ್ಯದಲ್ಲಿ ಶಿಷ್ಟ ಶಬ್ದಕ್ಕೆ ಮರ್ಯಾದಸ್ಥ ಮತ್ತು ಉಳಿದವ ಎಂಬ ಎರಡರ್ಥಗಳನ್ನು ಚಮತ್ಕಾರವಾಗಿ ಉಪಯೋಗಿಸಲಾಗಿದೆ. [ಸಂ. ಶ್ಲೇಷ]

೯. ಅವಿಭಕ್ತ (ಇ) ಬೇರೆ ಬೇರೆ ಆಗದ, ಹೋಳಾಗದ. ಉದಾ— ಅವಿಭಕ್ತ ಕುಟುಂಬ ಎಂದರೆ ಅಣ್ಣತಮ್ಮಂದಿರಲ್ಲಿ ಪಾಲಾಗದೆ ಇರುವ ಕುಟುಂಬ [ಸಂ. ಅ = ಅಲ್ಲ, ವಿಭಕ್ತ = ಹೋಳಾದ]

೧೦. ಅವಿಭಾಜ್ಯ (ಅ) ಹೋಳು ಅಥವಾ ಪಾಲು ಮಾಡಲಾಗದ. ಉದಾ—ನಮ್ಮ ದೇಶ ಅವಿಭಾಜ್ಯವಾಗಿದೆ. [ಸಂ. ಅ = ಅಲ್ಲ, ವಿಭಾಜ್ಯ = ಪಾಲು ಮಾಡಲು ಬರುವಂಥಾದ್ದು]

೧೧. ಮಿತ್ರಭೇದ (ಈ) ಸ್ನೇಹಿತರಲ್ಲಿ ಒಡಕು ಹುಟ್ಟುವುದು, ಮಿತ್ರರೊಳಗೆ ಜಗಳ ತಂದು ಹಾಕುವುದು. [ಸಂ. ಮಿತ್ರ = ಗೆಳೆಯ, ಭೇದ = ಒಡಕು.]

೧೨. ತಳ್ಳಿ (ಅ) ಗೊಡವೆ, ಉಸಾಬರಿ. ಉದಾ— ಹೆಣ್ಣಿನ ತಳ್ಳಿ ನಿನಗೆ ಬೇಡ. [ಕನ್ನಡ]

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | |
|---|---|
| ೬—೮ ಸರಿಯಿದ್ದರೆ | ... ಸಾಧಾರಣ |
| ೯—೧೦ ” | ... ಉತ್ತಮ |
| ೧೧—೧೨ ” | ... ಅತ್ಯುತ್ತಮ |



# ಗಾಂಧೀಜಿಯ ಸಾನ್ನಿಧ್ಯ

ಗೊರೂರು ರಾಮಸ್ವಾಮಿ ಅಯ್ಯಂಗಾರ

ಮಹಾತ್ಮ ಗಾಂಧೀಜಿ, ೧೯೨೭ನೇ ಏಪ್ರಿಲ್ ಕೊನೆಯವಾರದಲ್ಲಿ ಕರ್ಣಾಟಕದ ಸಾವಂತ ವಾಡಿ-ನಿಪ್ಪಾಣಿಗಳ ಪ್ರವಾಸವನ್ನು ಕೈಕೊಂಡು ಖಾದಿ ಕಾರ್ಯಕ್ರಮವನ್ನು ವ್ಯವಸ್ಥೆಗೊಳಿಸುತ್ತಿದ್ದಾಗ ಇದ್ದಕ್ಕಿದ್ದಂತೆ ಅವರ ದೇಹಸ್ಥಿತಿ ಕೆಟ್ಟುದರಿಂದ, ನಂದಿಬೆಟ್ಟಕ್ಕೆ ಬಂದು ತಂಗಿದರು. ಅಲ್ಲಿ ಸುಮಾರು ಏಳು ವಾರ ಇರುವುದರೊಳಗಾಗಿ ಅವರ ಆರೋಗ್ಯ ತುಂಬಾ ಉತ್ತಮವಾಗಿ, ಮೈಸೂರು ದೇಶದ ಜನತೆಯ ಬಲಾತ್ಕಾರಕ್ಕೆ ಬಗ್ಗಿ ಅವರು ಮೈಸೂರು ದೇಶದ ಕೆಲವು ಭಾಗಗಳಿಗೆ ಭೇಟಿ ಇತ್ತರು. ನಂದಿಯಿಂದ ಜೂನ್ ಎರಡನೆಯವಾರ ಅವರು ಕುಮಾರ ಕೃಪಾದಲ್ಲಿ ಬಂದು ಸರ್ಕಾರದ ಅತಿಥಿಯಾಗಿ ಉಳಿದರು.

ದೇವರು ಇರುವ ಜಾಗವೇ ಹೇಗೆ ದೇವಾಲಯವೋ ಹಾಗೆ ಗಾಂಧೀಜಿ ಎಲ್ಲಿದ್ದರೆ ಅದೇ ಭಾರತದ ರಾಜಧಾನಿಯೂ ಎಲ್ಲ ಚಟುವಟಿಕೆಗಳಿಗೂ ಕೇಂದ್ರವೂ ಆಗುತ್ತಿದ್ದಿತು. ಆದುದರಿಂದ ಗಾಂಧೀ ಎಲ್ಲಿದ್ದರೆ ಭಾರತದ ಮುಖಂಡರೆಲ್ಲ ಅಲ್ಲಿಯೇ ಇರುತ್ತಿದ್ದರು. ನಂದಿಗೆ, ಗಾಂಧೀಜಿಯ ಜೊತೆಗೆ ಚಕ್ರವರ್ತಿ ರಾಜಗೋಪಾಲಾಚಾರಿ ಬಂದರು. ಅನಂತರ ಷಣ್ಮುಗಂ ಚೆಟ್ಟಿ, ಭೂಲಾಭಾಯಿ ದೇಸಾಯಿ, ಪಂಡಿತ ಮಾಳವೀಯ, ಮೋತಿಲಾಲ್ ನೆಹ್ರು ಎಲ್ಲರೂ ಬಂದರು. ಮಾಳವೀಯ ಕುಮಾರ ಕೃಪಕ್ಕೆ ಬರುವಾಗ, ಅವರ ಜೊತೆ ಅವರ ಅಡಿಗೆಯವನು ಇದ್ದಲು ಒಲೆ ಎಲ್ಲ ತಂದಿದ್ದನು. ಅವನು ಎಲ್ಲಿಯೋ ದೂರದಲ್ಲಿ ಹೋಗಿ ಭಾವಿಯನ್ನು ಪತ್ತೆಮಾಡಿ, ಭಾವಿಯ ನೀರನ್ನೇ ತಂದು ಮಾಲವೀಯರಿಗೆ ಅಡಿಗೆ ಮಾಡಿ ಹಾಕುತ್ತಿದ್ದನು. ಕುಮಾರ ಕೃಪದಲ್ಲಿ ಅವರ ಅಡಿಗೆಗೆ ಕೊಟ್ಟಿದ್ದ ಕೊಠಡಿಯಲ್ಲಿದ್ದ ನಲ್ಲಿಗೆ, ಅಡಿಗೆಯವನು ಒಂದು ತೊಟ್ಟು ನೀರೂ ಈಚೆಗೆ ಬರದಂತೆ ಬಟ್ಟೆ ಕಟ್ಟಿಬಿಟ್ಟಿದ್ದನು. ಅವನನ್ನು ಕಂಡು ಸ್ವಯಂಸೇವಕರು, ಅವನನ್ನೂ ಮಾಲವೀಯರನ್ನೂ ಪ್ರೀತಿಯಿಂದ ಹಾಸ್ಯ ಮಾಡುತ್ತಿದ್ದರು. ಮಾಲವೀಯರು ತಮ್ಮ ಸ್ವಂತ ಮಡಿ ಮೈಲಿಗೆಗಳ ವಿಷಯದಲ್ಲಿ ಅಷ್ಟು ಖಡಾ ಖಂಡಿತವಾಗಿದ್ದರೂ ಹಿಂದೂ ಮತದ ಸಂಘಟನೆಯನ್ನು ಕುರಿತು ಅದೇ ಸಂಜೆ ಬಹಳ ಪ್ರಭಾವಶಾಲೀ ಭಾಷಣವನ್ನು ಮಾಡಿದರು.

“ನಮ್ಮ ಇಂದಿನ ಹಿಂದೂ ಧರ್ಮದ ದೌರ್ಬಲ್ಯ ಹೋಗಬೇಕಾದರೆ, ಹಿಂದೂ ಮತದಲ್ಲಿರುವ ಎಲ್ಲ ಜಾತಿ, ಉಪಜಾತಿ, ಪಂಗಡಗಳನ್ನೂ ಕೂಡಿಸಿ ಒಂದೇ ಹಿಂದೂ ಮತವನ್ನು ಮಾಡಬೇಕು. ಉತ್ತಮ ಜಾತಿ, ಕೀಳು ಜಾತಿ ಎಂಬ ಭೇದಗಳನ್ನೆಲ್ಲ ತೊಡೆದು ಹಾಕಿ, ಎಲ್ಲರಿಗೂ ಶಾಸ್ತ್ರಗಳ ತಿರುಳು ಸುಲಭವಾಗಿ ತಿಳಿಯುವಂತೆ

ಪ್ರಚಾರ ಮಾಡಬೇಕು. ಅಸ್ಪೃಶ್ಯತೆ, ಬಾಲ್ಯ ವಿವಾಹಗಳನ್ನು ತೊಡೆದು ಹಾಕಬೇಕು. ಶರೀರ ವ್ಯಾಯಾಮ ಶಾಲೆಗಳನ್ನು ಹೆಚ್ಚಿಸಬೇಕು. ಎಲ್ಲ ಜಾತಿಗಳಿಗೂ ಸಮಾನವಾದ ಧಾರ್ಮಿಕ ಹಕ್ಕುಗಳನ್ನು ಕೊಡಬೇಕು. ಹಿಂದೂಧರ್ಮ ಗ್ರಂಥಗಳ ಪಠನೆ, ಪ್ರಚಾರ, ಪ್ರವಚನ ನಡೆಯುವ ಸ್ಥಳಗಳಿಗೆ ಮುಸಲ್ಮಾನರು ಕ್ರೈಸ್ತರು ಯಾರೇ ಆಗಲಿ ಬರುತ್ತೇವೆಂದರೂ ತಡೆಯಬಾರದು" ಎಂದು ಬೋಧಿಸಿದರು. "ಮಾಲವೀಯರದು ಕಟ್ಟುನಿಟ್ಟಾದ ಆಚಾರವಾದರೂ ಅವರ ಬುದ್ಧಿ ಸಂಕುಚಿತವಲ್ಲ" ಎಂದು ಗಾಂಧೀಜಿಯೇ ಹೇಳಿದರು.

ಗಾಂಧೀಜಿ, ತಾವು ಎಷ್ಟೇ ಮಿತಾಹಾರಿಗಳೂ ಸಂಯಮಿಗಳೂ ನಿಯಮಾನುಯಾಯಿಗಳೂ ಆದರೂ ಅವರು ಇತರರಿಗೆ ಆ ಕಠಿಣ ನಿಯಮಗಳನ್ನು ಅನ್ವಯಿಸುತ್ತಿರಲಿಲ್ಲ. ಪಂಡಿತ ಮೋತೀಲಾಲ್‌ರು ಗಾಂಧೀಜಿಯನ್ನು ನೋಡಲು ಬೆಂಗಳೂರಿಗೆ ಬಂದಾಗ, ಗಾಂಧೀಜಿ ತುಂಬ ಸಡಗರದಿಂದ ಅವರ ಆತಿಥ್ಯಕ್ಕೆ ಸರ್ವ ಏರ್ಪಾಡನ್ನೂ ಮಾಡುವಂತೆ "ಕ್ಯಾಂಪ್"ನ ಅಡಿಗೆಯವರಿಗೆ ತಿಳಿಸಿದರು. ಸಿಹಿ ತಿಂಡಿಯ ವಿಷಯದಲ್ಲಿ ತಾವೇ ಎಚ್ಚರಿಕೆಯಿಂದ ಸಲಹೆ ಮಾಡಿದರು. ಮೋತೀಲಾಲ್‌ರಿಗೆ ಇಷ್ಟವಾದ ಸಿಹಿ ತಿಂಡಿ ತಯಾರಿಕೆಯ ಮೇಲ್ವಿಚಾರಣೆಯನ್ನು ತಾವೇ ಸ್ವತಃ ನೋಡಿಕೊಂಡರು. ಮಾನ್ಯ ಅತಿಥಿಯನ್ನು ಹೇಗೆ ಸತ್ಕರಿಸಬೇಕು ಎಂಬುದಕ್ಕೆ ಅವರೇ ಉದಾಹರಣೆಯಾದರು. ಹಾಗಿದ್ದರೂ, ಗಾಂಧೀಜಿ ತಾವು ಸರ್ಕಾರದ ಅತಿಥಿಯಾಗಿದ್ದುದರಿಂದ, ಸರ್ಕಾರದ ಹಣವೂ ಪ್ರಜೆಗಳ ಹಣವೇ ಆಗಿದ್ದುದರಿಂದ ಅಡಿಗೆ ಮನೆಯಲ್ಲಿ ದುಂದುವೆಚ್ಚ ಅಥವಾ ಸಾಮಾನು ಪೋಲು ಆಗುವುದನ್ನು ಅವರು ಸಹಿಸುತ್ತಿರಲಿಲ್ಲ. ಗಾಂಧೀ ಹೆಸರಿನ ಕ್ಯಾಂಪುಗಳಲ್ಲೆಲ್ಲ ಬಿಟ್ಟಿ ಊಟವನ್ನು ಹೊಡೆದು ಅಭ್ಯಾಸವಾಗಿದ್ದ ನಮ್ಮಂಥವರಿಗೆ ಸಹಾ ಗಾಂಧೀ ಕ್ಯಾಂಪಿನಲ್ಲಿ ಸುಲಭವಾಗಿ ಊಟ ಗಿಟ್ಟಿಸಲು ಸಾಧ್ಯವಾಗುತ್ತಿರಲಿಲ್ಲ. ಕ್ಯಾಂಪಿನಲ್ಲಿ ಕೆಲಸವಿದ್ದವರಿಗೆ, ಸಾರ್ವಜನಿಕ ಕೆಲಸವಿದ್ದವರಿಗೆ, ಗಾಂಧೀ ಬಳಿ ಕೆಲಸವಿದ್ದವರಿಗೆ, ಬೇರೆ ಊಟದ ಸ್ಥಳವಿಲ್ಲದವರಿಗೆ ಮಾತ್ರ ಊಟ ದೊರೆಯುತ್ತಿತ್ತು. ಗಾಂಧೀಜಿಯ ಖಂಡಿತವಾದ ಅಪ್ಪಣೆಯಂತೆ ನಡೆಯುತ್ತಿದ್ದ ಅವರ ಬಿಡಾರದ ವ್ಯವಸ್ಥಾಪಕ ಶ್ರೀ ಎಸ್. ವಿ. ರಾಜಾರಾಮಯ್ಯಂಗ್ಯಾರರು, ಬಿಡಾರದ ಖರ್ಚನ್ನು ಆದಷ್ಟು ಕಡಿಮೆ ಮಟ್ಟದಲ್ಲಿ ಇಟ್ಟಿದ್ದರು. ಅನಂತರ ಸರ್ಕಾರದವರೇ ಗಾಂಧೀಜಿಯ ಆತಿಥ್ಯಕ್ಕೆ ಒದಗಿಸಿಟ್ಟಿದ್ದ ಮಂಜೂರಾದ ಮೊಬಲಗಿನಲ್ಲಿ, ಅವರಿಗಾಗಿ ಹತ್ತರಲ್ಲಿ ಒಂದು ಪಾಲು ಹಣ ಸಹ ಖರ್ಚಾಗಲಿಲ್ಲವೆಂದು ಪ್ರಕಟಿಸಿದರು.

ಸಾರ್ವಜನಿಕರಿಂದ ವಸೂಲ್ಮಾಡಿದ ಹಣದ ವೆಚ್ಚ, ಲೆಕ್ಕಾಚಾರ ಇವುಗಳಲ್ಲಿ ಅತ್ಯಂತ ಕಟ್ಟುನಿಟ್ಟು ಗಾಂಧೀಜಿಯ ನಿಯಮ. ಆಯಾ ದಿನ ಹರಿಜನ ನಿಧಿಗೆ, ಖಾದಿ ನಿಧಿಗೆ, ಗೋ ಸೇವೆಗೆ, ಕ್ಷಾಮ ಪರಿಹಾರ ಕಾರ್ಯಕ್ಕೆ, ಸ್ತ್ರೀಯರ ಏಳಿಗೆ, ಮೂಲ ಶಿಕ್ಷಣ ಮುಂತಾದುವುಗಳಿಗೆ ವಸೂಲಾದ ಹಣ ಗಾಂಧೀಜಿ ನಿದ್ರೆ ಹೋಗುವುದಕ್ಕೆ ಮುಂಚೆ ಆಯಾ ಖಾತೆಗೆ ಜಮಾ ಆಗಲೇ ಬೇಕು. ನಿಧಿಗಳಿಗಾಗಿ ವಸೂಲಾದ ಚಿಲ್ಲರೆ ಆಣೆ ಕಾಸುಗಳ ಲೆಕ್ಕ ಅರ್ಧ ರಾತ್ರಿಯಾದರೂ ಎಣಿಕೆಯಾಗಿ ಜಮಾ ಆಗಬೇಕು. ಸಾರ್ವಜನಿಕರಿಂದ ಬಂದ, ಸ್ತ್ರೀಯರಿಂದ ಬಂದ, ಚಿನ್ನದ ಒಡವೆಗಳು ಹಾಗೂ ಮುತ್ತು, ವಜ್ರ ಎಲ್ಲಾ ಖರಾರುವಾಕಾಗಿ ತೂಕ ಬಣ್ಣದೊಂದಿಗೆ ನಮೂದಾಗಬೇಕು. ಸಾರ್ವಜನಿಕ ಹಣ, ಒಂದು ಕಾಸು ಅಪವ್ಯಯವಾಗುವುದನ್ನೂ ಗಾಂಧೀಜಿ ಸಹಿಸುತ್ತಿರಲಿಲ್ಲ. ಕೆಲವು ಕಡೆ ನಡೆಯುತ್ತಿರುವಂತೆ, ನಿಧಿ ಸಂಗ್ರಹಣೆಯ ವೆಚ್ಚ ಎಂದು ಊಟ ತಿಂಡಿಗಳಿಗೆ ವ್ಯವಸ್ಥಾಪಕರು (ವಸೂಲಾದ ಮೊತ್ತದಿಂದ) ಹಣ ವೆಚ್ಚ ಮಾಡುವುದನ್ನೂ ಗಾಂಧೀಜಿ ಒಪ್ಪುತ್ತಿರಲಿಲ್ಲ. ಒಂದು ಸಲ ಕವಯಿತ್ರಿ ಸರೋಜಿನಿ ನಾಯುಡುರವರು ಕ್ಷಾಮಪರಿಹಾರ ನಿಧಿಯ ವಸೂಲಿಗಾಗಿ ಪ್ರವಾಸ ನಡೆಸಿದಾಗ, ಜಮಾ

ಖರ್ಚನ್ನು ನೋಡಿದ ಗಾಂಧೀಜಿ "ಈ ಹಣ ಸಂಪಾದನೆಗಾಗಿ ಮಾಡಿದ ವೆಚ್ಚ ತೀರ ಹೆಚ್ಚಾಯಿತು. ಇನ್ನು ಮೇಲೆ ವೆಚ್ಚ, ನೂರಕ್ಕೆ ಇಷ್ಟನ್ನು ಮೀರಬಾರದು" ಎಂದು ವಿಧಿಸಿದರು.

ಗಾಂಧೀ ಬಿಡಾರಗಳಲ್ಲಿ ಊಟ ತಿಂಡಿ ನಿಯಮಗಳೆಲ್ಲ ಋಷ್ಯಾಶ್ರಮಗಳಲ್ಲಿ ನಡೆಯುವಂತೆ ನಡೆಯುತ್ತಿದ್ದುವೇ ಹೊರತು ಮಠದ ಸಮಾರಾಧನೆಗಳಂತಲ್ಲ. ಆದರೆ ಆ ನಿಯಮಗಳಲ್ಲಿ ಯಾವ ಕಾಠಿಣ್ಯವೂ ಇರಲಿಲ್ಲ. ರೋಗಿಗಳಿಗೆ, ವೃದ್ಧರಿಗೆ, ಬಾಲಕರಿಗೆ ಆಹಾರ, ಹಣ್ಣು ಹಾಲುಗಳಲ್ಲಿ ರಿಯಾಯ್ತಿ. ಇತರ ಬಲಿಷ್ಠರಾದ ನಿರೋಗಿಗಳಾದವರಿಗೆ ಸರಳವಾದರೂ ಸತ್ವಪೂರ್ಣವಾದ, ಪುಷ್ಟವಾದ ಆಹಾರ. ಸಾರ್ವಜನಿಕ ಹಣವನ್ನು ಭೋಗ್ಯವಸ್ತುಗಳಿಗಾಗಿ ಉಪಯೋಗಿಸುವುದನ್ನು ಗಾಂಧೀಜಿ ಎಂದೂ ಸಹಿಸುತ್ತಿರಲಿಲ್ಲ. ಅವರ ಆ ಕಠಿಣ ನಿಯಮದಲ್ಲಿಯೂ ಹಿಟ್ಟು-ಬಟ್ಟೆಗೆ ಸಹ ಗತಿಯಿಲ್ಲದ ಈ ದೇಶದ ದರಿದ್ರ ಹಳ್ಳಿಗರ ಮೇಲಿನ ಕರುಣೆಯೇ ಅಡಗಿತ್ತು. ಗಾಂಧೀಜಿಯವರ ಸಮಸ್ತ ಆಚರಣೆಯಲ್ಲಿಯೂ ತಮ್ಮ ಮಟ್ಟಿಗೆ ಕಟ್ಟುನಿಟ್ಟಾದ ಕಠಿಣ ವ್ರತ. ಆದರೆ ಇತರರ ವಿಷಯದಲ್ಲಿ ಪೂರ್ಣ ಕರುಣೆ ಮತ್ತು ಅವರ ದೌರ್ಬಲ್ಯಕ್ಕೆ ಸಹಿಷ್ಣುತೆ. ಅವರ ಎಲ್ಲ ಆಚರಣೆಗಳ ಮೂಲದಲ್ಲಿಯೂ ಭಾರತದ ಮತ್ತು ಜಗತ್ತಿನ ದೀನ ದಲಿತರ ಸುಖಾನ್ವೇಷಣೆ, ಸತ್ಯಾನ್ವೇಷಣೆ ಅಡಗಿತ್ತು.

ಗಾಂಧೀಜಿ ತಮ್ಮ ಕಾರ್ಯಕ್ರಮದಲ್ಲಿ ಸ್ವದೇಶಿಗೆ ಪ್ರಮುಖ ಸ್ಥಾನವನ್ನು ಕೊಟ್ಟಿದ್ದರು. ಹನ್ನೊಂದು ವ್ರತಗಳ ಪೈಕಿ ಸ್ವದೇಶಿಯ ಸ್ಥಾನ ಹಿರಿಯದು. ಎಷ್ಟೇ ಕಷ್ಟವಾಗಲೀ—ಕೊನೆಗೆ ಪದಾರ್ಥ ಸಿಕ್ಕದಿದ್ದರೆ ಅದಿಲ್ಲದೆಲೆ ನಿಭಾಯಿಸಬೇಕೆಂಬುದು ಸ್ವದೇಶಿಯ ನಿಯಮ. ದಿನದಿನದ ಆವಶ್ಯಕ ವಸ್ತುಗಳ ವಿಷಯದಲ್ಲಿಯೇ ಹೀಗಾದಮೇಲೆ ಇನ್ನು ಭೋಗ್ಯ ವಸ್ತುಗಳಿಗಾಗಿ ಪರದೇಶೀ ವಸ್ತುವನ್ನು ಅವಲಂಬಿಸಲು ಸಾಧ್ಯವೆ? ಗಾಂಧೀಜಿ ಇರುವೆಡೆ, ಪರದೇಶಿ ವಸ್ತು ಯಾವುದೂ ಸುಳಿಯಲು ಅವಕಾಶವಿರಲಿಲ್ಲ. ಒಂದು ದಿನ ಗಾಂಧೀಜಿ, ಕುಮಾರ ಕೃಪದಲ್ಲಿ, ನಿತ್ಯದಂತೆ ಸ್ನಾನ ಮಾಡಲು ಸ್ನಾನದ ಮನೆಗೆ ಹೋದಾಗ ಗೂಡಿನಲ್ಲಿ ಒಂದು ವ್ಯಾಸ-ಲೈನ್ ಸೀಸೆ ಇದ್ದುದು ಅವರ ಕಣ್ಣಿಗೆ ಬಿದ್ದಿತು. ಆಗಿನ ಕಾಲದಲ್ಲಿ ಅದು ಪರದೇಶಿಯದೇ ಆಗಿತ್ತು. ಅದನ್ನು ನೋಡಿದ ಕೂಡಲೇ ಗಾಂಧೀಜಿ, ಬೆಚ್ಚಿಬಿದ್ದರು. ಅವರಿಗೆ ಕೋಪಕ್ಕಿಂತ ಹೆಚ್ಚಾಗಿ ದುಃಖವೇ ಉಂಟಾಯಿತು. ಅವರಿಗೆ ತಮ್ಮ ಮೇಲೆಯೇ ಕೋಪ ಬಂದಿತು. "ನನ್ನ ಅನುಯಾಯಿಗಳ ಮೇಲೆ ನನ್ನ ಬೋಧನೆಯ ಮತ್ತು ಆಚರಣೆಯ ಫಲ ಏನೇನೂ ಆಗಲಿಲ್ಲ. ನನ್ನ ಪಾರಿಶುದ್ಧತೆ ಸಾಲದು; ನನ್ನ ತಪಸ್ಸು ಸಾಲದು. ನನ್ನ ಅರ್ಹತೆಯನ್ನೇ ಹೆಚ್ಚಿಸಿಕೊಳ್ಳಬೇಕು." ಎಂದು ಅವರು ನೊಂದುಕೊಂಡು ಒಳಕ್ಕೆ ಬಂದರು. ಪ್ರಾರ್ಥನೆಯ ಸಮಯದಲ್ಲಿ ಅವರು ಅನುಯಾಯಿಗಳಲ್ಲಿ ಆ ವಿಷಯವನ್ನು ಹೇಳಿಕೊಂಡು "ನನ್ನ ಸಂದೇಶ ನಿಮಗೆ ಮುಟ್ಟಬೇಕಾದರೆ ನನ್ನ ತಪಸ್ಸು ಇನ್ನೂ ವೃದ್ಧಿಯಾಗಬೇಕು. ಇಲ್ಲದಿದ್ದಲ್ಲಿ ನಾನು ಇಪ್ಪತ್ತುನಾಲ್ಕು ಘಂಟೆಯೂ ಸ್ವದೇಶಿಯನ್ನು ಆಚರಿಸುತ್ತಿದ್ದರೂ, ನಮ್ಮ ಬಿಡಾರಕ್ಕೆ ಪರದೇಶಿ ವ್ಯಾಸಲೈನ್ ಪ್ರವೇಶಿಸುತ್ತಿರಲಿಲ್ಲ. ಸದೇಶಿಯ ಸಂದೇಶ ನಿಮಗೆ ಮುಟ್ಟುವ ಮಾಧ್ಯಮ ನಾನು ಆಗಬೇಕಾದರೆ, ನಾನು ೩ ದಿನ ಉಪವಾಸವನ್ನು ಆಚರಿಸಿ ಶುದ್ಧನಾಗುತ್ತೇನೆ" ಎಂದು ಹೇಳಿದರು. ರಾಜ-ಗೋಪಾಲಾಚಾರಿ, ಕಸ್ತೂರಿಬಾ, ಮಹದೇವ ದೇಸಾಯಿ ಎಲ್ಲರೂ ತುಂಬಾ ದಿಗ್ಭ್ರಾಂತರಾದರು. ಗಾಂಧೀಜಿ ವ್ಯಾಸಲೈನ್ ತಂದವರಾರೆಂದು ಸಹ ವಿಚಾರಿಸಿ ಅವರನ್ನು ಶಿಕ್ಷಿಸಲಿಲ್ಲ. ಕೊನೆಯಲ್ಲಿ ಕೆಲಸಗಾರರಲ್ಲೇ ಮಾತು ಕಥೆಯಾಗಿ, ಒಬ್ಬ ಕೆಲಸಗಾರನ ಕಾಲು ಬಿರಿದು ರಕ್ತವೇ ಸೋರುತ್ತಿದ್ದುದರಿಂದ ಅವನು ವ್ಯಾಸ

ಲೈನ್ ಉಪಯೋಗಿಸಬೇಕಾಯಿತೆಂದು ಗೊತ್ತಾಯಿತು. ಆತ ಎದ್ದು ನಿಂತು ಕಣ್ಣಲ್ಲಿ ಧಾರೆ ಧಾರೆಯಾಗಿ ನೀರು ಬಿಡುತ್ತಾ ತನ್ನ ತಪ್ಪನ್ನು ಮನ್ನಿಸಬೇಕೆಂದು ಕೇಳಿಕೊಂಡನು. ತಾನು ಮಾಡಿದ್ದ ತಪ್ಪಿನ ದುಃಖದಿಂದ ಅವನು ಅತ್ಯಂತ ಜರ್ಝರಿತನಾಗಿದ್ದನು. ಅವನಿಗೆ ನಿಜವಾದ ಪಶ್ಚಾತ್ತಾಪವುಂಟಾಗಿದ್ದುದನ್ನು ನೋಡಿ ಎಲ್ಲ ಕೆಲಸಗಾರರ ಕಣ್ಣಿನಲ್ಲಿಯೂ ನೀರು ಹರಿಯಿತು. ಅದನ್ನು ನೋಡಿ ಗಾಂಧೀಜಿ ಸಹ ಅಳುತ್ತಿದ್ದರು. ವಾದವಿವಾದ, ಆಕ್ಷೇಪಣೆ, ಸಮಾಧಾನ, ವಿಚಾರಣೆ, ಶಿಕ್ಷೆ ಒಂದೂ ಇಲ್ಲದೆ ವಾತಾವರಣ ಪವಿತ್ರವಾಗಿ ಶಾಂತಿ ನೆಲೆಸಿತು. ಎಲ್ಲರಿಗೂ, ಮುಖ್ಯವಾಗಿ ತಪ್ಪಿತಸ್ಥನಿಗೂ ಪಶ್ಚಾತ್ತಾಪವಾಗಿರುವುದರಿಂದ, ಇನ್ನು ಉಪವಾಸಮಾಡಿದರೆ ಅವನಿಗೆ ಅನ್ಯಾಯವಾಗಬಹುದೆಂಬ ರಾಜಗೋಪಾಲಾಚಾರಿಯವರ ವಾದವನ್ನು ಮನ್ನಿಸಿ ಗಾಂಧೀಜಿ ಉಪವಾಸವನ್ನು ನಿಲ್ಲಿಸಿದರು. ಹೀಗೆ ಗಾಂಧೀಜಿ ತಮ್ಮ ಅನುಯಾಯಿಗಳ ತಪ್ಪಿಗಾಗಿ, ಯಾರ ಮೇಲೆಯೂ ರೇಗದೆ ತಮಗೇ ಶಿಕ್ಷೆಯನ್ನು ವಿಧಿಸಿಕೊಳ್ಳುತ್ತಿದ್ದರು.

ಕುಮಾರ ಕೃಪಾದಲ್ಲಿ ಬಿಡಾರ ಮಾಡಿರುವಾಗ, ಗಾಂಧೀ ಪಂಗಡದವರ ವಸ್ತ್ರಗಳನ್ನು ಮಡಿ ಮಾಡಲು, ಅಗಸನಿಗೆ ಬಹಳ ಹಣ ಹೋಗುತ್ತಿರುವುದು ಗಾಂಧೀಜಿಯ ದೃಷ್ಟಿಗೆ ಬಿದ್ದಿತು. ಅವರು ಮಹದೇವ್‌ರನ್ನು ಕರೆಸಿ, "ಇಲ್ಲಿ ನೋಡು. ಇದು ಸಾರ್ವಜನಿಕರ ಹಣ.



ನಾವು ಸಾರ್ವಜನಿಕರ ಸೇವಕರೆನ್ನುತ್ತೇವೆ. ನಾವು ಖರ್ಚು ಮಾಡುತ್ತಿರುವುದನ್ನು ನೋಡಿದರೆ ನಾವು ಸೇವಕರೆಂಬುದನ್ನು ಮರೆತು ರಾಜರಂತೆ ವೆಚ್ಚ ಮಾಡುತ್ತಿದ್ದೇವೆ" ಎಂದರು. ಮಹದೇವ್, "ಅದಕ್ಕೆ ನಾನು ಏನು ಮಾಡಲಿ. ಇಲ್ಲಿಯ ಅಗಸನಂತೂ ಬೇರೆ ಅಗಸರಿಗಿಂತ ಹೆಚ್ಚಾಗಿ ಕೂಲಿ ತೆಗೆದುಕೊಳ್ಳುತ್ತಿಲ್ಲ. ನ್ಯಾಯವಾದ ಕೂಲಿಯೇ ಇಷ್ಟಾಗುತ್ತದೆ" ಎಂದರು. ಗಾಂಧೀಜಿ, "ನೀನೇ ಬಟ್ಟೆಗಳನ್ನೆಲ್ಲ ಯಾಕೆ ಚೆಲುವೆ ಮಾಡಿಬಿಡಬಾರದು. ಈ ವ್ಯರ್ಥವಾದ ಖರ್ಚು ಉಳಿಯುತ್ತೆ" ಎಂದರು. ಮಹದೇವ್‌ರು "ಬಾಪು, ಈಗ ನಾನು ನಿತ್ಯ ಬೆಳಗಿನ ಜಾವ ೩ ಘಂಟೆಗೆ ಏಳುತ್ತಿದ್ದೇನೆ. ನನಗೆ ಹೊತ್ತೆಲ್ಲಿದೆ ?" ಎಂದರು. ಗಾಂಧೀಜಿ, "ನಾಳೆಯಿಂದ ಎರಡು ಘಂಟೆಗೆ ಏಳು" ಎಂದರು. ಆ ಗುರು ಶಿಷ್ಯರ ಸಂಮಿಳನ ಅದಾವ ಜನ್ಮಾಂತರದ ಸುಕೃತವೊ. ಅಂದಿನಿಂದ ಮಹದೇವ್ ನಿತ್ಯ ರಾತ್ರಿ ೨ ಘಂಟೆಗೆ ಎದ್ದು ಗಾಂಧೀ ಬಿಡಾರದವರ ಅರಿವೆಗಳನ್ನೆಲ್ಲ ಒಗೆದು ಹಾಕುತ್ತಿದ್ದರು. ಗಾಂಧೀಜಿಯ ವಸ್ತ್ರಗಳನ್ನು (ತುಂಡುಪಂಚೆ) ಕಸ್ತೂರಿಬಾರವರೇ ಒಗೆಯುತ್ತಿದ್ದರು. ಆದರೆ ನಿತ್ಯ ಗಾಂಧೀಜಿಯವರ ಒಂದು ಟವಲ್‌ನ್ನು ಮಾತ್ರ ಮಹದೇವ್‌ಭಾಯಿ ಒಗೆಯುತ್ತಿದ್ದರು. ಎಂದಿನಿಂದ ಗಾಂಧೀಜಿ ಮಹದೇವ್‌ಭಾಯ್‌ರಿಗೆ ರಾತ್ರಿ ಎರಡು ಘಂಟೆಗಳಿಗೆ ಏಳಬೇಕೆಂದು ಆಜ್ಞಾಪಿಸಿದರೋ ಅಂದಿನಿಂದ ಗಾಂಧೀಜಿ, ತಮ್ಮ ಟವಲನ್ನು ತಾವೇ ಒಗೆದುಕೊಳ್ಳುತ್ತಿದ್ದರು. ಅವರು ತಮ್ಮ ಸ್ನಾನಕ್ಕೆ ಐದು ನಿಮಿಷಗಳನ್ನು ಹೆಚ್ಚಾಗಿ ತೆಗೆದುಕೊಂಡು, ಆ ಐದು ನಿಮಿಷಗಳಲ್ಲಿ ತಮ್ಮ ಟವಲನ್ನು ಒಗೆದುಕೊಂಡು, ಮಹದೇವ್‌ಗೆ ತಮ್ಮ ಭಾಗದ ಹೊರೆಯನ್ನು ಕಡಿಮೆ ಮಾಡಿದರು

ಇದೇ ಸಂದರ್ಭದಲ್ಲಿ ಗಾಂಧೀಜಿ, ಬೆಂಗಳೂರಿನಿಂದಲೇ ಖಾದಿ ನಿಧಿಸಂಗ್ರಹಕ್ಕಾಗಿ ದಕ್ಷಿಣ ಭಾರತ ಪ್ರವಾಸಕ್ಕೆ ಹೊರಟರು. ಅವರ ಪ್ರವಾಸ

ಗಳಲ್ಲಿ ಯಾವಾಗಲೂ ಬಿಡುವಿಲ್ಲದ ಕಾರ್ಯಕ್ರಮ. ಅವರಿಗೂ ಅವರ ಜೊತೆಯವರಿಗೂ ದೇಹಶ್ರಮವೂ ಆಯಾಸವೂ ಹೆಚ್ಚಾಗುತ್ತಿದ್ದಿತು. ಪ್ರಯಾಣಕಾಲದಲ್ಲಿ ಸಹ, ಹತ್ತು ಹದಿನೈದು ನಿಮಿಷ ಅವಕಾಶ ಸಿಕ್ಕಿದರೂ ಗಾಂಧೀಜಿ ನಿದ್ರೆ ಮಾಡುತ್ತಿದುದರಿಂದ ಅಂತಹ ಎಲ್ಲ ಸೌಕರ್ಯಗಳನ್ನೂ ಅಳವಡಿಸಿದ ಒಂದು ಕಾರನ್ನು ಒದಗಿಸಿದರೆ ಮಹಾತ್ಮರಿಗೆ ದೇಹಶ್ರಮ ಕಡಿಮೆಯಾಗುವುದೆಂದು ಗಾಂಧೀ ಅನುಯಾಯಿಗಳು ನಿಶ್ಚಯಿಸಿದರು. ಅಂತಹ ಸೌಕರ್ಯಗಳನ್ನು ಒದಗಿಸಿದ ಕಾರನ್ನು ಪಡೆಯಲು ಆಗಿನ ಕಾಲದಲ್ಲಿಯೂ ೧೫-೧೬ ಸಾವಿರ ರೂಪಾಯಿ ವೆಚ್ಚವಾಗುತ್ತಿದ್ದಿತು. ಆಗ ಬೆಂಗಳೂರಿನ ಧನಿಕರೊಬ್ಬರು, ಗಾಂಧೀಜಿಗೆ ಅಂತಹ ಒಂದು ಕಾರನ್ನು ಒದಗಿಸಿಕೊಡುವುದಾಗಿ ತಿಳಿಸಿದರು. ಮಹಾತ್ಮರ ಅತ್ಯಂತ ಹತ್ತಿರದ ಅನುಯಾಯಿಗಳು, ಧನಿಕರು ಹಣ ಕೊಟ್ಟಾಗ ಲೆಕ್ಕಾಚಾರಕ್ಕೆ ಜಮ ಹಿಡಿಯಬಹುದೆಂದುಕೊಂಡು ವಸೂಲಾಗಿದ್ದ ನಿಧಿಯಿಂದ ಒಂದು ಕಾರನ್ನು ಕೊಂಡುಕೊಂಡು, ಸಿಂಪ್ಸನ್ ಕಂಪನಿಯಲ್ಲಿ ಮಹಾತ್ಮರ ಪ್ರವಾಸಕ್ಕೆ ಹೇಗೆ ಅನುಕೂಲವೋ ಹಾಗೆ ಅದನ್ನು ಅಳವಡಿಸಿದರು. ಪ್ರಯಾಣಕಾಲದಲ್ಲಿ ಸಹ ನಿದ್ರೆ ಮಾಡಲು ಅದರಲ್ಲಿ ಸೌಕರ್ಯವಿತ್ತು. ಕಾರು ಬಹಳ ಸುಖಕರವಾಗಿತ್ತು. ಮಹಾತ್ಮರೇ ವಿನೋದವಾಗಿ, "ಇದು ನಿಜವಾಗಿ ಮಹಾತ್ಮ ಕಾರು" ಎಂದು ಹೇಳಿದರು. ಇರಲಿ, ಬೆಂಗಳೂರಿನಿಂದ ಕಾರು, ಮಹಾತ್ಮರನ್ನು ಕರೆದುಕೊಂಡು, ಮದರಾಸು ಮುಂತಾದ ದಕ್ಷಿಣ ಭಾರತ ಯಾತ್ರೆ ಹೊರಡುವ ಕಾಲ ಸಮೀಪಿಸಿದರೂ ವಾಗ್ದಾನ ಮಾಡಿದ್ದ ದಾತೃವಿನ ಕಡೆಯಿಂದ ಹಣ ಬರಲಿಲ್ಲ. ನಿಧಿಯಿಂದ ಕಾರನ್ನು ಕೊಳ್ಳುವ ಜವಾಬ್ದಾರಿ ವಹಿಸಿದ್ದ ಗಾಂಧೀ ನಿಕಟ ಅನುಯಾಯಿಗಳಿಗೆ, ದಿನದಿನವೂ ಎದೆ ಡವಡವನೆ ಬಡಿದುಕೊಳ್ಳತೊಡಗಿತು. ಅದು ಬರಿಯ ಹಣದ ಪ್ರಶ್ನೆ ಮಾತ್ರವೇ ಆಗಿರಲಿಲ್ಲ. "ನಿಧಿಯ ಹಣವನ್ನು ಒಂದು ಗಳಿಗೆಯೇ ಆಗಲಿ ಮತ್ತೊಂದೆಡೆಗೆ ತಿರುಗಿಸಲು ಕಾರಣವೇನು? ಇದು ನಿಧಿಯ ದುರುಪಯೋಗ"ವೆಂದು ಗಾಂಧೀಜಿ ಕೋಪಿಸಿಕೊಳ್ಳುವುದು ಖಂಡಿತವೆಂದು ಗಾಂಧೀಯವರ ಪಟ್ಟಶಿಷ್ಯರಿಗೆ ಸಹ ಗೊತ್ತಾಗಿತ್ತು. ಬೆಂಗಳೂರಿನಿಂದ ಹೊರಡುವ ಮುನ್ನ, ಗಾಂಧೀ ಶಿಷ್ಯರು, ಮತ್ತೆ ಹೋಗಿ ತಮಗೂ ದಾತೃವಿಗೂ ಮಧ್ಯಸ್ಥಗಾರರಾಗಿ ವರ್ತಿಸಿದ್ದವರನ್ನು ನೋಡಿದರು. ಆದರೆ ದಾತೃವಿಗೆ ಹಣ ಇನ್ನೂ ಒದಗಿರಲಿಲ್ಲ. ಹೇಗಿದ್ದರೂ ಗಾಂಧೀಜಿ ದಕ್ಷಿಣದ ಪ್ರವಾಸ ಮುಗಿಸಿಕೊಂಡು ಮತ್ತೆ ಉತ್ತರ ಭಾರತಕ್ಕೆ ಹೊರಡಬೇಕಾಗಿತ್ತು. ಆದುದರಿಂದ ದಾತೃವು "ನೀವು ಆ ಕಾರನ್ನು ನನ್ನದೆಂದೇ ಪರಿಗಣಿಸಿ. ನೀವು ಹಿಂದಿರುಗುವ ವೇಳೆಗೆ ಹಣ, ಜೊತೆ ಮಾಡಿ ಇಟ್ಟಿರುತ್ತೇನೆ" ಎಂದರು. ಗಾಂಧೀಜಿ ತಮ್ಮ ಅನುಯಾಯಿಗಳೊಡನೆ ದಕ್ಷಿಣ ಭಾರತ ಯಾತ್ರೆ ಕೈಕೊಂಡರು. ತಮ್ಮ ಉಪಯೋಗಕ್ಕಾಗಿ ಬೇರೆ ಬೇರೆ ಕಡೆಗಳಲ್ಲಿ ಬೇರೆ ಬೇರೆ ಕಾರು ದೊರೆಯುತ್ತಿದ್ದಂತೆ ಈ ಕಾರೂ ದೊರೆತಿದೆಯೆಂದುಕೊಂಡು ಅದರ ವಿಷಯ ಅವರು-ಮೆಚ್ಚುಗೆಯ ಹೊರತು-ಮತ್ತೇನನ್ನೂ ಪ್ರಸ್ತಾಪಿಸಲಿಲ್ಲ.

ದಕ್ಷಿಣ ದೇಶದ ಪ್ರವಾಸವನ್ನೆಲ್ಲ ಮುಗಿಸಿಕೊಂಡು ಗಾಂಧೀಯವರು ಬೆಂಗಳೂರಿಗೆ ಹಿಂದಿರುಗಿದರು. ಕಾರು ಬೆಂಗಳೂರನ್ನು ಸಮೀಪಿಸುತ್ತಿದ್ದಂತೆ ಅವರ ಪಟ್ಟಶಿಷ್ಯರ ಭಯ, ಕಾತರ, ಆಸೆ, ನಿರೀಕ್ಷೆಗಳು ಹೆಚ್ಚಾದವು. ಮತ್ತೆ ಗಾಂಧೀಜಿ ಕುಮಾರಾಪಾರ್ಕ್‌ನಲ್ಲಿ ಬಿಡಾರ ಮಾಡಿದರು. ಈ ಸಲ ಅವರು ಹೆಚ್ಚು ಕಾಲ ಬೆಂಗಳೂರಲ್ಲಿ ನಿಲ್ಲುವವರಾಗಿರಲಿಲ್ಲ. ಬೆಂಗಳೂರಿಗೆ ಹಿಂದಿರುಗಿದ ದಿನವೇ, ಕಾರಿಗೆ ಹಣ ಕೊಡಲು ದಾತೃವಿಗೆ ಶಕ್ತಿ ಇಲ್ಲವೆಂಬುದು ಗಾಂಧೀ ಶಿಷ್ಯರಿಗೆ ಗೊತ್ತಾಯಿತು. ಶ್ರೀ ರಾಜಗೋಪಾಲಾಚಾರ್ಯರು ಹೆದರುತ್ತಾ ಹೆದರುತ್ತಾ, ಗಾಂಧಿಯವರಲ್ಲಿ ಹೋಗಿ

ನಡೆದ ಸಂಗತಿ ಹೇಳಿಯೇ ಬಿಟ್ಟರು. ಸಾರ್ವಜನಿಕ ನಿಧಿಯಿಂದ ಕಾರನ್ನು ಕೊಂಡುದನ್ನು ಗಾಂಧೀ ಬಹಳ ಆಕ್ಷೇಪಿಸಿದರು. ಆಘಾತದಿಂದ ಅವರು ಒಂದು ಘಂಟೆ ಜರ್ಝರಿತರಾದರು. "ಇದು ನಿಧಿಯ ದುರುಪಯೋಗ. ಜನ ಹಣ ಕೊಟ್ಟಿರುವುದು ನಾನೂ ನೀವೂ ಕಾರನ್ನು ನಮ್ಮ ಇಷ್ಟಬಂದಂತೆ ಅಳವಡಿಸಿಕೊಂಡು ಸುಖ ಪ್ರಯಾಣ ಮಾಡುವುದಕ್ಕಲ್ಲ. ನಿಧಿ-ಸಂಗ್ರಹವನ್ನು ನಾವು ಕಷ್ಟವನ್ನು ಸಹಿಸುತ್ತಲೇ ಮಾಡಬೇಕು ಕಾರು ಇಲ್ಲದಿದ್ದರೆ ರೈಲು ಆಗಲಿ, ಬಸ್ ಆಗಲಿ, ಎತ್ತಿನ ಗಾಡಿ; ಕೊನೆಗೆ ನಡೆಯುವುದೇ ಆಗಲಿ; ಸಾರ್ವಜನಿಕರು ನಮಗೆ ಕೊಟ್ಟ ಪ್ರತಿಯೊಂದು ಕಾಸಿಗೂ ನಾವು ಸರಿಯಾದ ಹೊಣೆ ಹೊರಬೇಕು" ಎಂದರು. ಎರಡು ಗಂಟೆಗಳ ಕಾಲ ಗಾಂಧೀಜಿ ಅತ್ಯಂತ ವೇದನೆಯನ್ನೂ ಮೌನ ದುಃಖವನ್ನೂ ಅನುಭವಿಸಿದರು. ತಮಗೇ ಎಲ್ಲಿ ಕ್ರೂರವಾದ ಪ್ರಾಯಶ್ಚಿತ್ತ ಶಿಕ್ಷೆ ವಿಧಿಸಿಕೊಳ್ಳುತ್ತಾರೋ ಎಂದು ಅನುಯಾಯಿಗಳೆಲ್ಲ ತುಂಬ ಕಾತುರರಾಗಿ ಇದು ಅಚಾತುರ್ಯವೇ ಹೊರತು ಅನೀತಿಯಲ್ಲ ಎಂದು ಸ್ಪಷ್ಟಪಡಿಸಿದರು. ಕೊನೆಯಲ್ಲಿ ಗಾಂಧೀಜಿಯ ಮಾತಿನಂತೆ ಆ ನಿಮಿಷದಲ್ಲಿಯೇ ಕಾರನ್ನು ಹರಾಜು ಮಾಡಿ ಹಣವನ್ನು ನಿಧಿಗೆ ಮತ್ತೆ ಸೇರಿಸಿದರು.

ಭಾರತವನ್ನು ಪುನರುಜ್ಜೀವನಗೊಳಿಸಿದ ಈ ಆಧುನಿಕ ಋಷಿಯ ಬಾಳ್ವೆ, ಬಿಡುವಿಲ್ಲದ ಚಟುವಟಿಕೆಯಿಂದ ಕೂಡಿದುದಾದರೂ, ಪ್ರತಿ ನಿಮಿಷವೂ ಒಂದು ಆದರ್ಶವನ್ನೇ ಸಾಧಿಸಿ ಜನತೆಯ ಮುಂದೆ ಇಡುತ್ತಿದ್ದಿತು. ವರ್ಧಾದಲ್ಲಿ ಒಂದು ಮೂಲ ಶಿಕ್ಷಣ ಶಾಲೆಯನ್ನು ಸ್ಥಾಪಿಸಿ, ಅದರ ವಾರ್ಷಿಕ ಸಭೆಗೆ ಅಧ್ಯಕ್ಷರಾಗಲು ಗಾಂಧೀಜಿಯನ್ನು ಆಹ್ವಾನಿಸಿದರು. ಪಾಠ ಶಾಲೆಗೆ ಸಂಬಂಧಿಸಿದಂತೆ ಒಂದು ವಿದ್ಯಾರ್ಥಿನಿಲಯವೂ ಇತ್ತು. ಕಾಲಕ್ಕೆ ಸರಿಯಾಗಿ ಗಾಂಧೀಜಿ ಸಭೆಗೆ ಬಂದರು. ಆದರೆ ಅವರ ಅಧ್ಯಕ್ಷಗಿರಿಯ ತರ-



ಹವೇ ಬೇರೆ. ಎಲ್ಲರೂ ಸಭೆಯಲ್ಲಿ ಕುಳಿತಿದ್ದರೂ ಅವರು ಅಧ್ಯಕ್ಷ ಪೀಠಕ್ಕೆ ಬರದೆ, ಎದುರಿಗೆ ಇದ್ದ ವಿದ್ಯಾರ್ಥಿನಿಲಯಕ್ಕೆ ಮೊದಲು ಹೋದರು. ವಿದ್ಯಾರ್ಥಿಗಳೆಲ್ಲ ಗಾಂಧೀಜಿಯವರನ್ನೇ ನಿರೀಕ್ಷಿಸುತ್ತಾ ಸಭೆಯಲ್ಲಿದ್ದರು. ಗಾಂಧೀಜಿ, ಒಂದು ಕೊಠಡಿಗೆ ಹೋಗಿ ನೋಡಿದರು. ಕೊಠಡಿಯಲ್ಲಿ ಪದಾರ್ಥಗಳೆಲ್ಲ ಅಸ್ತವ್ಯಸ್ತವಾಗಿ ಬಿದ್ದಿದ್ದವು. ಕೊಠಡಿಯ ತುಂಬ ಕಸ, ಪುಸ್ತಕಗಳನ್ನೇ ವಿದ್ಯಾರ್ಥಿಗಳು ಕಸದ ರಾಶಿಯಂತೆ ಒಟ್ಟಿದ್ದರು. ಹುಡುಗರು ಹಾಸಿಗೆಯನ್ನೇ ಎತ್ತಿರಲಿಲ್ಲ. ಗಾಂಧೀಜಿ, ಹಾಸಿಗೆಯನ್ನು, ಅದರೊಳಗಿನ ದುಪಟಿ-ಕಂಬಳಿಗಳನ್ನು ಮಡಚಿ ಹಾಕಿ ಅಚ್ಚುಕಟ್ಟಾಗಿ ಸುತ್ತಿಟ್ಟರು. ಕೊಠಡಿಯನ್ನು ಚೆನ್ನಾಗಿ ಗುಡಿಸಿ ಪುಸ್ತಕಗಳನ್ನೆಲ್ಲ ಜೋಡಿಸಿ ಎಲ್ಲ ಪದಾರ್ಥಗಳನ್ನೂ ಓರಣವಾಗಿಟ್ಟರು. ವಿದ್ಯಾರ್ಥಿನಿಲಯದ ವಾತಾವರಣದಲ್ಲಿ ಕೊಳಕು, ಅಲಸಿಕತೆ, ನಿಯಮರಹಿತ ಜೀವನ, ಅಚ್ಚುಕಟ್ಟು ಮತ್ತು ಶಿಸ್ತಿನ ಅಭಾವ ಎದ್ದು ಕಾಣುತ್ತಿದ್ದವು. ಒಂದು ಕೊಠಡಿಯನ್ನು ಸರಿ ಮಾಡಿ ಗಾಂಧೀಜಿ ಮುಂದಲ ಕೋಠಡಿಗೆ ಹೊರಡುವ ವೇಳೆಗೆ ವ್ಯವಸ್ಥಾಪಕರೆಲ್ಲ ಇದೇಕೆ ಗಾಂಧೀಜಿ ಬರಲಿಲ್ಲ

ಎಂದು ನೋಡಲು ಕೊಠಡಿ ಕಡೆಗೆ ಬಂದರು. ಅನಂತರ ಎಲ್ಲರೂ ಗಾಬರಿಯಿಂದ ಪರಕೆಗಳನ್ನು ತೆಗೆದುಕೊಂಡು ಕೊಠಡಿಗಳನ್ನೆಲ್ಲ ಗುಡಿಸಿ ಶುದ್ಧ ಮಾಡಿ ಪದಾರ್ಥಗಳನ್ನೆಲ್ಲ ಅಚ್ಚುಕಟ್ಟಾಗಿ ಇಟ್ಟರು. ಸಭೆಯಲ್ಲಿ ಗಾಂಧೀಜಿ "ಮೂಲ ಶಿಕ್ಷಣದ ಮುಖ್ಯ ಗುರಿ, ವಿದ್ಯಾರ್ಥಿಗಳಿಗೆ ಸ್ವಾವಲಂಬನೆ, ಪಾರಿಶುದ್ಧತೆ, ಕಾಯಕ ಇವುಗಳನ್ನು ಕಲಿಸುವುದಾಗಿರಬೇಕು. ಪ್ರತಿಯೊಬ್ಬ ಉಪಾಧ್ಯಾಯನೂ ವಿದ್ಯಾರ್ಥಿಯ ಸಮಸ್ತ ಚಟುವಟಿಕೆಗಳನ್ನೂ ಪ್ರೇರಿಸಬೇಕು. ಉಪಾಧ್ಯಾಯರು ಪ್ರತಿ ವಿದ್ಯಾರ್ಥಿಗೂ ನಿಗಾ ಕೊಡಬೇಕು. ಹಾಗೆ ಮಾಡಲು ಕಷ್ಟವಾದರೆ ವಿದ್ಯಾರ್ಥಿಗಳ ಸಂಖ್ಯೆಯನ್ನೇ ಕಡಿಮೆ ಮಾಡಿಕೊಳ್ಳಿ. ವಿದ್ಯಾರ್ಥಿಗಳ ಸಂಖ್ಯೆ ಕಡಿಮೆಯಾದರೂ ಸಂಸ್ಥೆ ಆದರ್ಶವಾಗಿರಬೇಕು. ಆದರ್ಶವಾಗಿಲ್ಲದ ವಿದ್ಯಾಸಂಸ್ಥೆ, ಬರಿಯ ಒಂದು ದೊಂಬಿ ಕೂಟ. ನಾನೂ ಇದರಲ್ಲಿ ಇನ್ನೂ ಹೆಚ್ಚು ಭಾಗವಹಿಸಬೇಕು. ಆದರೆ ಇತರ ಕೆಲಸಗಳ ಒತ್ತಡದಿಂದ ಸಾಧ್ಯವಾಗದುದಕ್ಕಾಗಿ ಪಶ್ಚಾತ್ತಾಪಪಡುತ್ತೇನೆ" ಎಂದು ಹೇಳಿದರು. "ಜೀವನವನ್ನೇ ಕಲೆಯಾಗಿ ಮಾಡದ ವಿದ್ಯೆ, ವಿದ್ಯೆಯೇ ಅಲ್ಲ. ಅದು ಪರೀಕ್ಷೆಗಳ ತೇರ್ಗಡೆಯಾಗಬಹುದು. ದೈವ ಭಕ್ತಿ, ಸತ್ಯ, ಅಹಿಂಸೆ, ಸ್ವಾವಲಂಬನೆ, ಸೇವಾ ಬುದ್ಧಿ, ದೇಶಪ್ರೇಮ ಇವುಗಳನ್ನು ಕಲಿಸುವುದೇ ನಿಜವಾದ ವಿದ್ಯೆ." ಎಂದೂ ಹೇಳಿದರು. ಗಾಂಧೀಜಿ ರಾಮಕೃಷ್ಣ ಹರಿಜನ ವಿದ್ಯಾನಿಲಯಕ್ಕೆ ಒಂದು ಸಲ ಭೇಟಿ ಕೊಟ್ಟಾಗ ಸಂಜೆ ಏಳು ಗಂಟೆಯಾಗಿದ್ದಿತ್ತು. ಆ ವಿದ್ಯಾಲಯಕ್ಕೆ ವಿದ್ಯುತ್ ಸೌಕರ್ಯ ಇರಲಿಲ್ಲ. ವ್ಯವಸ್ಥಾಪಕರು ಅತ್ಯಂತ ಸಂಕೋಚದಿಂದ ಒಂದು ಹರಿಕೇನ್ ಲ್ಯಾಂಟರ್ನ್ ತಂದರು. ಗಾಂಧೀಜಿ ಅದರ ಬೆಳಕಿನಲ್ಲಿಯೇ ವಿದ್ಯಾಲಯವನ್ನೆಲ್ಲ ಸಂದರ್ಶಿಸಿದರು. ಲಾಂದ್ರದ ಬೆಳಕಿನಲ್ಲಿಯೇ ಗಾಂಧೀಜಿ ಭಾಷಣ ಮಾಡಿದರು ಅವರ ಭಾಷಣದಲ್ಲಿ ವಾಗಾಡಂಬರವಾಗಲೀ ವಕ್ತೃತ್ವದ ವೈಖರಿಯಾಗಲೀ ಇರಲಿಲ್ಲ. ತಂದೆ ಮಕ್ಕಳಿಗೆ, ಸ್ನೇಹಿತರಿಗೆ ಹೇಳುವಂತೆ ಶ್ರದ್ಧಾಪೂರ್ವಕವಾದ ಮಾತುಗಳು. ಮಾತುಗಳು ಸಾಮಾನ್ಯವಾದರೂ ಹೇಳುತ್ತಿದವರ ಯೋಗ್ಯತೆ ಸಾಧನೆಗಳಿಂದ ಅವಕ್ಕೆ ಋಷಿವಾಣಿಯ ಪ್ರಭಾವ ಬಂದಿತ್ತು. ಸತ್ಯ, ಅಹಿಂಸೆ ದೇವರು, ಸೇವೆ, ತ್ಯಾಗ, ಪ್ರೇಮ ಈ ಮಾತುಗಳನ್ನು ಎಷ್ಟೋ ಬಾರಿ ಕೇಳಿದ್ದರೂ ಗಾಂಧೀಜಿಯ ಬಾಯಿನಲ್ಲಿ ಅವು ಬಂದಾಗ ಅವು ಹೆಚ್ಚು ಸತ್ವಪೂರ್ಣವಾಗಿ ತೋರಿದವು. ಅಂತಹ ಆತ್ಮೀಯವಾದ ಭಾಷಣದ ನಂತರ ವ್ಯವಸ್ಥಾ

---



## ನಮ್ಮ ನಿದ್ರೆ

ಬಾಪೂಜಿ ನಮ್ಮನೆಚ್ಚರಿಸಿದರು ; ಆದ್ರೆ
ಇಂದಿಗೂ ಮಾಯವಾಗಿಲ್ಲ ಆ ನಿದ್ರೆ-
ಸ್ವಲ್ಪ ಕಣ್ದೆರೆದು ಮಲಗಿದೆವು-
-ಮುಸುಕೆಳೆದು.
ಮುಸುಕೆಳೆದುಕೊಂಡ ಚದ್ದರು ಮಾತ್ರ-
-ಬಿಳಿದು.

— ದಿನಕರ ದೇಸಾಯಿ

ಪಕರು ಗಾಂಧೀಜಿಯ ಕೈಯಲ್ಲಿ ಸಂದರ್ಶಕರ ಪುಸ್ತಕವನ್ನು (Visitors Book) ಕೊಟ್ಟರು. ಅದರಲ್ಲಿ ಬರೆಯಲು, ಗಾಂಧೀಜಿಗೆ ಒಂದು ಮೇಜನ್ನಾಗಲೀ ಓಟಮೇಜವನ್ನಾಗಲೀ ತರ ಬೇಕೆಂದು ವ್ಯವಸ್ಥಾಪಕರು ಆತುರ ಆತುರ ದಿಂದ ಓಡಾಡುತ್ತಿದ್ದರು. ಗಾಂಧೀಜಿ ವ್ಯವ ಸ್ಥಾಪಕರ ಸಂಭ್ರಮವನ್ನು ನಿಲ್ಲಿಸಿ, ಸಂದರ್ಶ ಕರ ಪುಸ್ತಕವನ್ನು ತಮ್ಮ ತೊಡೆಯ ಮೇಲೆ ಇಟ್ಟುಕೊಂಡು ಅದರಲ್ಲಿ ಹೀಗೆ ಬರೆದರು; "I hope the boys of the Vidyalaya will have faith in God and serve the Country" [ವಿದ್ಯಾಲಯದ ವಿದ್ಯಾರ್ಥಿಗಳು ದೇವರಲ್ಲಿ ಭಕ್ತಿಯುತರಾಗಿ ದೇಶಸೇವೆ ಮಾಡುವರೆಂದು ನಂಬುತ್ತೇನೆ] ಈ ವಾಕ್ಯದಲ್ಲಿಯೇ ವಿದ್ಯಾಭ್ಯಾಸದ ಗುರಿಯೆಲ್ಲ ಅಡಕವಾಗಿದೆ.

ಇಂತಹ ಒಬ್ಬ ಮನುಷ್ಯ, ನಮ್ಮ ಬಾಳಿನಲ್ಲಿ ನಮ್ಮ ಕಣ್ಣೆದುರಿಗೇ ಜೀವಿಸಿ, ಲಕ್ಷಾಂತರ ಜನ ಸಾವಿರಾರು ವರುಷಗಳಲ್ಲಿ ಮಾಡಲಾಗದ ಕಾರ್ಯ ವನ್ನು ಮಾಡಿ, ನಮಗೆ ಸ್ವಾತಂತ್ರವನ್ನೂ ಕೊಟ್ಟು ಹೋದನು. ಅವನ ಕೃತಿಗಳು, ಸಾಧನೆ ಗಳು, ಈಗ ಪ್ರಕಟವಾಗಿರುವ ಅವರ ಚರಿತ್ರೆ ಗಳಿಗಿಂತ ಸಾವಿರ ಪಾಲು ಹೆಚ್ಚು ಅದ್ಭುತ ವಾದುವು. ಮಾನವ ಜನಾಂಗದಲ್ಲಿ ಅಂತಹ ಮನುಷ್ಯ ಈ ವರೆಗೆ ಹುಟ್ಟಲೇ ಇಲ್ಲ. "ಇಂತಹ ಒಬ್ಬ ಮನುಷ್ಯ ಈ ಭೂಮಿಯಲ್ಲಿ ಎಲ್ಲರಂತೆ ಹುಟ್ಟಿ, ಕಾರ್ಯಮಾಡಿ, ನಮ್ಮ ಜೊತೆ ಹೆಜ್ಜೆ ಇಟ್ಟು ನಮ್ಮೊಂದಿಗೆ ನಡೆದ ಎಂಬುದನ್ನು ನಂಬುವುದೇ ಮುಂದಲ ಜನಾಂಗಕ್ಕೆ ಕಷ್ಟವಾಗುವುದು" ಎಂದು ವಿಜ್ಞಾನಿ ಐನ್‌ಸ್ಟೈನ್‌ರು ಹೇಳಿದ್ದಾರೆ. ೩೫ ಕೋಟಿ ಜನರನ್ನು ಅವನು ಸತತವಾಗಿ ಇಪ್ಪತ್ತೈದು ವರುಷಗಳ ಕಾಲ, ಜಗತ್ತಿನ ಅತಿ ಪ್ರಬಲರಾಷ್ಟ್ರಕ್ಕೆ ವಿರೋಧವಾಗಿ ಧಾರ್ಮಿಕ ಯುದ್ಧದಲ್ಲಿ ತೊಡಗಿಸಿದನು. ನೂರೈವತ್ತು ವರ್ಷಗಳಿಂದ ಪರಾಧೀನತೆಯಲ್ಲಿ ದೀನವಾಗಿದ್ದ ರಾಷ್ಟ್ರಕ್ಕೆ, ಬ್ರಿಟಿಷ್ ಸಾಮ್ರಾಜ್ಯವನ್ನೇ ಜಯಿ ಸುವ ಆತ್ಮಶಕ್ತಿಯನ್ನು ಕೊಟ್ಟನು. ಆತ್ಮ ಗುಣಗಳನ್ನು ವ್ಯಾವಹಾರಿಕ ಪ್ರಪಂಚಕ್ಕೆ ಇಳಿಸಿ, ಆತ್ಮದ ಮೌಲ್ಯ ಎಂದೆಂದಿಗೂ ಶಾಶ್ವತವಾದು ದೆಂಬುದನ್ನು ಗಾಂಧೀಜಿ ತೋರಿಸಿದರು. ತಾವು ಮರೆತಿದ್ದ ಭಾರತೀಯತ್ವವನ್ನು ಮತ್ತೆ ಭಾರತೀ ಯರಿಗೆ ಜ್ಞಾಪಿಸಿಕೊಟ್ಟರು. ಜನ ಅವರನ್ನು ಬಾಪು ಎಂದು ಕರೆದರು. ದೇಶದ ಜನತೆಗೆಲ್ಲ ಸೊಳ್ಳೆ ಪರದೆ ಸಿಕ್ಕದ ಕಾರಣ ತನಗೂ ಬೇಡ ವೆಂದು, ಮುಖಕ್ಕೆ ಸೀಮೆ ಎಣ್ಣೆ ಬಳಿದು ಕೊಂಡರು; ಎಲ್ಲರಿಗೂ ಮೈತುಂಬ ಬಟ್ಟೆ ಸಿಗ ದುದರಿಂದ ತುಂಡು ಪಂಚೆ ಧರಿಸಿ ಅರೆಬೆತ್ತಲೆ ತಿರುಗಿದರು. ಎಲ್ಲರಿಗೂ ಹೊಟ್ಟೆ ತುಂಬ ಆಹಾರ ಸಿಗದುದರಿಂದ ತಾವೂ ಗೆಡ್ಡೆ, ಗೆಣಸು-ನೆಲಗಡಲೆ ಕಾಯಿ ತಿಂದರು; ಎಲ್ಲರಿಗೂ ಮನೆ ಸಿಗದುದ ರಿಂದ ತಾವೂ ಹುಲ್ಲುಗುಡಿಸಿಲಿನಲ್ಲಿ ಜೀವಿಸಿದರು. ಎಲ್ಲರಿಗೂ ವೈದ್ಯ ಸೌಲಭ್ಯ ದೊರಕದುದರಿಂದ



ಮಣ್ಣು ಚಿಕಿತ್ಸೆ, ನೀರುಚಿಕಿತ್ಸೆ, ಪ್ರಕೃತಿ ಚಿಕಿತ್ಸೆ, ರಾಮನಾಮ ಜಪಗಳನ್ನು ಅನುಸರಿಸಿದರು. ದರಿದ್ರರಾಗಿದ್ದರೂ ನಮಗೆ ಆತ್ಮಗೌರವವನ್ನೂ ಕೆಚ್ಚನ್ನೂ ಎದೆಗಾರಿಕೆಯನ್ನೂ ಹತ್ತು ಹನ್ನೆರಡು ಸಲ ಸೆರೆಮನೆವಾಸವನ್ನು ಅನುಭವಿಸುವ ಧೈರ್ಯವನ್ನೂ ಕೊಟ್ಟರು. ಅರವತ್ತು ಕೋಟಿ ರೂಪಾಯಿಗಳ ಬಟ್ಟೆ, ಪರದೇಶದಿಂದ ಇಲ್ಲಿಗೆ ಬರುತ್ತಿರುವುದರಷ್ಟಕ್ಕೆ ಮುನಿದು ಬ್ರಿಟಿಷ್ ಸರ್ಕಾರವನ್ನೇ ಕೊನೆಗಾಣಿಸಿದರು.

ನಾವು ಗಾಂಧೀಜಿಯ ಬೋಧನೆಯಿಂದ ಬಹು ದೂರ ಸರಿದು ಬಂದಿದ್ದೇವೆ. ಇಂದು ಎಲ್ಲೆಲ್ಲಿಯೂ ಅವರ ಶತಮಾನೋತ್ಸವವನ್ನು ಆಚರಿಸುತ್ತಿದ್ದೇವೆ. ಈ ಆಚರಣೆ ಬರಿಯ ಕಟ್ಟಡ, ಸ್ತೂಪ, ಸ್ತಂಭ, ಶಿಲೆ ಇವುಗಳ ರೂಪವನ್ನು ಹೊಂದಿ ಗಾಂಧೀಜಿಯ ಆತ್ಮವನ್ನು ಅದರಲ್ಲಿ ಬಂಧಿಸುತ್ತಿದೆ. ಸ್ವಾತಂತ್ರ್ಯಾನಂತರ ಭಾರತ, ಜಡರಾಷ್ಟ್ರವಾಗಿರುವುದರ ಸಂಕೇತ ಇದು. ನಮ್ಮ ನಡುವೆ ಇದ್ದು, ಬಾಳಿ, ನಮ್ಮ ಸೇವೆಯಲ್ಲಿಯೇ ವಿಶ್ವಮಾನವ ಸೇವೆಯನು ಮಾಡಿದ ಗಾಂಧೀಜಿಯ ಆದರ್ಶಗಳನ್ನು ನಮ್ಮ ಬಾಳಿನಲ್ಲಿ ಆಚರಿಸದೆ ಅವರಿಗೆ ಬರಿಯ ದೇವಾಲಯವನ್ನು ಕಟ್ಟಿ ಪೂಜಿಸಿದರೆ ಆ ಮಹಾತ್ಮನು ನಮ್ಮ ದೇಶದಲ್ಲಿ ಹುಟ್ಟಿದುದೇ ವ್ಯರ್ಥವಾಗುವುದು. ಅವರ ಕಾಲದಲ್ಲಿ ಹುಟ್ಟಿ ಬೆಳೆದು ಅವರ ಕಾರ್ಯವನ್ನು ನೋಡಿ, ಅವರ ಜೊತೆ ಬಾಳಿದ ಭಾಗ್ಯಶಾಲಿಗಳಾದ ನಾವು, ಅವರ ಸ್ಮಾರಕವನ್ನು ಆಚರಿಸುವುದು ಕಲ್ಲುಗುಂಡು ಸಿಮೆಂಟುಗಳ ಲಕ್ಷಾಂತರ ರೂಪಾಯಿ ಕಟ್ಟಡಗಳಿಂದಲ್ಲ. ತಾನು ಒಂದು ದೇವರಾಗುವುದನ್ನೂ ತನಗಾಗಿ ಒಂದು ಮತ ಅಥವಾ ಮಠವಾಗುವುದನ್ನೂ ತನ್ನದೇ ಒಂದು ಪಂಥವಾಗುವುದನ್ನೂ ಗಾಂಧೀ ಎಂದೂ ಒಪ್ಪಲಿಲ್ಲ. ಒಂದು ಸಲ ಗಾಂಧೀಜಿ, "ನನ್ನ ತತ್ವಗಳಲ್ಲಿ ನಿಮಗೆ ಒಪ್ಪಿಗೆಯಾಗುವುದನ್ನು ನೀವು ಅನುಸರಿಸುವುದಕ್ಕಿಂತ ಹೆಚ್ಚು ಪ್ರಿಯವಾದುದು ನನಗೆ ಯಾವುದೂ ಇಲ್ಲ" ಎಂದು ಹೇಳಿದರು. ಬೊಂಬಾಯಿನ ಒಂದು ಸಮಿತಿ ಹತ್ತು ಲಕ್ಷ ರೂ. ವೆಚ್ಚದಲ್ಲಿ ಅವರ ಪ್ರತಿಮೆಯನ್ನು ಸ್ಥಾಪಿಸುವುದಾಗಿ ಮುಂದೆ ಬಂದಾಗ ಗಾಂಧೀಜಿ, "ಹತ್ತು ಲಕ್ಷ ಇದಕ್ಕೆ ಯಾಕೆ ವೆಚ್ಚ? ಈ ಹತ್ತು ಲಕ್ಷದಲ್ಲಿ ಬೊಂಬಾಯಿನ ಬಡವರಿಗೆ ಮನೆಗಳನ್ನು ಕಟ್ಟಿಕೊಟ್ಟರೆ ಎಷ್ಟೋ ಒಳ್ಳೆಯದಾಗುವುದು" ಎಂದರು. ಅತ್ಯಂತ ವೈಭವದ ಆಡಳಿತಗಳನ್ನು ನಡೆಸುತ್ತಿರುವ ಕೇಂದ್ರ ಮತ್ತು ಪ್ರಾಂತ ಸರ್ಕಾರಗಳ ಮತ್ತು ಗಾಂಧೀಸ್ಮಾರಕ ನಿಧಿಯ ಕಿವಿಗೆ ಗಾಂಧೀಜಿಯ ಈ ಕಿರುದನಿ ಕೇಳಿಸುವುದೆ? ಲಕ್ಷಾಂತರ ರೂ. ವೆಚ್ಚದಲ್ಲಿ ನಿರ್ಮಿಸಿರುವ ಗಾಂಧೀ ಭವನಗಳಿಗೆ ಸಹ, ಶ್ರೋತೃಗಳನ್ನೂ ಪ್ರೇಕ್ಷಕರನ್ನೂ ಆಕರ್ಷಿಸಬೇಕಾದರೆ ಚಲನಚಿತ್ರ ನಟನಟಿಯರ ಕಾರ್ಯಕ್ರಮವನ್ನು ಏರ್ಪಡಿಸಬೇಕಾದ ದುರ್ಗತಿ ಒದಗಿರುವಾಗ ಇಂತಹ ಕಲ್ಲು ಸಿಮೆಂಟುಗಳ ಸ್ಮಾರಕಗಳಿಂದ ಪ್ರಯೋಜನವೇನು? ಅದರ ಬದಲು ಆ ಹಣವನ್ನು ಗ್ರಾಮಾಂತರಗಳಲ್ಲಿ ನೀರಿನ ವ್ಯವಸ್ಥೆ, ಹರಿಜನರ ಏಳಿಗೆ, ಮಕ್ಕಳಿಗೆ ಉತ್ತಮವಾದ ಶಾಲೆ, ಆಟದ ಬಯಲು ಮುಂತಾದ ಗಾಂಧೀಜಿಯವರಿಗೆ ಪ್ರಿಯವಾದ ಕಾರ್ಯಗಳಲ್ಲಿ ಉಪಯೋಗಿಸಬಾರದೆ?

ಗಾಂಧೀಜಿಯ ಬೋಧನೆಗಳನ್ನು ನಮ್ಮ ನಿತ್ಯ ಜೀವನದಲ್ಲಿ ಇಂದಿನ ಪರಿಸ್ಥಿತಿಗೆ ಅಳವಡಿಸಿಕೊಂಡು ಜನತೆಯೂ ಸರ್ಕಾರಗಳೂ ನಡೆಯುವುದೇ ನಾವು ಗಾಂಧೀಜಿಗೆ ಅರ್ಪಿಸುವ ಯೋಗ್ಯ ಸ್ಮಾರಕವಾಗುವುದು.

*



ಜಗತ್ತಿನಲ್ಲಿಯ ಅಪಾಯಕರ ಸಂಗತಿಗಳಲ್ಲಿ ಇವು ಮುಖ್ಯ- ಅರ್ಧಮರ್ಧ ಮೂರ್ಖನಾಗಿರುವುದು ಅಥವಾ ಅರ್ಧಮರ್ಧ ಜಾಣನಾಗಿರುವುದು. —ಗಯಟೆ

ಟಿ. ಎಸ್. ಸಂಜೀವರಾವ್

# ಭಾರತದ ಹಡಗುಗಳು ಅಂದು - ಇಂದು

ಮೂರೂ ದಿಕ್ಕುಗಳಲ್ಲಿ ಸಮುದ್ರದಿಂದ ಆವರಿಸಲ್ಪಟ್ಟ ಭಾರತಕ್ಕೆ ಸಮುದ್ರಯಾನ, ನೌಕೆಗಳನ್ನು ಕಟ್ಟುವುದು, ನಡೆಸುವುದೂ ಮತ್ತು ಸಾಗರೋತ್ತರ ವ್ಯಾಪಾರ ಇವುಗಳಲ್ಲಿ ಆಸಕ್ತಿ ಸಹಜವಾಗಿಯೇ ಬಂದಿದೆ. ಈ ಜಲಾವರಣದ ಮಹತ್ವ ಉತ್ತರ ದಿಕ್ಕಿನಲ್ಲಿ ಕೋಟೆ ಕಟ್ಟಿದಂತೆ ನಿಂತಿರುವ ಹಿಮಾಚ್ಛಾದಿತ ಪರ್ವತ ಶ್ರೇಣಿಗಳಿಂದ ಇನ್ನೂ ಹೆಚ್ಚಿಸಲ್ಪಟ್ಟಿದೆ. ಭಾರತಕ್ಕೆ ಇತರ ದೇಶಗಳ ಸಂಪರ್ಕ, ಮುಖ್ಯವಾಗಿ ವ್ಯಾಪಾರ, ವ್ಯವಹಾರ, ಜಲ ಮಾರ್ಗವಾಗಿಯೇ ಆಗತಕ್ಕುದಾಗಿದೆ.

ಭಾರತದ ದೇಶಾಂತರ ವ್ಯಾಪಾರ ವರ್ಷಂಪ್ರತಿ ೩೦೦೦ ಕೋಟಿ ರೂಪಾಯಿಗಳಿಗೂ ಹೆಚ್ಚಾಗಿ ಇದೆ. ಬಹುತರವಾಗಿ ಈ ವ್ಯಾಪಾರ



ಹಡಗುಗಳಲ್ಲಿಯೇ ಸಾಗುತ್ತದೆ. ಸಾಗಾಣಿಕೆಗೋಸ್ಕರ ಹಡಗುಗಳಿಗೆ ಕೊಡುವ ಬಾಡಿಗೆಯೇ ವರ್ಷಕ್ಕೆ ಸುಮಾರು ೩೦೦ ಕೋಟಿ ರೂಪಾಯಿನಷ್ಟು ಆಗುತ್ತದೆ ಎಂದರೆ ವ್ಯಾಪಾರಿ ಹಡಗುಗಳು ನಮ್ಮ ದೇಶಕ್ಕೆ ಎಷ್ಟು ಮುಖ್ಯ ಎಂದು ಅರಿವಾಗಬೇಕು. ವಿಷಾದದ ಸಂಗತಿ ಏನೆಂದರೆ ಈ ವ್ಯಾಪಾರದಲ್ಲಿ ಶೇಕಡ ೮೫ ರಷ್ಟು ಪರದೇಶಿ ಹಡಗುಗಳಲ್ಲೇ ಸಾಗಾಣಿಕೆಯಾಗುತ್ತಿದೆ ಇನ್ನುಳಿದ ಕೇವಲ ೧೫ ರಷ್ಟು ಸ್ವದೇಶಿ ಹಡಗುಗಳಲ್ಲಿ ಹೋಗುತ್ತದೆ. ಏಕೆಂದರೆ, ನಮ್ಮಲ್ಲಿ ಸಾಕಷ್ಟು ಹಡಗುಗಳಿಲ್ಲ. ಅಂದರೆ ಸಾಗಾಣಿಕೆಯ ವಿಷಯದಲ್ಲಿ ಭಾರತ ಇನ್ನೂ ಬಹಳ ಮಟ್ಟಿಗೆ ಪರಾವಲಂಬಿಯಾಗಿದೆ; ಅದರಿಂದಾಗಿ, ವರ್ಷಂಪ್ರತಿ ನಾವು ಕೋಟ್ಯಾನುಕೋಟಿ ರೂಪಾಯಿಗಳನ್ನು ಪರದೇಶದವರ ಬಾಯಿಗೆ ಹಾಕುತ್ತಿದ್ದೇವೆ.

ಭಾರತಕ್ಕೆ ೫೭೦೦ ಕಿಲೋಮೀಟರ್ ಉದ್ದದಷ್ಟು ಕಡಲ ತೀರವಿದೆ. ಈ ತೀರ ಪ್ರದೇಶದಲ್ಲಿ ಎಂಟು ದೊಡ್ಡ ಬಂದರುಗಳೂ ನೂರಾರು ಸಣ್ಣಪುಟ್ಟ ಬಂದರುಗಳೂ ದೇಶಕ್ಕೆ ಬಾಗಿಲುಗಳಂತಿದ್ದು ಹೊರಗಣ ಮತ್ತು ಒಳಗಣ ವ್ಯಾಪಾರಕ್ಕೆ ಅನುಕೂಲಗಳನ್ನೊದಗಿಸುತ್ತಿವೆ. ವಿಪತ್ತಿನ ಸಮಯದಲ್ಲಂತೂ ದೇಶದ ಸುರಕ್ಷತೆ ಈ ಬಂದರುಗಳ ಮೇಲೂ, ವ್ಯಾಪಾರಿ ನೌಕಾಪಡೆಯ ಮೇಲೂ ಬದ್ಧಿರುತ್ತದೆ. ಯುದ್ಧ ನೌಕಾ ಪಡೆಯಂತೂ ಇದ್ದೇ ಇರಬೇಕಲ್ಲ. ಇದು ಇದ್ದೂ ಸಾಕಷ್ಟು ವ್ಯಾಪಾರಿ ನೌಕಾ ಪಡೆ ಇಲ್ಲದಿದ್ದರೆ ವಿಪತ್ತಿನ ಕಾಲದಲ್ಲಿ ಆಮದು ರಫ್ತುಗಳು ಸಲೀಸಾಗಿ ಪ್ರವಹಿಸದೆ ದೇಶಕ್ಕೆ ದೇಶವೇ ಉಸಿರು ಕಟ್ಟಿದಂತಾಗುತ್ತದೆ. ವ್ಯಾಪಾರಿ ನೌಕಾಪಡೆಯನ್ನು ರಕ್ಷಣೆಯ ಎರಡನೇ ಕೋಟೆ(Second line of defence) ಎಂದು ಕರೆಯುತ್ತಾರೆ. ಇದನ್ನರಿತೇ ಸಮುದ್ರ ತೀರವಿರುವ ಎಲ್ಲ ರಾಷ್ಟ್ರಗಳೂ ಈಗ ತಮ್ಮ ವ್ಯಾಪಾರಿ ನೌಕಾಪಡೆಯ ಅಭಿವೃದ್ಧಿಗೋಸ್ಕರ ಮಹತ್ವದ ಪ್ರಯತ್ನಗಳನ್ನು ಮಾಡುತ್ತಿವೆ. ಈ ವಿಷಯದಲ್ಲಿ ಭಾರತವೂ ಮುಂದಡಿ ಇಡುತ್ತಿದೆ.

ಹಡಗುಗಳನ್ನು ಕಟ್ಟುವುದು ಹಾಗೂ ಅವುಗಳಲ್ಲಿ ಸರಕುಗಳನ್ನು ತುಂಬಿಕೊಂಡು ಹೋಗಿ ದೇಶಾಂತರಗಳಲ್ಲಿ ವ್ಯಾಪಾರ ಮಾಡುವುದು, ಇವುಗಳಲ್ಲಿ ಭಾರತಕ್ಕೆ ಭವ್ಯವಾದ ಮತ್ತು ದೀರ್ಘವಾದ ಪರಂಪರೆ ಇದೆ. ಪ್ರಾಯಶಃ ಜಗತ್ತಿನಲ್ಲೇ ಅತಿ ಪ್ರಾಚೀನವಾದ ಹಡಗು ಕಟ್ಟುವ ತೊಟ್ಟಿಯ ಅವಶೇಷ ಇರುವುದು ಭಾರತದಲ್ಲೇ. ಇದು ಗುಜರಾತಿನ ಕ್ಯಾಂಬೆ ಆಖಾತದ ತೀರ ಪ್ರದೇಶದಲ್ಲಿ ಸಾಬರಮತಿ ಮತ್ತು ಭೊಗಾವೋ ನದಿಗಳ ನಡುವೆ ಲೋಥಲ್ ಎಂಬ

ಗುಜರಾತದಲ್ಲಿನ ಕ್ಯಾಂಬೆ ಆಖಾತದ ತೀರಕ್ಕೆ ಸಮೀಪವಾಗಿ ಸಾಬರಮತಿ ಹಾಗೂ ಭೋಗಾವೂ ನದಿಗಳಿಗೆ ಮಧ್ಯ ಲೋಥಲ್ ೪೩ ಎಂಬ ಕಡೆ ಖನನದಲ್ಲಿ ಕಂಡು ಬಂದ ಪುರಾತನ ಹಡಗು ನಿರ್ಮಾಣದ ತೊಟ್ಟಿ. ಕ್ರಿ. ಪೂ. ೩೦೦೦-೧೫೦೦ ಕಾಲದ್ದು.



ಕಡೆ ಪ್ರಾಚೀನ ಶೋಧನಕ್ಕಾಗಿ ಅಗೆದಾಗ ಕಂಡು ಬಂದಿತು. ಸರಿಸುಮಾರು ಸಿಂಧೂ-ಕೊಳ್ಳದ ಸಂಸ್ಕೃತಿಯ ಕಾಲಕ್ಕೆ ಸೇರಿದ ಈ ವಿಶಾಲವಾದ ತೊಟ್ಟಿ, ತೂಬು, ಅಡ್ಡ ಬಾಗಿಲು, ನಾಲೆ ಮೊದಲಾದ ತಂತ್ರ ವಿಶೇಷಗಳಿಂದ ಸಜ್ಜು ಮಾಡಲ್ಪಟ್ಟಿದ್ದು ಭಾರಿ ಹಡಗುಗಳನ್ನು ಕಟ್ಟಲು ಹಾಗೂ ರಿಪೇರಿ ಮಾಡಲು ಉಪಯೋಗಿಸಲ್ಪಡುತ್ತಿತ್ತು. ಅಲ್ಲಿ ಮತ್ತು ಇತರ ಕಡೆ ಸಿಕ್ಕಿರುವ ಇನ್ನೂ ಕೆಲವು ಅವಶೇಷಗಳನ್ನು ನೋಡಿದರೆ, ಹಾಯಿ, ಕಂಬ, ವಿಶಾಲವಾದ ಚತುಷ್ಕೋಣ ಹಾಯಿಗಳು, ಭಾರವಾದ ಲಂಗರುಗಳು, ಸುಸಜ್ಜಿತವಾದ ಕೋಣೆ ಮೊದಲಾದ ಸಾಧನ ಸೌಕರ್ಯಗಳಿಂದ ಅಣಿಯಾದ ಹಡಗುಗಳು ಆ ಅತಿ ಪ್ರಾಚೀನ ಕಾಲದಲ್ಲೂ ಭಾರತದ ಸಾಗರೋತ್ತರ ವ್ಯಾಪಾರದಲ್ಲಿ ನಿರತವಾಗಿದ್ದುವು ಎಂದು ಕಂಡುಬರುತ್ತದೆ.

ನೌಕಾ ವಿಷಯದಲ್ಲಿ ಪ್ರಾಚೀನ ಭಾರತೀಯರಿಗಿದ್ದ ತೀವ್ರವಾದ ಆಸಕ್ತಿ, ವೇದ, ರಾಮಾಯಣ, ಮಹಾಭಾರತ, ಧರ್ಮಶಾಸ್ತ್ರ, ಜಾತಕ ಕತೆ ಇವುಗಳಲ್ಲೆಲ್ಲಾ ಎದ್ದು ಕಾಣುತ್ತದೆ. ಧನಾಕಾಂಕ್ಷಿಗಳಾದ ವರ್ತಕರು, ಯಶೋಕಾಂಕ್ಷಿಗಳಾದ ರಾಜಪುತ್ರರು, ವಸಿಷ್ಠರಂತಹ ಮಹರ್ಷಿಗಳು ಸುಸಜ್ಜಿತವಾದ ಹಡಗುಗಳಲ್ಲಿ ಸಮುದ್ರಯಾನ ಮಾಡುತ್ತಿದ್ದ ವಿಚಾರ ಅನೇಕ ಕಡೆ ಬರುತ್ತವೆ. ವೇದ ಮಂತ್ರದಲ್ಲಿ ಬರುವ, ತುಗ್ರ ಎಂಬ ರಾಜರ್ಷಿ ತನ್ನ ಮಗ ಭುಜ್ಯನನ್ನು ದೂರದ್ವೀಪ ನಿವಾಸಿಗಳಾದ ವೈರಿಗಳ ಮೇಲೆ ಯುದ್ಧ ಮಾಡಲು ನೌಕಾಸೇನೆಯ ಸಹಿತ ಕಳುಹಿಸಿದ ವಿಷಯ ಭಾರತದ ಇತಿಹಾಸದಲ್ಲೇ ಅತಿ ಪ್ರಾಚೀನ ನೌಕಾಯುದ್ಧದ ಸಂಗತಿಯಾಗಿದೆ.

ಕಡಲ ಸಾಹಸದ ಕತೆಗಳ ಖನಿ ಎಂದರೆ ಸೋಮದೇವನ "ಕಥಾ ಸರಿತ್ಸಾಗರ". ಇದರಲ್ಲಿನ ನೂರಾರು ಕತೆಗಳ ಉದ್ದಕ್ಕೂ ದೀರ್ಘ ಸಮುದ್ರಯಾನ, ದ್ವೀಪಾಂತರ ವ್ಯಾಪಾರ, ನೌಕಾ ಚಟುವಟಿಕೆಗಳು ಹಾಸು ಹೊಕ್ಕಾಗಿ ಹೆಣೆದುಬಂದಿವೆ. ಆಗಿನ ಕಾಲದ ಭಾರತೀಯರ ತೀವ್ರ ನೌಕಾಸಕ್ತಿ ಕತೆ ಕತೆಯಲ್ಲೂ ಪುಟಿದು ಕಾಣುತ್ತೆ. ಈ ಕತೆಗಳಲ್ಲಿ ಬರುವ ಅದೆಷ್ಟು ಜನ ರಾಜಕುಮಾರರು, ವ್ಯಾಪಾರಿಗಳು ದ್ರವ್ಯ ಸಂಪಾದನೆಗೋಸ್ಕರ "ಸುವರ್ಣ ಭೂಮಿ" ಯನ್ನು ಕುರಿತು ಹಡಗುಗಳಲ್ಲಿ ಹೋಗುತ್ತಾರೆ! ಸಮುದ್ರ ಮಧ್ಯದಲ್ಲಿ ಬಿರುಗಾಳಿಗೆ ಸಿಕ್ಕು ಯಾವುದೋ ದೇಶದ ದಡದಲ್ಲಿ ಹೋಗಿ ಬಿದ್ದು ಚಿತ್ರ ವಿಚಿತ್ರಗಳನ್ನು ಕಂಡವರೆಷ್ಟು ಜನ! ಸಂಪತ್ತನ್ನು ಹೇರಿಕೊಂಡು ವರ್ಷಾನಂತರ ತಾಯಿನಾಡಿಗೆ ಹಿಂದಿರುಗಿದವರೆಷ್ಟು ಜನ!

ಮೌರ್ಯರ ಕಾಲಕ್ಕಾಗಲೇ (ಕ್ರಿ. ಪೂ. ೩೨೪-೨೩೨) ಭಾರತದ ನೌಕಾನಿರ್ಮಾಣ ಉದ್ಯಮವು ಬಹು ಮುಂದುವರೆದಿದ್ದಿತು. ಸರಕಾರವೇ ಇದನ್ನು ಖುದ್ದು ನಡೆಸುತ್ತಿತ್ತು. ತಾವು ಕಟ್ಟಿದ ಹಡಗುಗಳನ್ನು ಸರಕಾರ ವ್ಯಾಪಾರಿಗಳಿಗೆ ಬಾಡಿಗೆಗೆ ಕೊಡುತ್ತಿತ್ತು. ಚಂದ್ರಗುಪ್ತ ಮೌರ್ಯನ ಯುದ್ಧ ಖಾತೆಯ ಷಡಂಗಗಳಲ್ಲಿ ನೌಕಾ ಬಲವೂ ಒಂದಾಗಿತ್ತು. ಇದು ನಾವಾಧ್ಯಕ್ಷ ಎಂಬ ಅಧಿಕಾರಿಯ ಕೈಕೆಳಗಿತ್ತು. ಜಲಸಾರಿಗೆಯ ಉದ್ಯಮವನ್ನು ರಾಷ್ಟ್ರೀಕರಣ ಮಾಡಬೇಕು ಎನ್ನುವವರಿಗೆ ಮೌರ್ಯರು ಮೇಲ್ಪಂಕ್ತಿ ಹಾಕಿ ಕೊಟ್ಟಿದ್ದಾರೆ!

ಶಾತವಾಹನರ ಕಾಲದಲ್ಲಿ (ಕ್ರಿ. ಪೂ. ೨೦೦ ರಿಂದ ಕ್ರಿ. ಶ. ೨೫೦) ಭಾರತದ ವಿದೇಶ ಸಂಬಂಧಗಳು ಬಹುವಾಗಿ ವೃದ್ಧಿಗೊಂಡವು. ಭೂಮಾರ್ಗ ಹಾಗೂ ಸಮುದ್ರ ಮಾರ್ಗವಾಗಿಯೂ ಭಾರತ, ಪಶ್ಚಿಮಏಶಿಯಾ, ಗ್ರೀಸ್, ರೋಮ್, ಈಜಿಪ್ಟ್, ಚೀನ ಹಾಗೂ ಇತರ



ಆಂಧ್ರ ರಾಜರ ನಾಣ್ಯಗಳ ಮೇಲೆ ಆಗಿನ ಕಾಲದ ಹಡಗದ ಚಿತ್ರ. ಕ್ರಿ. ಶ. ೨೦೦

ಪೌರ್ವಾತ್ಯ ದೇಶಗಳೊಡನೆ ಬಲು ಜೋರಿನಿಂದ ವ್ಯಾಪಾರ ನಡೆಸುತ್ತಿತ್ತು. ಈ ನೌಕಾ ಚಟುವಟಿಕೆಯ ಕುರುಹಾಗಿ ಶಾತವಾಹನರ ನಾಣ್ಯಗಳನೇಕವುಗಳ ಮೇಲೆ ಹಾಯಿಕಂಬಗಳುಳ್ಳ ಹಡಗುಗಳ ಚಿತ್ರಣವಿದೆ.

ಕ್ರಿ. ಶ. ಮೊದಲನೇ ಶತಮಾನದಿಂದೀಚೆಗೆ ನಮಗೆ ಭಾರತದ ಸಾಮುದ್ರ, ವಾಣಿಜ್ಯ ಹಾಗೂ ನೌಕಾ ಸಾಧನೆಗಳ ಬಗ್ಗೆ ಹೆಚ್ಚು ವಿವರವಾದ ಸಂಗತಿಗಳು ತಿಳಿಯಬರುತ್ತವೆ. ಆ ಶತಮಾನದ ಉತ್ತರಾರ್ಧದಲ್ಲಿ ಈಜಿಪ್ಟಿನಲ್ಲಿ ವಾಸಿಸುತ್ತಿದ್ದ ಯವನ ನಾವಿಕನೊಬ್ಬನು ಕೆಂಪು ಸಮುದ್ರ ಅರಬ್ಬಿ ಸಮುದ್ರಗಳ ಮೂಲಕ ಭಾರತಕ್ಕೆ ಬಂದು ತೀರ ಪ್ರದೇಶದಲ್ಲೆಲ್ಲಾ ಯಾನಮಾಡಿ ತನ್ನ ಅನುಭವಗಳನ್ನೆಲ್ಲಾ ಒಂದು ಟಿಪ್ಪಣಿ ಪುಸ್ತಕದಲ್ಲಿ ಬರೆದಿಟ್ಟು ಹೋಗಿದ್ದಾನೆ. ಆ ಪುಸ್ತಕದ ಹೆಸರು, "ಇರಿತ್ರೇಯನ್ ಸಮುದ್ರದ ಪೇರಿಪ್ಲಸ್" ಎಂದು. "ಪೆರಿಪ್ಲಸ್" ಪುಸ್ತಕದ ಲೇಖಕನು ದೊಡ್ಡ ಪ್ರಮಾಣದ ಹಿಂದೂ ದೇಶದ ಹಡಗುಗಳನ್ನು ಪೂರ್ವ ಆಫ್ರಿಕ, ಅರೇಬಿಯ ಹಾಗೂ ಇರಾಣದ ಬಂದರುಗಳಲ್ಲಿ ಕಂಡೆನೆಂದೂ ಸೊಕೊತ್ರಾದ ಉತ್ತರ ತಡಿಯಲ್ಲಿ ಹಿಂದೂ ಜನಗಳ ವಸಾಹತು ಇತ್ತೆಂದೂ ಬರೆದಿದ್ದಾನೆ. ಆತ ಭಾರತದ ಕರಾವಳಿ ಉದ್ದಕ್ಕೂ ನೂರಾರು ಸಣ್ಣ ದೊಡ್ಡ ಬಂದರುಗಳು, ಹಡಗು ಕಟ್ಟುವ ತೊಟ್ಟಿಗಳು ಇದ್ದುವೆಂದು ಹೇಳಿ ಕೆಲ ಮುಖ್ಯವಾದವನ್ನು ನಿರ್ದೇಶಿಸಿದ್ದಾನೆ. ಅವುಗಳಲ್ಲಿ ಕೆಲವನ್ನು ಹೊರತು ಇಂದು ಗುರುತಿಸಲು ಕಷ್ಟವಾದರೂ ಭಡೋಚ, ಸೋಪಾದ, ಕಲ್ಯಾಣ, ಬಿಜಾಂತಿಯಂ (ಬಹುಶಃ ಬನವಾಸಿ ರಾಜ್ಯದ ಯಾವುದೋ ರೇವು), ಕನ್ನನೂರು, ಮದರೆ, ಕುಮಾರಿ, ಕಾವೇರಿಪಟ್ಟಣ, ಮಛಲಿಪಟ್ಟಣ ಮೊದಲಾದ ಪಶ್ಚಿಮ ಪೂರ್ವ ಕರಾವಳಿ ಬಂದರಗಳನ್ನು ಗುರುತಿಸಬಹುದು.

ಹೀಗೆಯೇ, ರೋಮಕ ಪ್ರಕೃತಿ ಶಾಸ್ತ್ರಜ್ಞ ಪ್ಲೈನಿ (ಕ್ರಿ. ಶ. ೨೩-೭೯) ಯ ಬೃಹದ್ಗ್ರಂಥವಾದ "ಪ್ರಕೃತಿ ಚರಿತ್ರೆ" ಯಲ್ಲೂ ಈಜಿಪ್ಟಿನಲ್ಲಿ ನೆಲೆಸಿದ್ದ ಗ್ರೀಕ್ ಖಗೋಳವಿಜ್ಞಾನಿ ಟಾಲೆಮಿಯ "ಭೂಗೋಳ" ಎಂಬ ಪುಸ್ತಕದಲ್ಲೂ ಭಾರತದ ಸಾಗರೋತ್ತರ ವ್ಯಾಪಾರ ಮತ್ತು ಬಂದರುಗಳ ವಿಷಯ ವಿಪುಲವಾಗಿ ಸಿಗುತ್ತದೆ. ಬಹುತೇಕವಾಗಿ ಭಾರತದ ವ್ಯಾಪಾರ ದಕ್ಷಿಣದ ಬಂದರುಗಳ ಮೂಲಕ ಸಾಗುತ್ತಿತ್ತು.

ಭಾರತದಿಂದ ರಫ್ತಾಗುತ್ತಿದ್ದ ಸಾಮಾನುಗಳೆಲ್ಲವೂ ಅನರ್ಘ್ಯ ವಸ್ತುಗಳೇ! ಮುತ್ತು, ವಜ್ರ, ವೈಡೂರ್ಯ, ಪಚ್ಚೆ ಮೊದಲಾದ ಪ್ರಶಸ್ತ ಶಿಲೆಗಳು; ಮೆಣಸು ಮೊದಲಾದ ಸಾಂಬಾರ ಪದಾರ್ಥಗಳು; ವಿಧವಿಧವಾದ ಸುವಾಸನಾ ದ್ರವ್ಯಗಳು; ನೀಲಿ ಬಣ್ಣ; ಆನೆಯ ದಂತ; ರೇಶಿಮೆ ದುಕೂಲಗಳು; ಕಬ್ಬಿಣ ಹಾಗೂ ಹರಿತವಾದ ಕತ್ತಿ; ಮತ್ತು ಎಲ್ಲಕ್ಕೂ ಹೆಚ್ಚಾಗಿ ಅತಿ ತೆಳುವಾಗೂ ಸುಂದರವಾಗೂ ನೆಯ್ದ ಹತ್ತಿ ಬಟ್ಟೆ. ಭಾರತ ತರಿಸಿಕೊಳ್ಳುತ್ತಿದ್ದ ವಸ್ತುಗಳೆಂದರೆ: ಮದಿರೆ, ತಾಮ್ರ, ತವರ, ಸೀಸ, ಗಾಜಿನ ಪದಾರ್ಥಗಳು ಮತ್ತು ಸುಂದರಿಯರಾದ ತರುಣಿಯರು! ತರಿಸಿಕೊಳ್ಳುತ್ತಿದ್ದ ವಸ್ತುಗಳಿಗಿಂತಲೂ ಕಳಿಸುತ್ತಿದ್ದ ವಸ್ತುಗಳ ಬೆಲೆಯೇ ಬಹಳ ಹೆಚ್ಚಿನದಿರುತ್ತಿದ್ದುದರಿಂದ ಚಿನ್ನದ ಹೊಳೆಯೇ ಭಾರತದೆಡೆಗೆ ಹರಿದು ಬಂತು! ;ರೋಮಕ ಪ್ರಕೃತಿ ಶಾಸ್ತ್ರಜ್ಞ ಪ್ಲೈನಿ ವರ್ಷಂಪ್ರತಿ ರೋಮ್ ಇಂದ ಪೌರ್ವಾತ್ಯ ದೇಶಗಳಿಗೆ (ಅರೇಬಿಯ ಮತ್ತು ಭಾರತ) ಭೋಗ ಸಾಮಗ್ರಿಗಳಿಗಾಗಿ ದಶಲಕ್ಷ ಸೆಸ್ಟರ್ಶಗಳು (೧೧ ಕೋಟಿ ರೂಪಾಯಿ) ಹೋಗುತ್ತಿವೆಯಲ್ಲಾ ಎಂದು ಗೋಳಿಟ್ಟಿದ್ದಾನೆ.

ಕ್ರಿ. ಶ. ೨ ನೇ ಶತಮಾನದ ಹೊತ್ತಿಗೆ ಭಾರತದ ಪ್ರಾಬಲ್ಯ ಪೌರ್ವಾತ್ಯ ದೇಶಗಳಿಗೆ ಹಬ್ಬತೊಡಗಿತು. ಸ್ವದೇಶದಲ್ಲಿ ರಾಜ್ಯಗಳನ್ನು ಕಳೆದುಕೊಂಡ ಭಾರತದ ರಾಜರು, ರಾಜಕುಮಾರರು ಹಡಗುಗಳಲ್ಲಿ ಪೌರ್ವಾತ್ಯ ದೇಶಗಳಿಗೆ ಪ್ರಯಾಣ ಮಾಡಿ ಅಲ್ಲಿ ತಮ್ಮದೇ ಆದ ರಾಜ್ಯಗಳನ್ನು ಸ್ಥಾಪನೆ ಮಾಡಿದರು. ಕ್ರಿ. ಶ. ಎರಡನೇ ಶತಮಾನದಿಂದ ಹಿಡಿದು ಐದನೇ ಶತಮಾನದ ಒಳಗೆ, ಮಲಯ, ಕಂಭುಜ (ಕ್ಯಾಂಬೋಡಿಯ), ಚಂಪ (ವಿಯಟ್ನಾಮ್), ಸುಮಾತ್ರ, ಜಾವ, ಬಾಲಿ,



ಜಾವಾ (ಇಂಡೋನೇಶಿಯ)ದಲ್ಲಿನ ಬೋರೋಬೊದೂರ್ ಎಂಬಲ್ಲಿ ಭಾರತೀಯ ಶೈಲೇಂದ್ರ ರಾಜರು ಕಟ್ಟಿಸಿದ ದೇವಸ್ಥಾನದ ಗೋಡೆಗಳ ಮೇಲೆ ಕಲ್ಲಿನಲ್ಲಿ ಕೊರೆದ ಭಾರತೀಯ ಹಡಗಿನ ಚಿತ್ರ. ಕ್ರಿ. ಶ. ೭೦೦

ಬೋರ್ನಿಯೋ ಈ ಪ್ರದೇಶಗಳಲ್ಲೆಲ್ಲಾ ಭಾರತೀಯರಿಂದ ರಾಜ್ಯಗಳು ಸ್ಥಾಪನೆ ಮಾಡಲ್ಪಟ್ಟವು. ಈ ರಾಜ್ಯಗಳ ರಾಜರು ತಮ್ಮ ತಾಯಿನಾಡಾದ ಭಾರತದೊಡನೆ ನಿಕಟವಾದ ಸಂಬಂಧವನ್ನಿಟ್ಟುಕೊಂಡಿದ್ದರು. ಅವರಲ್ಲನೇಕರು ಬಲಯುತವಾದ ನೌಕಾ ಪಡೆಗಳನ್ನೂ ಕಟ್ಟಿಕೊಂಡಿದ್ದರು. ಶೈಲೇಂದ್ರರಾಜರು ಜಾವಾದಲ್ಲಿನ ಬೋರೋ-ಬೊದೂರ್‌ನಲ್ಲಿ ಕಟ್ಟಿಸಿದ ಹಿಂದೂ ಶೈಲಿಯ ದೇವಸ್ಥಾನದ ಪ್ರಾಕಾರದ ಮೇಲೆ ಆಗಿನ ಕಾಲದ ಭಾರತೀಯ ಹಡಗುಗಳ ಚಿತ್ರಗಳನೇಕವಿವೆ. ಗುಪ್ತ, ಚಾಲುಕ್ಯ, ಪಾಂಡ್ಯ, ಚೋಳರ ಕಾಲದಲ್ಲಿ ಭಾರತೀಯರು ತಮ್ಮ ನೌಕಾ ಸಾಮರ್ಥ್ಯವನ್ನು ಎಲ್ಲೆಡೆಗಳಲ್ಲೂ ಬೆಳೆಸಿಕೊಂಡು ಬಂದರು. ಕ್ರಿ. ಶ. ೬—೭ನೇ ಶತಮಾನಗಳಲ್ಲಿ ಕೊರೆದ ಅಜಂತಾ ಗವಿಗಳಲ್ಲಿ ಭಾರತದ ಹಡಗುಗಳ ಚಿತ್ರಣವಿದೆ. ಈ ಹಡಗುಗಳು ದೊಡ್ಡವಾಗಿಯೂ ಭದ್ರವಾಗಿ ಕಟ್ಟಲ್ಪಟ್ಟ ಹಾಗೆ ಕಾಣುತ್ತವೆ.

ಹತ್ತು-ಹದಿಮೂರನೇ ಶತಮಾನಗಳಲ್ಲಿ ಪ್ರಾಬಲ್ಯಕ್ಕೆ ಬಂದ ಚೋಳರ ಕಾಲದಲ್ಲಿ ಭಾರತದ ನೌಕಾಪ್ರಾಬಲ್ಯ ಮತ್ತಷ್ಟು ಬೆಳೆಯಿತು. ಮೊದಲನೇ ರಾಜೇಂದ್ರ ಚೋಳ (ಕ್ರಿ. ಶ. ೧೦೧೨-೧೦೪೪)ನ ನೌಕಾ ದಂಡನಾಯಕರು ಸಿಂಹಳ, ನಿಕೋಬಾರ್ ದ್ವೀಪಸ್ತೋಮ, ಮಲಯಾ ಪರ್ಯಾಯ ದ್ವೀಪ ಇವುಗಳ ಮೇಲೆ ನೌಕಾದಾಳಿಯನ್ನು ಮಾಡಿ ಚೋಳಾಧಿಪತ್ಯವನ್ನು ಅಲ್ಲಿ ಸ್ಥಾಪಿಸಿದರು.

ಆಗಿನ ಕಾಲದ ನೌಕಾ ನಿರ್ಮಾಣ ತಂತ್ರದ ಬಗ್ಗೆ ಸುಮಾರು ಕ್ರಿ. ಶ. ಹನ್ನೊಂದನೇ ಶತಮಾನದಲ್ಲಿ ರಚಿಸಲ್ಪಟ್ಟ "ಯುಕ್ತಿ ಕಲ್ಪತರು" ಎಂಬ ಸಂಸ್ಕೃತ ಗ್ರಂಥದಲ್ಲಿ ವಿಶೇಷ ಮಾಹಿತಿಗಳಿವೆ. ಇಪ್ಪತ್ತೈದಕ್ಕೂ ಮೇಲ್ಪಟ್ಟ ಭಿನ್ನ ರೀತಿಯ ನದೀಗಾಮಿ ಮತ್ತೂ ಸಾಗರಗಾಮಿ ಹಡಗುಗಳನ್ನು ಕಟ್ಟುವ ಮತ್ತು ಉಪಯೋಗಿಸುವ ವಿವರಣೆ ಆ ಗ್ರಂಥದಲ್ಲಿ ಸಿಗುತ್ತದೆ. ನಾಲ್ಕು ಹಾಯಿ ಕಂಭಗಳನ್ನುಳ್ಳ ಹಡಗಿನ ವರ್ಣನೆ ಅದರಲ್ಲಿ ಸಿಗುತ್ತದೆ. ದೊಡ್ಡ ದೊಡ್ಡ ಹಡಗುಗಳಲ್ಲಿ ಈಗಿನ ಹಡಗುಗಳಲ್ಲಿನ ಹಾಗೇ



ಅಜಂತಾ ಗುಹೆಗಳ ಚಿತ್ರಗಳಲ್ಲಿ ಸಮುದ್ರಯಾನ ನಿರೂಪಣ ಕ್ರಿ. ಶ. ೨೦೦

ಕೋಣೆ (cabin) ಗಳು ಇರುತ್ತಿದ್ದುವು. ಸೈನ್ಯ, ಧನ ಮತ್ತು ರಾಜಮಹಾರಾಜರ ಧನ ಸಂಪತ್ತಿಗಳನ್ನು ಸಾಗಿಸಲು ವಿಶೇಷ ರೀತಿಯ ಹಡಗುಗಳೇ ಇರುತ್ತಿದ್ದುವು.

ಒಂದೊಂದು ರೀತಿಯ ಹಡಗಿಗೆ ಒಂದೊಂದು ರೀತಿಯ ಹೆಸರು. ಆ ಹೆಸರುಗಳಾದರೋ ಎಷ್ಟು ಅನ್ವರ್ಥಕವೋ ಅಷ್ಟು ಸುಂದರ. ಭೀಮಾ, ಚಪಲಾ, ಗರ್ಭರಾ, ಮಂಥರಾ, ಲೋಲ, ಧರಿಣೀ, ಸ್ವರ್ಣಮುಖೀ, ಇತ್ಯಾದಿ ಇತ್ಯಾದಿ. ಹಡಗಿನ ಮುಖಪ್ರದೇಶವನ್ನು ಪ್ರಾಣಿ, ಪಕ್ಷಿ ಹಾಗೂ ಮಾನವರ ಪ್ರತಿಮಾಶಿರಗಳಿಂದ ಅಲಂಕರಿಸುತ್ತಿದ್ದರು. ಗಿಣಿ, ನವಿಲು, ಕುದುರೆ, ಆನೆ, ಸಿಂಹ ಇವುಗಳ ಪ್ರತಿಮಾಶಿರಗಳನ್ನು ಹಡಗಿನ ಮುಖಕ್ಕೆ ಜೋಡಿಸುವುದು ಸಾಧಾರಣವಾಗಿತ್ತು. ಶ್ರೀಮಂತರ ಹಡಗುಗಳಾದರೆ ಈ ಪ್ರತಿಮೆಗಳಿಗೆ ಚಿನ್ನ, ವಜ್ರಗಳಿಂದ ಅಲಂಕಾರ ಮಾಡುತ್ತಿದರು.

ಹದಿಮೂರು, ಹದಿನೈದನೇ ಶತಮಾನಗಳಲ್ಲಿ ಭಾರತದಲ್ಲಿ ಪ್ರವಾಸ ಮಾಡಿದ ವಿದೇಶೀ ಪ್ರಯಾಣಿಕರರು ಆಗಿನ ಕಾಲದ ಭಾರತದ ಹಡಗುಗಳನ್ನು ಕಂಡು ಅಚ್ಚರಿಪಟ್ಟಿದ್ದಾರೆ. ಮಾರ್ಕೋ ಪೋಲೋ ಹಾಗೂ ನಿಕೋಲೊ ಕೊಂಟಿ ಇವರ ಪ್ರಕಾರ ಭಾರತದ ಹಡಗುಗಳು ಆಗಿನ ಕಾಲದ ಯುರೋಪಿನ ಹಡಗುಗಳಿಂತ ಬಹಳ ದೊಡ್ಡವಿದ್ದವು. ಅವುಗಳಲ್ಲಿ ತುಂಬಾ ದೊಡ್ಡವನ್ನು ನಡ

ಕುದುರೆ ಮುಖದ ಹಡಗು



ಸಲು ಮುನ್ನೂರು ಜನ ಕಲಾಸಿಗಳು ಬೇಕಾಗುತ್ತಿದ್ದರಂತೆ! ಅವುಗಳಲ್ಲಿ ಐದು-ಆರು ಸಾವಿರ ಮೆಣಸಿನ ಕುಕ್ಕೆಗಳನ್ನು ತುಂಬಬಹುದಿತ್ತು. ಒಂದು ಹೆಚ್ಚಿನ ವಿಷಯವೇನೆಂದರೆ ಈಗಿನ ಕಾಲದ ಹಡಗುಗಳಲ್ಲಿನಂತೆಯೇ, ಆ ದೊಡ್ಡ ಹಡಗುಗಳಲ್ಲಿ ಅಪಾಯದ ಸಂದರ್ಭದಲ್ಲಿ ಪ್ರಯಾಣಿಕರ ರಕ್ಷಣೆಗೋಸ್ಕರ ಪುಟ್ಟ ದೋಣಿಗಳನ್ನು ತಗಲು ಹಾಕುತ್ತಿದ್ದರು.

ಹದಿನೈದು ಹದಿನಾರನೇ ಶತಮಾನದಲ್ಲಿ ಉಚ್ಛ್ರಾಯ ಸ್ಥಿತಿಗೆ ಏರಿದ ವಿಜಯನಗರ ಸಾಮ್ರಾಜ್ಯದಲ್ಲಿ ಹೊರದೇಶದ ವ್ಯಾಪಾರಕ್ಕೆ ಬಹಳ ಪ್ರಾಮುಖ್ಯತೆ ಇತ್ತು. ಈ ಸಾಮ್ರಾಜ್ಯದ ತೀರ ಪ್ರದೇಶದಲ್ಲಿ ಮುನ್ನೂರು ಬಂದರುಗಳು ಇದ್ದುವು. ಇಲ್ಲಿನ ವರ್ತಕರು ಮಲಯ, ಬರ್ಮ, ಚೀನ, ಅರೇಬಿಯ, ಇರಾಣ, ಪೂರ್ವ ಆಫ್ರಿಕ, ಅಬಿಸೀನಿಯ, ಪೋರ್ಚುಗಲ್ ದೇಶಗಳೊಡನೆ ವ್ಯಾಪಾರ ಸಂಬಂಧವನ್ನು ಕುದುರಿಸಿಕೊಂಡಿದ್ದರು ತಮಗೆ ಬೇಕಾದ ಹಡಗುಗಳನ್ನು ಮಾಲ್ದಿವ್ ದ್ವೀಪದಲ್ಲಿ ಕಟ್ಟುತ್ತಿದ್ದರು. ಸಣ್ಣ ಪುಟ್ಟ ರಾಜರುಗಳೂ ನೌಕಾ ಪಡೆಗಳನ್ನು ಕಟ್ಟಿಕೊಂಡಿದ್ದರು. ವಿಜಯ ನಗರದ ರಾಜರ ಹತ್ತಿರ ಬಲವಾದ ನೌಕಾಪಡೆ ಇತ್ತು. ಎರಡನೇ ದೇವರಾಯ (ಕ್ರಿ. ಶ. ೧೪೨೨-೧೪೪೬), ಲಕ್ಕಣ್ಣನೆಂಬುವನನ್ನು ದಕ್ಷಿಣ ಸಾಗರದ ದಂಡನಾಯಕನಾಗಿ ನೇಮಿಸಿದ್ದನು. ರಾಷ್ಟ್ರದ ಸಾಗರೋತ್ತರ ವ್ಯಾಪಾರಕ್ಕೆಲ್ಲಾ ಈತ ಅಧಿಪತಿಯಾಗಿದ್ದನು.

ಉಗಿಹಡಗನ್ನು ಮೊಟ್ಟಮೊದಲು ಉಪಯೋಗಕ್ಕೆ ತಂದವರು ಭಾರತೀಯರೆ? ಇರಬಹುದು ಎಂಬ ಅನುಮಾನ ತರುವ ಸೂಚನೆಗಳು ೧೬-೧೭ ನೇ ಶತಮಾನದಲ್ಲಿ ಉಡಿಯಾ ಭಾಷೆಯಲ್ಲಿ ಬರೆಯಲ್ಪಟ್ಟಿರುವ "ಪೈಕ ಬೇಡ" (ಸೈನಿಕನ ಪುಸ್ತಕ) ಎಂಬ ತಾಳೆಗರಿ ಗ್ರಂಥದಲ್ಲಿ ಸಿಗುತ್ತವೆ. ಕುತೂಹಲವನ್ನು ಕೆರಳಿಸುವ ಈ ಗ್ರಂಥದಲ್ಲಿ ನೌಕಾಯುದ್ಧದಲ್ಲಿ ಉಪಯೋಗಿಸುತ್ತಿದ್ದ ವಿಧ ವಿಧವಾದ ನೌಕೆಗಳ ವಿವರಣೆ ಇದೆ. ಅವುಗಳಲ್ಲಿ ಮುಖ್ಯವಾದ "ಚತುರಿ" ಎಂಬ ಹಡಗಿನ ವರ್ಣನೆಯನ್ನು ಓದಿದರೆ ಅದು ಒಂದು ಪ್ರಾಕೃತ ರೀತಿಯ ಉಗಿ ಜಹಜು (Steam-boat) ಆಗಿತ್ತೋ ಎಂದು ಅನುಮಾನ ಬರುತ್ತದೆ. ಆ ಹಡಗಿನಲ್ಲಿ ನೀರನ್ನು ಕಾಯಿಸುವುದಕ್ಕೊ, ಬಂದ ಆವಿಯನ್ನು ತಿದಿಯಿಂದ ಒತ್ತಿ, ಚಕ್ರವೊಂದರ ರಂಧ್ರಗಳ ಮೂಲಕ ರಭಸದಿಂದ ಹಾಯಿಗಳ ಮೇಲೆ ಬಿಟ್ಟು ಹಡಗು ಮುಂದೋಡುವಂತೆ ಮಾಡುವ ಸಾಧನಗಳು ಇದ್ದುವಂತೆ. ಇದರ ಸಹಾಯದಿಂದ ಗಾಳಿ ಇಲ್ಲದಾಗಲೂ ಹಡಗನ್ನು ವೇಗವಾಗಿ ಓಡಿಸಿಕೊಂಡು ಹೋಗುವುದಕ್ಕೆ ಸಾಧ್ಯವಾಗುತ್ತಿತ್ತು. ಇಂತಹ ಹಡಗಿನ

ಕ್ರಿ. ಶ. ೧೬-೧೭ನೇ ಶತಮಾನದ 'ಚತುರಿ' ಎಂಬ ರೀತಿಯ ಭಾರತೀಯ ಯುದ್ಧ ನೌಕೆ.



ವರ್ಣನೆಯಾಗಲೀ, ಚಿತ್ರವಾಗಲೀ ಬೇರೆ ಎಲ್ಲೂ ಕಂಡು ಬಂದಿಲ್ಲ. ಅವು ೧೬-೧೭ ನೇ ಶತಮಾನದಲ್ಲಿ ಭಾರತದಲ್ಲಿ ಇದ್ದದ್ದು ನಿಜವೇ ಆದರೆ ಉಗಿ ಹಡಗನ್ನು ಪ್ರಪ್ರಥಮವಾಗಿ ಉಪಯೋಗಕ್ಕೆ ತಂದ ಕೀರ್ತಿ ಭಾರತಕ್ಕೆ ಸೇರಬೇಕು. ಆದರೆ ಉಗಿಯನ್ನು ಹಡಗಿನ ಚಾಲನೆಗಾಗಿ ಉಪಯೋಗಿಸುವ ತಂತ್ರ ಮುಂದಕ್ಕೆ ಈ ದೇಶದಲ್ಲಿ ಬೆಳೆಯಲೇ ಇಲ್ಲ. ೧೯ನೇ ಶತಮಾನದ ಆದಿಯಲ್ಲಿ ಪಾಶ್ಚಾತ್ಯ ರೀತಿಯ ಉಗಿ ಹಡಗುಗಳು ಬಳಕೆಗೆ ಬಂದ ಮೇಲಂತೂ ಈ ಪ್ರಾಕೃತ ರೀತಿಯ ತಂತ್ರವೂ ಹೆಸರಿಲ್ಲದೆ ಅಳಿದು ಹೋಗಿರಬೇಕು.

ಆದರೂ ಭಾರತದ ನೌಕಾ ಹಿರಿಮೆ ಕ್ರಿ. ಶ. ಎಂಟನೇ ಶತಮಾನದ ಹೊತ್ತಿಗೇ ಕ್ಷೀಣವಾಗಲು ಪ್ರಾರಂಭವಾಯಿತೆಂದು ಹೇಳಬಹುದು. ಭಾರತದಿಂದ ಯುರೋಪಿಗೆ ಹೋಗುವ ಭೂಮಾರ್ಗ ಜಲಮಾರ್ಗಗಳೆರಡೂ ಕ್ರಿ ಶ. ಏಳನೇ ಶತಮಾನದಲ್ಲಿ ಆಗ ತಾನೇ ಪ್ರವೃದ್ಧಮಾನ ಸ್ಥಿತಿಗೆ ಬಂದಿದ್ದ ಅರಬರ ವಶಕ್ಕೆ ಬಂದುವು. ಭಾರತ-ಯೂರೋಪಿನ ವ್ಯಾಪಾರ ಹೆಚ್ಚು ಹೆಚ್ಚಾಗಿ ಅರಬರ ಮಧ್ಯಸ್ಥಿತಿಕೆಯಿಂದಲೇ ಸಾಗುವಂತಾಯಿತು. ಅರಬರ ಮಧ್ಯಸ್ಥಿಕೆಯಿಲ್ಲದೆ ಭಾರತ ಮತ್ತು ಇತರ ಪೌರ್ವಾತ್ಯ ದೇಶಗಳ ಸರಕುಗಳನ್ನು ಸುಲಭ ಬೆಲೆಗೆ ಪಡೆಯಲು ಬಿಳಿಯರು ಮಾಡಿದ ಪ್ರಯತ್ನಗಳೇ ಭಾರತಕ್ಕೆ ಯುರೋಪಿನಿಂದ ನೇರವಾದ ಜಲ ಮಾರ್ಗವನ್ನು ಕಂಡು ಹಿಡಿಯಲು ಕಾರಣವಾಯಿತು ಭಾರತದ ಹೊರ ವ್ಯಾಪಾರವೆಲ್ಲಾ ಬಿಳಿಯರ ಕೈಗೆ ಬಂದಿತು. ಸಾಹಸಿಗಳೂ·ಮಹತ್ವಾಕಾಂಕ್ಷಿಗಳೂ ಆದ ಅವರು ಕೊನೆಗೆ ಭಾರತವನ್ನೇ ನುಂಗಿದರು.

ಪೋರ್ಚುಗೀಸರು ಇಲ್ಲಿ ಕಾಲಿಡುತ್ತಲೇ ನಮ್ಮ ನೌಕಾಪೌರುಷ ಶೀಘ್ರವಾಗಿ ಶಿಥಿಲವಾಗತೊಡಗಿತು. ಪೋರ್ಚುಗೀಸರು ಮತ್ತು ಅವರ ನಂತರ ಬಂದ ಡಚ್, ಫ್ರೆಂಚ್ ಮತ್ತು ಇಂಗ್ಲೀಷರ ಹಡಗುಗಳಿಗೆ ಇದ್ದಂಥಾ ಫಿರಂಗಿ ರಕ್ಷಣೆ ನಮ್ಮ ಹಡಗುಗಳಿಗೆ ಇರಲಿಲ್ಲ. ಈ ಫಿರಂಗಿಗಳನ್ನು ಮಾಡುವುದರಲ್ಲಿ ಮತ್ತು ಉಪಯೋಗಿಸುವುದರಲ್ಲಿ ನಾವು ಬಹಳ ಹಿಂದುಳಿದುದು ಭಾರತದ ನೌಕಾ ಅವನತಿಗೆ ಒಂದು ಪ್ರಬಲವಾದ ಕಾರಣವಾಯಿತು.

ನೌಕಾಬಲದ ವೃದ್ಧಿಗೆ ಛತ್ರಪತಿ ಶಿವಾಜಿ ಹಾಗೂ ಅವನ ನಂತರ ಬಂದ ಪೇಶ್ವೆಗಳು ಹೆಚ್ಚಿನ ಗಮನ ಕೊಟ್ಟರು. ಕಾನ್ಹೋಜಿ ಆಂಗ್ರೆಯ ಮಹಾ ಪ್ರಮುಖತ್ವದಲ್ಲಿ ಮರಾಠ ನೌಕಾಪಡೆ ಅತ್ಯಂತ ಪೌರುಷದಿಂದ ವಿದೇಶಿ

ಮರಾಠ ಯುದ್ಧ ಹಡಗ



ನೌಕಾಪಡೆಗಳನ್ನು ಎದುರಿಸಿ ಅವುಗಳ ಪ್ರಾಬಲ್ಯವನ್ನು ಸಾಕಷ್ಟು ತಗ್ಗಿಸಿತ್ತು. ಕೊನೆಗೆ ಮರಾಠರಲ್ಲೇ ಉಂಟಾದ ಅಂತಃಕಲಹದ ಪರಿಣಾಮವಾಗಿ ಆ ಪಡೆ ನಾಶವಾಯಿತು. ಮೈಸೂರಿನ ನವಾಬ ಹೈದರ್ ಅಲಿಯು ತನ್ನ ದೇಶದ ಪಶ್ಚಿಮ ಕರಾವಳಿ ಪ್ರದೇಶವನ್ನು ರಕ್ಷಿಸಲು ನೌಕಾಪಡೆಯೊಂದನ್ನು ಕಟ್ಟಲು ಮಾಡಿದ ಪ್ರಯತ್ನ ಮಾತ್ರ ಯಶಸ್ವಿಯಾಗಲಿಲ್ಲ

ಭಾರತದ ಬಹು ಭಾಗ ಈಸ್ಟ್ ಇಂಡಿಯಾ ಕಂಪನಿಯ ವಶಕ್ಕೆ ಬಂದ ನಂತರ ಕೆಲವು ಕಾಲ ಆಂಗ್ಲೇಯರು ಭಾರತದಲ್ಲೇ ತಮಗೆ ಬೇಕಾದ ನೌಕಾ ಹಾಗೂ ವ್ಯಾಪಾರಿ ಹಡಗುಗಳನ್ನು ಕಟ್ಟಿಸಿಕೊಳ್ಳುತ್ತಿದ್ದರು. ಹಡಗು ಕಟ್ಟಲು ಭಾರತದ ತೇಗ ಇಂಗ್ಲೆಂಡಿನ ಓಕ್‌ಗಿಂತ ಗಟ್ಟಿಯಾಗಿಯೂ ಬಹಳ ವರ್ಷ ಬಾಳಿಕೆ ಬರುತ್ತಿದ್ದುದೂ ಇಲ್ಲಿ ಕಟ್ಟುವ ಖರ್ಚು ತೀರ ಕಮ್ಮಿ ಇರುತ್ತಿದ್ದುದೂ ಇದಕ್ಕೆ ಕಾರಣ. ಈ ಹಡಗುಗಳ ಸಂವಿಧಾನ (designing) ಮತ್ತು ರಚನೆಗೆ ಭಾರತೀಯರನ್ನೇ ನೇಮಿಸಿಕೊಂಡಿದ್ದರು. ಇವರಲ್ಲಿ ಹೆಸರಾದ ಲೌಜೀ ನಸ್ಸರ್ ವಾನ್‌ಜೀ ವಾಡಿಯಾ ಮತ್ತು ಅವನ ಸಂತತಿಯವರು ಬೊಂಬಾಯಿನ "ಬಾಂಬೆ ಡಾಕ್ ಯಾರ್ಡ್"ನಲ್ಲಿ ಕ್ರಿ. ಶ. ೧೭೩೬ ರಿಂದ ೧೮೮೪ರ ವರೆಗೆ ೩೦೦ ಕ್ಕೂ ಮೇಲ್ಪಟ್ಟು ಹಡಗುಗಳನ್ನು ಕಟ್ಟಿದರು. ಇವುಗಳಲ್ಲಿ ಅನೇಕವು ಬ್ರಿಟಿಶ್ ಯುದ್ಧ ನೌಕಾ ಪಡೆಯಲ್ಲಿ ಅತ್ಯಂತ ಯಶಸ್ವಿಯಾಗಿ ಕೆಲಸ ಮಾಡಿದವು. ಉಗಿ ಹಡಗಗಳು ಬಳಕೆಗೆ ಬಂದ ನಂತರ ಈ ಕೈಗಾರಿಕೆಯೂ ಶಿಥಿಲವಾಯಿತು.

ಉಗಿ ಹಡಗುಗಳು ಸಮುದ್ರ ಸಾರಿಗೆಯ ಕ್ಷೇತ್ರದಲ್ಲಿ ಮಹಾಪ್ರಭಾವಶಾಲಿಯಾದ ಕ್ರಾಂತಿಯನ್ನೇ ಉಂಟುಮಾಡಿದುವು. ಹಡಗು ಕಟ್ಟಲು ಕಬ್ಬಿಣ ನಂತರ ಉಕ್ಕು ಬಳಕೆಗೆ ಬಂತು. ಉಗಿ ಯಂತ್ರದ ನಂತರ ಎಣ್ಣೆಯ ಯಂತ್ರ (diesel engine) ಬಂದಿತು. ಹಡಗುಗಳು ದೊಡ್ಡವಾದುವು; ಭದ್ರವಾದುವು; ಅವುಗಳ ವೇಗ ಹೆಚ್ಚಿತು; ಕಬ್ಬಿಣ, ಉಕ್ಕಿನ ಉತ್ಪಾದನೆಯಲ್ಲಿ, ಯಂತ್ರಗಳ ನಿರ್ಮಾಣದಲ್ಲಿ ಈಗಾಗಲೇ ಮುಂದುವರೆದಿದ್ದ ಯುರೋಪಿನ ರಾಷ್ಟ್ರಗಳು-ಮುಖ್ಯವಾಗಿ ಇಂಗ್ಲೆಂಡು, ಸಹಜವಾಗಿಯೇ ನವೀನ ರೀತಿಯ ಹಡಗುಗಳನ್ನು ಕಟ್ಟುವುದರಲ್ಲಿ ಮುಂದಾದುವು. ಪರಾಧೀನತೆಯ ಫಲವಾಗಿ ಈ ಕ್ರಾಂತಿಯ ಫಲ ಭಾರತಕ್ಕೆ ದೊರೆಯಲು ಬಹಳ ಸಮಯ ಆಯಿತು.

ಯುರೋಪಿನಿಂದ ಭಾರತಕ್ಕೆ ಮೊದಲನೇ ಉಗಿಹಡಗು ೧೮೫೫ರಲ್ಲಿ ಬಂದಿತು. ಅಲ್ಲಿಂದ ಸುಮಾರು ನೂರು ವರ್ಷಗಳ ವರೆಗೆ ಭಾರತ ನೌಕಾ ಕ್ಷೇತ್ರದಲ್ಲಿ ತುಂಬಾ ಹಿಂದುಳಿದಿತು. ಕಡಲರಾಣಿ ಎನಿಸಿಕೊಂಡ ಬ್ರಿಟನ್ನು ತನ್ನ ಕೈವಶವಾಗಿದ್ದ ಭಾರತಕ್ಕೆ ನೌಕಾ ವಿಷಯದಲ್ಲಿ ಒಂದು ಹೆಜ್ಜೆಯೂ ಮುಂದುವರೆಯಲು ಅವಕಾಶ ಕೊಡಲಿಲ್ಲ. ಸಾಹಸ ಪ್ರವೃತ್ತಿಯ ಕೆಲವು ಭಾರತೀಯರು ಸ್ವದೇಶಿ ನೌಕಾ ಕಂಪನಿಗಳನ್ನು ನಡೆಸಲು ಮಾಡಿದ ಯತ್ನಗಳೆಲ್ಲವೂ ನೀರಿನಲ್ಲಿ ಹೋಮ ಮಾಡಿದ ಹಾಗಾಯಿತು. ಬೊಂಬಾಯಿನಲ್ಲಿ ಜಮ್‌ಷೆಡ್ಜಿ ಟಾಟ, ತೂತುಕೋಡಿಯಲ್ಲಿ ಚಿದಂಬರಂ ಪಿಳ್ಳೈ, ಕಲ್ಕತ್ತಾದಲ್ಲಿ ಪ್ರಫುಲ್ಲ ಚಂದ್ರರಾಯ್ ಹಾಗೂ ಜ್ಯೋತೀಂದ್ರನಾಥ ಠಾಕೂರ ಇವರು ಸ್ವದೇಶಿ ಉಗಿಹಡಗು ಕಂಪನಿಗಳನ್ನು ನಡೆಸಲು ಹೋಗಿ ಕೈ ಸುಟ್ಟುಕೊಂಡರು. ಭದ್ರವಾಗಿ ತಳಊರಿದ್ದ ಮತ್ತು ಆಳುತ್ತಿದ್ದ ಬ್ರಿಟಿಷ್ ಸರಕಾರದ ಬೆಂಬಲವಿದ್ದ ಬ್ರಿಟಿಷ್ ಹಡಗು ಕಂಪನಿಗಳು ಮತ್ತು ವ್ಯಾಪಾರಿಗಳು ಸೇರಿಕೊಂಡು ತಂತ್ರಕುತಂತ್ರಗಳಿಂದ ಭಾರತೀಯ ನೌಕೋದ್ಯಮ ಮುಂದಕ್ಕೆ ಬಾರದಂತೆ ತಡೆಹಿಡಿದರು. ಹೀಗೆ ನೂರಾರು ಭಾರತೀಯ ಕಂಪನಿಗಳು ನೀರು ಪಾಲಾದುವು.

ನಡೆಯುತ್ತಿರುವ ಶತಮಾನದ ಎರಡನೇ ದಶಕದ ಹೊತ್ತಿಗೆ ಸ್ವಲ್ಪ ವಾತಾವರಣ ಬದಲಾಯಿಸಿತ್ತು. ದೇಶಾದ್ಯಂತ ನವಚೈತನ್ಯ ಬೆಳೆಯುತ್ತಿತ್ತು. ದೇಶಿ ವ್ಯಾಪಾರಿಗಳ ಕೈಯಲ್ಲಿ ತಕ್ಕಮಟ್ಟಿಗೆ ಹಣವೂ ಕೂಡಿತ್ತು. ಆಗ ವಾಲಚಂದ್ ಹಿರಾಚಂದ ಮತ್ತು ನರೋತ್ತಮ ಮೊರಾರ್ಜಿಯವರ ಸಾಹಸದ ಫಲವಾಗಿ ಬ್ರಿಟಿಶರು ಕೊಡಬಹುದಾದ ಕಷ್ಟಗಳೆಲ್ಲವನ್ನೂ ನುಂಗಿಕೊಂಡು ಬದುಕಬಹುದಾದಂತಹ ಛತ್ತಿ ಕೇಟಿ



ಸಿಂದಿಯಾ ಕಂಪನಿಯ ಉಗಿಹಡಗು "ಎಸ್. ಎಸ್. ಲಾಯಲ್ಟಿ"

ರೂಪಾಯಿ ಬಂಡವಾಳದ ಸಿಂಧಿಯಾ ಕಂಪನಿ ೧೯೧೯ ರಲ್ಲಿ ಪ್ರಾರಂಭವಾಯಿತು. ಆದರೂ ದೇಶಕ್ಕೆ ಸ್ವಾತಂತ್ರ್ಯ ಬರುವವರೆಗೂ ಸಿಂದಿಯಾ ಕಂಪನಿಯೂ, ಇದರ ನಂತರ ಹುಟ್ಟಿಕೊಂಡ ಇನ್ನು ಕೆಲವು ಭಾರತೀಯ ಹಡಗು ಕಂಪನಿಗಳೂ ತಮ್ಮ ಇರವನ್ನು ಕಾಪಾಡಿಕೊಳ್ಳುವುದಕ್ಕೆ ಹೆಣಗಾಡಬೇಕಾಯಿತು.

ಸ್ವಾತಂತ್ರ್ಯಾನಂತರ ಈ ಕಷ್ಟಗಳೆಲ್ಲಾ ದೂರವಾಗಿವೆ. ಭಾರತ ಸರಕಾರವು ಹಲವಾರು ವಿಧಗಳಲ್ಲಿ ಸ್ವದೇಶಿ ನಾಕಾ ಪಡೆಗೆ ಉತ್ತೇಜನ ಕೊಡುತ್ತಿದೆ. ಸರಕಾರವೇ ದೊಡ್ಡದಾದ ಹಡಗಿನ ಕಂಪನಿಯೊಂದನ್ನು ಸ್ಥಾಪಿಸಿ ಯಶಸ್ವೀ ರೀತಿಯಲ್ಲಿ ನಡೆಸಿಕೊಂಡು ಬರುತ್ತಿದೆ. ನೌಕಾಪಡೆಗೆ ಬೇಕಾದ ಚಾಲಕ ಅಧಿಕಾರಿಗಳು, ಎಂಜಿನಿಯರ್‌ಗಳು, ಕಲಾಸಿಗಳು ಇವರನ್ನು ತರಬೇತು ಮಾಡಲು ಟ್ರೇನಿಂಗ್ ಕಾಲೇಜುಗಳನ್ನೂ ಇತರ ಸಂಸ್ಥೆಗಳನ್ನೂ ಸ್ಥಾಪಿಸಿದೆ. ಬಂದರುಗಳ ಅಭಿವೃದ್ಧಿಗೆ ವಿಶೇಷ ಗಮನ ಕೊಡಲಾಗಿದೆ. ವಿಶಾಖಪಟ್ಟಣದಲ್ಲಿ ನವೀನ ರೀತಿಯ ಹಡಗುಗಳನ್ನು ಕಟ್ಟಲಾಗುತ್ತಿದೆ. ಕೊಚ್ಚಿಯಲ್ಲಿ ಇನ್ನೊಂದು ದೊಡ್ಡ ಹಡಗು ಕಟ್ಟುವ ತೊಟ್ಟಿಯನ್ನು ನಿರ್ಮಾಣ ಮಾಡಲು ಸರಕಾರ ನಿರ್ಧಾರ ಮಾಡಿದೆ.

ಇಂದು ಭಾರತದಲ್ಲಿ ಮೂವತ್ತಕ್ಕೂ ಮೇಲ್ಪಟ್ಟು ಹಡಗಿನ ಕಂಪನಿಗಳಿವೆ. ಇವುಗಳಲ್ಲಿ ಹದಿನೆಂಟು ಕಂಪನಿಗಳು ದೇಶಾಂತರ ವ್ಯಾಪಾರದಲ್ಲಿ ತೊಡಗಿವೆ. ಈಗಿರುವ ಒಟ್ಟು ಭಾರತೀಯ ಹಡಗುಗಳ ಸಂಖ್ಯೆ ೨೪೨. ಈ ಎಲ್ಲ ಹಡಗುಗಳ ಬೆಲೆ ಸುಮಾರು ೨೦೦ ಕೋಟಿ ರೂಪಾಯಿಗಳಿಗೆ ಮೇಲೇ ಆಗುತ್ತದೆ. ಈ ಹಡಗುಗಳಿಂದ ವರ್ಷಂಪ್ರತಿ ಸುಮಾರು ೧೦೦ ಕೋಟಿ ರೂಪಾಯಿಗಳಷ್ಟು ಕರ (freight) ಸಂಪಾದನೆಯಾಗುತ್ತಿದೆ. ಇದರಲ್ಲಿ ಅರ್ಧಕ್ಕಿಂತ ಹೆಚ್ಚಾಗಿ ವಿದೇಶಿ ವಿನಿಮಯ (foreign exchange) ರೂಪದಲ್ಲಿದೆ.

ಜಲ ಸಾರಿಗೆಯ ವಿಷಯದಲ್ಲಿ ಶೇಕಡ ೫೦ ರ ಮಟ್ಟಿಗಾದರೂ ಸ್ವಾವಲಂಬಿಯಾಗಿರಬೇಕೆಂಬುದು ಭಾರತದ ಉದ್ದೇಶ. ಆದರೆ ಸ್ವಾತಂತ್ರ್ಯ ಪೂರ್ವ ಸ್ವದೇಶಿ ನೌಕೋದ್ಯಮ ಏನೂ ಪ್ರಗತಿಯನ್ನು ಸಾಧಿಸಲು ಸಾಧ್ಯವಾಗಿರಲಿಲ್ಲ. ಅದರಿಂದಾಗಿ ನೌಕಾ ಪ್ರಪಂಚದಲ್ಲಿ ಭಾರತ ಬಹಳ ಹಿಂದೆ ಬಿದ್ದಿತು. ಆದರೆ ಸ್ವಾತಂತ್ರ್ಯಾನಂತರದ ಈ ಇಪ್ಪತ್ತೊಂದು ವರುಷಗಳಲ್ಲಿ ನೌಕೋದ್ಯಮದಲ್ಲಿ ಭಾರತ ಎಷ್ಟೋ ಮುಂದುವರೆದಿದೆ. ಸ್ವಾತಂತ್ರ್ಯ ಬಂದಾಗ ನಮ್ಮ ಕೈಲಿದ್ದ ಹಡಗುಗಳು ಕೇವಲ ೫೯. ಇವುಗಳ ಒಟ್ಟು ವಾಹಕ

* ಜಿ. ಆರ್. ಟಿ. (g. r. t.) ಎಂದರೆ gross register ton ಎಂದು. ಇದಕ್ಕೂ ತೂಕದ ಟನ್ನಿಗೂ ಸಂಬಂಧವಿಲ್ಲ. ಇದು ಘನ ಅಳತೆಯ ಟನ್. ನೂರು ಘನ ಅಡಿ ಅಳತೆಯ

ಪ್ರಮಾಣ ೧,೯೨,೦೦೦ ಜಿ. ಆರ್. ಟಿ. * ಇದ್ದವು. ಈಗ ಭಾರತದ ಬಾವುಟವನ್ನು ಹಾರಿಸುತ್ತಿರುವ ಹಡಗುಗಳು ೨೪೨ ಇವೆ. ಇವುಗಳ ಒಟ್ಟು ಜಿ. ಆರ್. ಟಿ. ೨೦,೦೦,೦೦೦. ಇವುಗಳಲ್ಲಿ ೧೬೮ ಹಡಗುಗಳು ದೇಶಾಂತರ ವ್ಯಾಪಾರದಲ್ಲೂ ೭೪ ಹಡಗುಗಳು ಭಾರತದ ಒಳಗಣ ವ್ಯಾಪಾರದಲ್ಲೂ ನಿಯೋಜಿತವಾಗಿವೆ. ನಾಲ್ಕನೇ ಪಂಚವಾರ್ಷಿಕ ಯೋಜನೆ ಕೊನೆ ಹೊತ್ತಿಗೆ (ಮಾರ್ಚ್ ೧೯೭೪) ಭಾರತದ ನೌಕಾ ಪಡೆಯ ಶಕ್ತಿ ೪೦,೦೦,೦೦೦ ಜಿ. ಆರ್. ಟಿ. ಯನ್ನು ಮೀರಬೇಕು ಎಂಬ ಆಲೋಚನೆ ಇದೆ. ಜಲ ಸಾರಿಗೆಯ ವ್ಯವಸ್ಥೆಯಲ್ಲಿ ನಾವು ಆದಷ್ಟು ಸ್ವಾವಲಂಬಿಗಳಾಗಿರಬೇಕು. ನಮಗೆ ಬೇಕಾದ ಹಡಗುಗಳನ್ನು ನಾವೇ ಕಟ್ಟಿಕೊಳ್ಳುವುದರಲ್ಲಿ ಶಕ್ತರಾಗಬೇಕು ಎಂದು ದೇಶಾದ್ಯಂತ ಪ್ರಯತ್ನ ನಡೆಯುತ್ತಿದೆ.

ಈಗ ಭಾರತದ ಹಡಗುಗಳು ಪ್ರಪಂಚದ ಎಲ್ಲ ಮುಖ್ಯ ಬಂದರುಗಳಲ್ಲಿಯೂ ಕಾಣಬರುತ್ತಿವೆ. ಇಂಗ್ಲೆಂಡು ಮತ್ತು ಯುರೋಪಿನ ಇತರ ರಾಷ್ಟ್ರಗಳಿಗೆ ೪೧ ಹಡಗುಗಳು ಹೋಗುತ್ತವೆ; ಅಮೇರಿಕಾಕ್ಕೆ ೨೫; ರಷ್ಯಾಕ್ಕೆ ೧೭; ಜಪಾನ್‌ಗೆ ೧೧; ಕೆಂಪು ಸಮುದ್ರ ಬಂದರುಗಳಿಗೆ ೮; ಇರಾಣ ಆಖಾತದ ಬಂದರುಗಳಿಗೆ ೬; ಆಸ್ಟ್ರೇಲಿಯಾಕ್ಕೆ ೫; ಮಲಯಾ-ಸಿಂಗಪುರಕ್ಕೆ ಒಂದು; ಪೂರ್ವ ಆಫ್ರಿಕಕ್ಕೆ ಒಂದು; ಹೀಗೆ ೧೧೫ ಹಡಗುಗಳು ದೇಶಾಂತರ ವ್ಯಾಪಾರದಲ್ಲಿ ತೊಡಗಿವೆ. ಇವೆಲ್ಲಾ ಲೈನರ್ (liner) ಹಡಗುಗಳು; ಅಂದರೆ ನಿಯಮಿತ ಕಾಲಕ್ಕೆ, ಮೊದಲೇ ಗೊತ್ತುಮಾಡಲ್ಪಟ್ಟ ಬಂದರುಗಳ ನಡುವೆ, ನಿಯಮಿತ ಬಾಡಿಗೆ (freight)ಗೆ, ಅನೇಕ ಗಿರಾಕಿಗಳಿಗೆ ಬೇರೆ ಬೇರೆಯಾಗಿ ಸರಕುಗಳನ್ನು ಕೊಂಡೊಯ್ಯುವ ಹಡಗುಗಳು. ಇವೆಲ್ಲಾ ರೈಲಿನ ಹಾಗಾದರೆ, ಲಾರಿಗಳ ಹಾಗೆ ಎಲ್ಲಿಂದ-ರಲ್ಲಿಂದ, ಯಾವ ಬದರಿಗೆಂದರೆ ಆ ಬಂದರಿಗೆ, ಒಬ್ಬನೇ ಗಿರಾಕಿಗೆ ಆ ಪ್ರಯಾಣಕ್ಕೆ ಮಾತ್ರ ನಿಗದಿ ಮಾಡಲ್ಪಟ್ಟ ಬಾಡಿಗೆಗೆ ಹೊಡೆಯುವ ಹಡಗುಗಳೂ ಇವೆ ಇವಕ್ಕೆ ಟ್ರಾಂಪ್ ಹಡಗುಗಳು ಎನ್ನುತ್ತಾರೆ. ಇಂತಹ ಹಡಗುಗಳು ನಮ್ಮ ಪಡೆಯಲ್ಲಿ ೫೩ ಇವೆ. ಇವೂ ದೇಶಾಂತರ ವ್ಯಾಪಾರದಲ್ಲೇ ನಿರತವಾಗಿವೆ. ಈ ಹಡಗುಗಳು ಮುಖ್ಯವಾಗಿ ಪೆಟ್ರೋಲಿಯಂ ಮೊದಲಾದ ಎಣ್ಣೆಗಳು, ಲೋಹದ ಅದಿರುಗಳು, ಗೋದಿ ಮೊದಲಾದ ಧಾನ್ಯಗಳು, ಗೊಬ್ಬರ, ಹಿಂಡಿ ಮೊದಲಾದ ದನದ ಮೇವುಗಳು ಅಂದರೆ ಒಂದು ಹಡಗಿನ ತುಂಬ ಕಳಿಸುವಂತಹ ಸರಕುಗಳನ್ನೇ ಕೊಂಡೊಯ್ಯುತ್ತವೆ. ಲೈನರ್ ಹಡಗುಗಳಲ್ಲಿ ಸಾಮಾನ್ಯವಾಗಿ ಯಂತ್ರ ಸಾಮಗ್ರಿಗಳು, ಬಟ್ಟೆ, ಹತ್ತಿ, ಮೆಣಸು, ಚಹ, ಗೋಣಿಚೀಲಗಳು ಮತ್ತು ಇತರ ಚಿಲ್ಲರೆ ಸಾಮಾನುಗಳನ್ನು ಸಾಗಿಸುತ್ತಾರೆ.

ಪೆಟ್ರೋಲಿಯಂ ಮೊದಲಾದ ಎಣ್ಣೆಗಳನ್ನು ಸಾಗಿಸುವ ಹಡಗುಗಳಿಗೆ ಟ್ಯಾಂಕರ್ ಎನ್ನುತ್ತಾರೆ. ಭಾರತದ ಪಡೆಯಲ್ಲಿ ೧೦ ಟ್ಯಾಂಕರುಗಳು ಇವೆ. ಇವುಗಳಲ್ಲಿ ೫ ಹೊರ ದೇಶದ ವ್ಯಾಪಾರದಲ್ಲೂ ಮಿಕ್ಕ ಐದು ಕರಾವಳಿ ಸುತ್ತಿನ ವ್ಯಾಪಾರದಲ್ಲೂ ಸುಯೋಜಿತವಾಗಿವೆ. ಹೊರ ದೇಶದ ವ್ಯಾಪಾರದಲ್ಲಿ ತೊಡಗಿರುವ ಟ್ಯಾಂಕರುಗಳಲ್ಲಿ ಕೆಲವು ಭಾರತದ ನೌಕಾಪಡೆಯಲ್ಲಿನ

---

ಜಾಗಕ್ಕೆ ಒಂದು ಜಿ. ಆರ್. ಟಿ ಆಗುತ್ತದೆ.

೮೦೦೦ ಜಿ. ಆರ್. ಟಿ. ಹಡಗು ಎಂದರೆ ಅದರಲ್ಲಿ ಸಾಮಾನು ತುಂಬುವುದಕ್ಕೆ ಮತ್ತು ಇದರ ಉಪಯೋಗಗಳಿಗಾಗಿ ೮೦೦೦ × ೧೦೦ = ೮ ಲಕ್ಷ ಘನ ಅಡಿ ಜಾಗ ಇದೆ ಎಂದು ಅರ್ಥ. ಹಡಗುಗಳು ಎಷ್ಟು ಭಾರದ ಸಾಮಾನುಗಳನ್ನು ಸಾಗಿಸಬಹುದು ಎಂಬುದಕ್ಕೆ ತೂಕದ ಅಳತೆಯೂ ಇದೆ. ಅದಕ್ಕೆ ಡೆಡ್ ವೇಟ್ ಟನ್ (dead-weight ton) ಎನ್ನುತ್ತಾರೆ. ಸಂಗ್ರಹ ಮಾಡಿ ಡಿ. ಡಬ್ಲ್ಯೂ. ಟಿ. (d. w. t.) ಎಂದು ಬರೆಯುತ್ತಾರೆ. ೧೦,೦೦೦ d. w. t. ಹಡಗು ಎಂದರೆ ೧೦,೦೦೦ ಟನ್ನು ಭಾರದ ಸಾಮಾನುಗಳನ್ನು ಸಾಗಿಸಲು ಶಕ್ಯವಿರುವ ಹಡಗು ಎಂದರ್ಥ. ಸಾಮಾನ್ಯವಾಗಿ ೮೦೦೦ ಜಿ. ಆರ್. ಟಿ. ಹಡಗಿನಲ್ಲಿ ೧೨,೦೦೦ ಡಿ. ಡಬ್ಲ್ಯೂ. ಟಿ. ಸಾಮಾನುಗಳನ್ನು ತುಂಬಬಹುದು. ಖಾಲಿ ಹಡಗಿನ ಭಾರ ಸುಮಾರು ೩೦೦೦ ತೂಕದ ಟನ್ನಿನಷ್ಟು ಇರುತ್ತದೆ.

ಹಡಗುಗಳಲ್ಲೆಲ್ಲಾ ಅತ್ಯಂತ ದೊಡ್ಡ ಗಾತ್ರದವು "ವಿಕ್ರಮ ಜಯಂತಿ" ಎಂಬ ಟ್ಯಾಂಕರು ಸುಮಾರು ೫೨೦೦೦ ಡೆಡ್ ವೇಟ್ ಟನ್ನು ಭಾರ ಎಣ್ಣೆಯನ್ನು ಒಮ್ಮೆಗೇ ಸಾಗಿಸುವಷ್ಟು ದೊಡ್ಡದಾಗಿದೆ. ಹಾಗೆಯೇ ಅದಿರು ಅಥವಾ ಧಾನ್ಯಗಳನ್ನು ಸಾಗಿಸುವ ಹಡಗುಗಳೂ ದೊಡ್ಡವಾಗಿಯೇ ಇವೆ. ಇವಕ್ಕೆ ಬಲ್ಕ್ ಕ್ಯಾರಿಯರ್ಸ್ (bulk carriers) ಎಂದು ಹೇಳುತ್ತಾರೆ. ಒಮ್ಮೆಗೇ ೫೩,೦೦೦ ಡೆಡ್ ವೇಟ್ ಟನ್ನುಗಳಿಗೂ ಮೇಲ್ಪಟ್ಟು ಅದಿರು ಅಥವಾ ಧಾನ್ಯವನ್ನು ಸಾಗಿಸುವ ಶಕ್ಯತೆ ಉಳ್ಳ ಬಲ್ಕ್ ಕ್ಯಾರಿಯರ್‌ಗಳು ನಮ್ಮಲ್ಲಿ ೨೦ ಇವೆ. ಟ್ಯಾಂಕರುಗಳು, ಬಲ್ಕ್ ಕ್ಯಾರಿಯರುಗಳು ಒಂದೇ ತರಹದ ಸಾಮಾನುಗಳನ್ನು ಸಾಗಿಸುತ್ತವೆ.

ಅನೇಕ ವಿಧವಾದ ಸಂಕೀರ್ಣ ವಸ್ತುಗಳನ್ನು ಸಾಗಿಸುವ ಹಡಗುಗಳಿಗೆ ಸಾಮಾನ್ಯ ಸರಕಿನ ಹಡಗು (general cargo ship) ಎನ್ನುತ್ತಾರೆ. ಇವು ಹೆಚ್ಚಾಗಿ ಸುಮಾರು ೧೫,೦೦೦ ಡೆಡ್ ವೇಟ್ ಟನ್ನಿನಷ್ಟು ತೂಕ ಸಾಮುಗ್ರಿಗಳನ್ನು ಕೊಂಡೊಯ್ಯುವಷ್ಟು ಮಾತ್ರ ದೊಡ್ಡದಿರುತ್ತವೆ. ತೀರ ಪ್ರದೇಶದ ವ್ಯಾಪಾರದಲ್ಲಿ ತೊಡಗಿರುವ ಇಂತಹ ಹಡಗುಗಳು ಇನ್ನೂ ಸಣ್ಣದಾಗಿರುತ್ತವೆ. ಭಾರತ ವ್ಯಾಪಾರಿ ನೌಕಾಪಡೆಯ ೨೪೨ ಹಡಗುಗಳಲ್ಲಿ ೨೦೦ ಕ್ಕೂ ಮೇಲ್ಪಟ್ಟು ಹಡಗುಗಳು ಸಾಮಾನ್ಯ ಸರಕಿನ ಹಡಗುಗಳಾಗಿವೆ. ಲೈನರ್ ವ್ಯಾಪಾರದಲ್ಲಿ ಇಂತಹ ಹಡಗುಗಳನ್ನೇ ಉಪಯೋಗಿಸುವುದು.



ಸಾಮಾನ್ಯ ರೀತಿಯ ಪ್ರವಾಸಿ ಹಡಗುಗಳು ನಮ್ಮ ಪಡೆಯಲ್ಲಿ ಕೆಲವು ಇವೆ. ಒಂದು ಭಾರತ-ಪೂರ್ವ ಆಫ್ರಿಕಾದ ನಡುವೆಯೂ, ಇನ್ನೊಂದು, ಭಾರತ- ಮಲಯಾ, ಸಿಂಗಪೂರದ ನಡುವೆಯೂ ಪ್ರವಾಸ ಮಾಡುತ್ತಿರುತ್ತವೆ. ಭಾರತದಿಂದ ಮಕ್ಕಾಕ್ಕೆ ಹಾಜ್ ಯಾತ್ರೆಗೆ ಹೋಗುವ ಯಾತ್ರಿಕರ ಸೌಲಭ್ಯಕ್ಕೋಸ್ಕರ ಎರಡು - ಮೂರು ಪ್ರವಾಸೀ ಹಡಗುಗಳು ಇವೆ. ಈ ಹಡಗುಗಳಲ್ಲಿ ಪ್ರವಾಸೀ ಜನಕ್ಕೆ ಮಲಗಲು ಬಂಕ್ಸ್ (bunks) ವ್ಯವಸ್ಥೆ ಇರುತ್ತದೆ. ಕೋಣೆ (cabin) ಗಳು ಕೆಲವೇ ಇರುತ್ತವೆ.

ಕರಾವಳಿ ಪ್ರದೇಶದಲ್ಲಿ ಕೆಲವು ಪ್ರವಾಸೀ ಹಡಗುಗಳು ಬಳಕೆಯಲ್ಲಿವೆ. ಇವು ಮುಖ್ಯವಾಗಿ ಬೊಂಬಾಯಿ, ಗೋವೆ, ಕೊಚ್ಚಿ

← ಸಾಮಾನ್ಯ ಸರಕು ಹಡಗು "ವಿಶ್ವನಿಧಿ"

ಭಾರತ-ಇಂಗ್ಲಂಡಗಳ ನಡುವೆ ೧೯೪೮ ರಿಂದ ಕೆಲ ವರ್ಷ ಪ್ರಯಾಣಿಕರನ್ನೊಯ್ಯುತ್ತಿದ್ದ ಉಗಿಹಡಗ

ಇವುಗಳ ನಡುವೆ ಪ್ರವಾಸ ಮಾಡುತ್ತಿರುತ್ತವೆ. ಅಂದಮಾನ್ ದ್ವೀಪಸ್ತೋಮಕ್ಕೆ ಹೋಗಿ ಬರಲು ಸರಕಾರದವರು ಕೆಲವೆರಡು ಸಣ್ಣ ಪ್ರವಾಸೀ ಹಡಗುಗಳನ್ನು ನಡೆಸುತ್ತಿದ್ದಾರೆ.

ಸಾಮಾನ್ಯ ಸರಕು (general cargo) ಗಳ ಸಾಗಾಣಿಕೆಯಲ್ಲಿ ಈಗ ದೊಡ್ಡ ಕ್ರಾಂತಿಯೇ ನಡೆದಿದೆ. ಇದಕ್ಕೆ "ಕಂಟೇನರೈಸೇಷನ್" (Containerisation) ಎನ್ನುತ್ತಾರೆ. ಇದರ ಮೂಲತತ್ವ ಬಹಳ ಸರಳ. ಈಗ ಚಿಲ್ಲರೆ ಚಿಲ್ಲರೆಯಾಗಿ ಸಾಗಿಸುವ ಸಾಮಾನುಗಳನ್ನು ಸಮಪ್ರಮಾಣದ ಪೆಟ್ಟಿಗೆಗಳಲ್ಲಿ ಸಾಗಿಸುವುದಾದರೆ ಸಾಮಾನು ನೇರವಾಗಿ ಉತ್ಪನ್ನಕಾರನಿಂದ ಬಳಕೆಗಾರನಿಗೆ ಹೋಗಬಹುದು ಮತ್ತು ಸಾಗಾಣಿಕೆಯ ಸಮಯ ಹಾಗೂ ಖರ್ಚನ್ನೂ ಬಹಳ ತಗ್ಗಿಸಬಹುದು ಎಂಬುದು. ಪೆಟ್ಟಿಗೆಗಳ ಮೂಲಕ ಸಾಗಾಣಿಕೆ ಸಾಧ್ಯವಾಗಲು ಅದಕ್ಕೇ ವಿಶಿಷ್ಟ ರೀತಿಯ ಕಂಟೇನರ್ ಹಡಗುಗಳೂ, ಕಂಟೇನರ್ ಬಂದರುಗಳೂ ಮತ್ತು ಇವುಗಳಿಗೆ ಹೊಂದಿಕೊಂಡು ಹೋಗುವ ರೇಲು, ಲಾರಿ ವ್ಯವಸ್ಥೆಗಳೂ ಬೇಕಾಗುತ್ತವೆ. ಇವೆಲ್ಲಾ ವ್ಯವಸ್ಥೆ ಇದ್ದರೆ ಈಗಿನ ನಾಲ್ಕಾರು ಹಡಗುಗಳು ಮಾಡುವ ಕೆಲಸವನ್ನು ಒಂದೇ ಒಂದು ಕಂಟೇನರ್ ಹಡಗು ಮಾಡಬಲ್ಲದು; ಮತ್ತು ಬಂದರುಗಳಲ್ಲಿ ಈಗ ೧೫-೨೦ ದಿನ ಹಿಡಿಯುವ ಸಾಮಾನನ್ನು ಹಡಗಿಗೆ ಹೇರುವ, ಹಡಗಿನಿಂದ ಇಳಿಸುವ ಕ್ರಿಯೆಗಳು ಆಗ ಕೇವಲ ಎರಡು ಮೂರು ದಿನಗಳಲ್ಲಿ ಮುಗಿದು ಹೋಗುವುದು. ಈ ಕಂಟೇನರೈಸೇಷನ್ ಪದ್ಧತಿ ಈಗಾಗಲೇ ಅಮೇರಿಕ, ಯುರೋಪು, ಆಸ್ಟ್ರೇಲಿಯ, ಜಪಾನುಗಳಲ್ಲಿ ಬಳಕೆಗೆ ಬರುತ್ತಿದೆ. ಭಾರತದಲ್ಲಿಯೂ ಈ ಹೊಸ ವಿಧಾನವನ್ನು ಬಳಕೆಗೆ ತಂದುಕೊಳ್ಳಲು ಪ್ರಯತ್ನ ನಡೆಯುತ್ತಿದೆ.

ಇನ್ನು ಹನ್ನೆರಡು ವರುಷಗಳಲ್ಲಿ ನಮ್ಮ ವ್ಯಾಪಾರಿ ನೌಕಾಪಡೆಯ ಶಕ್ತಿಯನ್ನು ಒಂದು ಕೋಟಿ ಜಿ. ಆರ್. ಟಿ. (1,00,00,000g.r.t.) ಗೆ ಏರಿಸಬೇಕೆಂಬ ಯೋಜನೆ ಈಗ ಸರಕಾರದ ಮುಂದಿದೆ. ದೊಡ್ಡ ಕರಾವಳಿಯೂ, ವೃದ್ಧಿ ಹೊಂದುತ್ತಿರುವ ದೇಶಾಂತರ ವ್ಯಾಪಾರವೂ ಇರುವ ಭಾರತಕ್ಕೆ ಸುಸಜ್ಜಿತ ಮತ್ತು ಸುಪ್ರಮಾಣದ ನೌಕಾಪಡೆಯ ಅವಶ್ಯಕತೆ ಬಹಳ ಇದೆ. ನೌಕಾಬಲ ದೇಶದ ಸಂಪತ್ತನ್ನು ಹೆಚ್ಚಿಸುತ್ತದೆ ಸ್ವಾವಲಂಬನೆ ಬೆಳೆಸುತ್ತದೆ; ಅನೇಕಾನೇಕ ರೀತಿಯ ಕೈಗಾರಿಕೆಗಳ ಅಭಿವೃದ್ಧಿಗೆ ಪೋಷಕವಾಗುತ್ತದೆ; ಹಾಗೂ ಸಮಯ ಸಂದರ್ಭಗಳಲ್ಲಿ ದೇಶದ ಹಿತವನ್ನು ರಕ್ಷಿಸಲು ಒದಗುತ್ತದೆ.

ಒಂದು ಕಾಲಕ್ಕೆ ನೌಕಾಬಲದಲ್ಲಿ ನಮ್ಮ ಕೈ ಮುಂದಿದ್ದಾಗ ಭಾರತಕ್ಕೆ ಎಲ್ಲೆಡೆಯಿಂದಲೂ ಸಂಪತ್ತು ಬಂದು ಸುರಿಯುತ್ತಿತ್ತು. ನಮ್ಮ ನೌಕಾ ಸಂಪತ್ತಿಯನ್ನು ಹೆಚ್ಚಿಸಿಕೊಂಡರೆ ಅಂಥದೇ ಸಮಯ ಮತ್ತೆ ಬಂದೀತು. *

# ಸಂಬಂಧ

ಎಸ್. ಎಲ್. ಭೈರಪ್ಪ

ಪಾಪುವಿನ ಕಾಗದದಲ್ಲಿ ಅಂಥದೇನೂ ಇರಲಿಲ್ಲ. ಆದರೂ ಓದಿದಾಗ ನನಗೆ ಕಸಿವಿಸಿ ಎನಿಸಿತು.

ಮಾ॥ ಶ್ರೀ॥ ಅಕ್ಕನಿಗೆ ಪಾಪುವಿನ ನಮಸ್ಕಾರಗಳು.

ಆದಾಗಿ ಉಭಯಕುಶಲೋಪರಿ ಸಾಂಪ್ರತ. ಈಗ ಒಂದು ವಾರದಲ್ಲಿ ಬರೆದ ಕಾಗದದಲ್ಲಿ ನಿನಗೆ ಒಂದು ವಿಷಯ ತಿಳಿಸುವುದನ್ನು ಮರೆತಿದ್ದೆ. ಅದಕ್ಕೆ ಈಗ ಬರೆಯುತ್ತಿದ್ದೇನೆ. ನಮಗೆ ಇರುವ ಈ ಮೂರು ಜನ ಮಕ್ಕಳು ಸಾಕು ಎಂದು ನಾವು ತೀರ್ಮಾನಿಸಿದ್ದೇವೆ. ಈ ದುಷ್ಕಾಲದಲ್ಲಿ ಇನ್ನು ಒಂದು ಮಗು ಹೆಚ್ಚಿಗೆ ಆದರೂ ಕಷ್ಟವಾಗುತ್ತೆ. ಆದುದರಿಂದ ನಾನು ಆಪರೇಶನ್ ಮಾಡಿಸಿಕೊಳ್ಳುವುದೆಂದು ತೀರ್ಮಾನಿಸಿದ್ದೇನೆ. ಇಲ್ಲಿಯೇ ಸರ್ಕಾರಿ ಆಸ್ಪತ್ರೆಯಲ್ಲಿ ಮಾಡುತ್ತಾರಂತೆ. ಆಗ ನೀನು ಒಂದು ತಿಂಗಳ ಮಟ್ಟಿಗೆ ಇಲ್ಲಿಗೆ ಬಂದು ಮನೆ ನೋಡಿಕೊಳ್ಳುವುದು. ಅಥವಾ ಅಲ್ಲಿ ತುಂಬ ಒಳ್ಳೆಯ ಡಾಕ್ಟರ್ ಭಾವನಿಗೆ ಗೊತ್ತಿದ್ದರೆ ಕೇಳು. ನಾನು ಅಲ್ಲಿಗೇ ಬಂದು ಮಾಡಿಸಿಕೊಳ್ಳುತ್ತೇನೆ. ಯಾವುದಕ್ಕೂ ಬೇಗ ಕಾಗದ ಬರೆ. ತಿ॥ ಭಾವನಿಗೆ ನಮಸ್ಕಾರಗಳನ್ನು ತಿಳಿಸು.

ಇಂತಿ ನಮಸ್ಕಾರಗಳು
ಪಾಪು

ಎರಡು ಮೂರು ಮಕ್ಕಳಾದ ಮೇಲೆ ಗಂಡ ಅಥವಾ ಹೆಂಡತಿ ಆಪರೇಶನ್ ಮಾಡಿಸಿಕೊಳ್ಳುವುದು ಈಗ ಸಾಧಾರಣವಾಗಿದೆ. ಮಧ್ಯಮ ಮತ್ತು ಕಡಿಮೆ ಆದಾಯವಿರುವ ದಂಪತಿಗಳಿಗೆ ಅಗತ್ಯವೂ ಆಗಿದೆ. ಪಾಪುವಿನ ಯಜಮಾನರು ಸೊಸೈಟಿ ಇನ್‌ಸ್ಪೆಕ್ಟರು. ಸರ್ವಿಸ್ ಆಗಿರುವುದರಿಂದ ಒಟ್ಟು ಮುನ್ನೂರ ಐವತ್ತು ರೂಪಾಯಿ ಸಂಬಳ ಬರುತ್ತಿದೆ. ಅವಳ ತೀರ್ಮಾನದಲ್ಲಿ ಆಶ್ಚರ್ಯ ಪಡುವಂಥದೇನೂ ಇಲ್ಲ. ಆದರೂ ನನಗೆ ಈ ಕಾಗದದಿಂದ ಅದೇಕೋ ಕಸಿವಿಸಿಯಾಗುತ್ತಿದೆ.

ಅವಳು ನನಗಿಂತ ಹದಿನೈದು ವರ್ಷಕ್ಕೆ ಚಿಕ್ಕವಳು. ಆಡಿನ ಎರಡು ಮೊಲೆಗಳಂತೆ ನಾವಿಬ್ಬರೇ ಮಕ್ಕಳು ನಮ್ಮ ತಂದೆತಾಯಿಯರಿಗೆ. ಅವಳಿಗೆ ದೇವರು ಇದುವರೆಗೆ ಒಟ್ಟು ಮೂರು ಮಕ್ಕಳು ಕೊಟ್ಟಿದ್ದಾನೆ. ನನಗೆ ಒಂದೂ ಕೊಡಲಿಲ್ಲ. ಮಕ್ಕಳಾಗುವುದಕೂ ಪೂರ್ವ ಜನ್ಮದ ಸುಕೃತ ಬೇಕು ಅನ್ನುತ್ತಾರೆ. ಮೊದಲು ನಾನು ಅದನ್ನು ನಂಬುತ್ತಿರಲಿಲ್ಲ. ಪಾಪುವಿಗೆ ಆ ಸುಕೃತವಿದೆ. ಆದರೆ ಇನ್ನು ಸಾಕು ಸುಕೃತ ಫಲ ಎಂದು ತೀರ್ಮಾನಿಸಿದ್ದಾರೆ ಅವರು. ನನಗೆ ಯಾಕೆ ಕಸಿವಿಸಿಯಾಗಬೇಕು ?

ಒಂದು ದಿನ ಇವರನ್ನು ಕೇಳಿದ್ದೆ : "ಬಡವರಿಗೆ ದೇವರು ಯಾಕೆ ಹೆಚ್ಚಾಗಿ ಮಕ್ಕಳು ಕೊಡ್ತಾನೆ ?"

"ಆದರೆ ಬಡವರಿಗೂ ಆಗುತ್ತೆ, ಶ್ರೀಮಂತರಿಗೂ ಆಗುತ್ತೆ. ಅದರಲ್ಲಿ ವ್ಯತ್ಯಾಸವೇನೂ

ಇಲ್ಲ" ಇವರು ಹೇಳಿದರು.

"ಆದರೂ ಬಡವರಿಗೇ ಹೆಚ್ಚು ಯಾಕೆ ಹೇಳಿ."

"ಶ್ರೀಮಂತರಿಗೆ ಕಡಿಮೆ. ಎಷ್ಟೋ ಜನಕ್ಕೆ ಆಗೂದೇ ಇಲ್ಲ, ಯಾಕೆ ನೀನು ಹೇಳು," ಎಂದು ಇವರು ಪ್ರತಿಯಾಗಿ ಕೇಳಿದಾಗ ನನಗೆ ಉತ್ತರ ಹೇಳಲು ತಿಳಿಯಲಿಲ್ಲ. ನಮ್ಮನ್ನು ನಾವು ಶ್ರೀಮಂತರೆಂದು ಕರೆದುಕೊಳ್ಳುವುದು ಅಹಂಕಾರದ ಮಾತಾಗುತ್ತೆ. ಆದರೆ ಇವರು ಸಂಪಾದನೆ ಮಾಡಿ ಇಟ್ಟಿರುವಷ್ಟು ದುಡ್ಡು ಎಷ್ಟು ಜನದ ಹತ್ತಿರ ಇದೆ? ಯಾವ ಯಾವ ಬ್ಯಾಂಕುಗಳಲ್ಲಿ, ಕಂಪನಿಗಳಲ್ಲಿ ಎಷ್ಟು ಬಂಡವಾಳ ಇವರ ಹೆಸರಿನಲ್ಲಿದೆಯೋ ನನಗೆ ಸರಿಯಾಗಿ ಗೊತ್ತಿಲ್ಲ. ಏಳು ಎಂಟು ಲಕ್ಷವಿರಬಹುದು. ಸ್ವಲ್ಪ ಕಡಿಮೆ ಇದ್ದರೂ ಇಷ್ಟಿದ್ದವರನ್ನಲ್ಲದೆ ಮತ್ತೆ ಯಾರನ್ನು ಶ್ರೀಮಂತರು ಎನ್ನುತ್ತಾರೆ? ಇಷ್ಟು ದೊಡ್ಡ ಬಂಗಲೆ, ಅಡಿಗೆಯವರು, ಕಾರು, ಡ್ರೈವರು ಇವೆಲ್ಲ ಇರುವವರು ಬಡವರಂತೂ ಅಲ್ಲ. ಮಧ್ಯಮ ವರ್ಗದವರೂ ಅಲ್ಲ. ಮತ್ತೆ ಯಾರು?

ಪಾಪುವಿನ ಕಾಗದದಿಂದ ನನಗೇಕೆ ಕಸಿವಿಸಿಯಾಗಬೇಕು? ಅವಳಿಗೆ ಎರಡು ಗಂಡು ಒಂದು ಹೆಣ್ಣು ಇವೆ. ಅಷ್ಟು ಸಾಕು. ನಮ್ಮಿಬ್ಬರಿಗೂ ತಂದೆ ತಾಯಿ ಯಾರೂ ಇಲ್ಲ. ಚಿಕ್ಕವಳಾದ ಅವಳನ್ನು ನಾನೇ ಕರೆದುಕಳಿಸಿ ಮಾಡುತ್ತೇನೆ. ಇಲ್ಲಿಗೆ ಬಂದಾಗ ಅವಳಿಗೆ ಸೀರೆ, ಮಕ್ಕಳಿಗೆ ಬಟ್ಟೆ ತೆಗೆದುಕೊಡುತ್ತೇನೆ. ಕಷ್ಟ ಸುಖ ಅಂದರೆ ಮತ್ತೆ ಏನಾದರೂ ಕೊಡುತ್ತೇನೆ. ಅದಕ್ಕೆ ಇವರೂ ಅಡ್ಡಿ ಮಾಡುವುದಿಲ್ಲ. ಆದರೆ ಇದಕ್ಕಿಂತ ಹೆಚ್ಚಾಗಿ ನಾನು ತಾನೇ ಏನು ಮಾಡಲು ಸಾಧ್ಯ? ಅವರವರ ಸಂಸಾರದ ಭಾರ ಅವರವರದು. ಪಾಪುವಿನ ಯಜಮಾನರು ಬಿ. ಎ. ಮಾಡಿದ್ದಾರೆ. ಇವರು ಅದನ್ನೂ ಮಾಡಿರಲಿಲ್ಲ. ಆದರೆ ವ್ಯಾಪಾರ, ಕೈಗಾರಿಕೆ, ಬ್ಯಾಂಕು ದಳಾಳಿ, ಇವುಗಳ ದಾರಿಯೇ ಬೇರೆ. ಸಂಬಳದಾರರ ಸ್ಥಿತಿಯೇ ಬೇರೆ. ಇವರು ಇಷ್ಟೆಲ್ಲ ಸಂಪಾದನೆ ಮಾಡಿದರು. ಪಾಪುವಿನ ಗಂಡ ಸಂಬಳದಲ್ಲಿಯೇ ಇದ್ದಾರೆ. ಆದರೆ ಅವರೇನು ನಮ್ಮನ್ನು ಯಾವತ್ತೂ ಏನೂ ಕೇಳಿಲ್ಲ. ತಮ್ಮ ಸಂಬಳದಲ್ಲಿ ತೃಪ್ತಿಯಿಂದ ಮಿತವಾಗಿ ಸಂಸಾರ ಮಾಡಿಕೊಂಡಿದ್ದಾರೆ.

ಸಾಯಂಕಾಲ ಇಬ್ಬರೂ ಪುರಾಣ ಕೇಳಿಕೊಂಡು ಬಂದ ಮೇಲೆ ನಾನು ಇವರಿಗೆ ಪಾಪುವಿನ ಕಾಗದ ತೋರಿಸಿದೆ. ಆರುತಿಂಗಳ ಹಿಂದೆ ಹಾರ್ಟ್ ಅಟ್ಯಾಕ್ ಆದ ಮೇಲೆ ಇವರು ಸಿಮೆಂಟ್ ಕಂಪನಿಯ ಮ್ಯಾನೇಜಿಂಗ್ ಡೈರೆಕ್ಟರ್ ಕೆಲಸವನ್ನೂ ಬಿಟ್ಟುಬಿಟ್ಟರು. ಬೆಳಗ್ಗೆ ತಿರುಗಾಡುವುದು, ಮನೆಯಲ್ಲಿ ಭಾರತ ಭಾಗವತ ಓದುವುದು, ಸಂಜೆ ಪುರಾಣ ಅಥವಾ ಅಧ್ಯಾತ್ಮ ವಿಷಯದ ಭಾಷಣವಿದ್ದರೆ ಕೇಳಲು ಹೋಗುವುದು—ಇಷ್ಟರಲ್ಲಿ ಹಾಯಾಗಿ ಇರುತ್ತಾರೆ. ಕಾಗದ ನೋಡಿ ಅಂದರು: "ಅವಳು ಬರೆದಿರೋದು ಸರಿ. ಚಿಕ್ಕಮಗಳೂರಿಗಿಂತ ಬೆಂಗಳೂರಿನಲ್ಲಿ ಒಳ್ಳೆಯ ಸರ್ಜನ್ ಇರ್‍ತಾರೆ. ನಾನು ವಿಚಾರಿಸಿ ಹೇಳ್ತೀನಿ. ಅವಳು ಇಲ್ಲೇ ಬರಲಿ. ನಾವು ನಿಗ ನೋಡಿಕೋಭೌದು."

ಈ ಮಾತಿನಿಂದ ನನಗೆ ಯಾಕೋ ಅಸಮಾಧಾನವಾಯಿತು; ಯಾಕೆ ಎಂಬುದು ಆ ಕ್ಷಣದಲ್ಲಿ ನನಗೇ ತಿಳಿಯಲಿಲ್ಲ.

ಎರಡು ಮೂರು ದಿನವಾದರೂ ನಾನು ಅವಳಿಗೆ ಉತ್ತರ ಬರೆಯಲಿಲ್ಲ. ಆ ನಿಮಿಷವೇ ಉತ್ತರ ಬರೆಯುವುದಕ್ಕೆ ಇದೇನು ಬ್ಯಾಂಕು ಅಥವಾ ಕಂಪನಿಯ ಕೆಲಸದಷ್ಟು ಮಹತ್ತವಾದ ವಿಷಯವೇನಲ್ಲ. ಆದರೂ ಬರೆಯಲೇಬೇಕಲ್ಲ. "ನೀನು ಬೆಂಗಳೂರಿಗೇ ಬಾ. ನಿಮ್ಮ ಭಾವ ಒಳ್ಳೆಯ ಸರ್ಜನ್ನರಿಂದ ಎಲ್ಲ ವ್ಯವಸ್ಥೆಯನ್ನೂ ಮಾಡಿಸುತ್ತಾರೆ. ವಿಚಾರಿಸಿ ಆ ಮೇಲೆ ಮತ್ತೆ ಬರೆಯುತ್ತೀನಿ"— ಎಂದು ಬರೆಯಬೇಕು. ಆದರೆ ಕೈಗೆ ಪೆನ್ನು ತೆಗೆದುಕೊಂಡಾಗ ಮನಸ್ಸು ಬೇರೆ ಒಂದು ರೀತಿಯಲ್ಲಿ ಯೋಚಿಸಿತು. ಅಥವಾ ಒಂದು ವಿಷಯ ಹೊಳೆಯಿತು. ನಾನು ಬರೆಯಲೇ ಇಲ್ಲ.

ಒಂದೆರಡು ದಿನ ನನ್ನಲ್ಲಿಯೇ ಯೋಚಿಸುತ್ತಿದ್ದು ರಾತ್ರಿ ಊಟವಾದ ಮೇಲೆ ಇವರ ಕೈಲಿ ಮಾತಾಡಿದೆ.

"ನೋಡಿ, ಪಾಪೂಗೆ ನಾನಿನ್ನೂ ಕಾಗದ ಬರೆದಿಲ್ಲ."

"ಓ ಅದಾ," ಜ್ಞಾಪಿಸಿಕೊಂಡು ಇವರು ಹೇಳಿದರು: "ಸರ್ಜನ್ ನಾಯ್ಡು ಸಿಕ್ಕಿದ್ದರು. ಕರೆಸಿ, ನನ್ನ ಕೈಕೆಳಗಿನ ಸರ್ಜನರು ಮಾಡುವುದು ನಿಮಗೆ ಬೇಡವಾದರೆ ಖುದ್ದು ನಾನೇ ಆಪರೇಶನ್ ಮಾಡ್ತೀನಿ. ನೀವೇನೂ ಯೋಚನೆ ಮಾಡಬೇಡಿ. ಆದರೆ ಹೆರಿಗೆಯಾದಾಗಲಾದರೆ ತುಂಬ ಸುಲಭ. ಈಗ ಮೂರು ಮಕ್ಕಳು ಅಂತೀರಲ್ಲ. ಇನ್ನೊಂದು ಆಗಲಿ ಬಿಡಿ. ಆಗ ಮಾಡಸೋರಂತೆ. ಈಗಲೇ ಆಗ ಬೇಕು ಅಂತ ನೀವು ಹೇಳಿದರೆ ನಾನೇನೂ ಬ್ಯಾಡ ಅನ್ನಲ್ಲ— ಅಂದರು."

"ಹಾಗಾದರೆ ಅವಳಿಗೆ ಇನ್ನೂ ಒಂದು ಮಗು ಆಗಲಿ ಅಂತೀರಾ ?"

"ಅದನ್ನು ನಾವು ಹೇಳಬಾರದು. ನಾಯ್ಡು ಅಂದರೆ ತುಂಬ ದೊಡ್ಡ ಸರ್ಜನ್; ಅವರ ಅಭಿಪ್ರಾಯ ಹೀಗಿದೆ. ಇದರ ಮೇಲೆ ನಿಮ್ಮಿಷ್ಟ. ನೀವಿಬ್ಬರೂ ಆಲೋಚಿಸಿ ಹ್ಯಾಗೆ ತೀರ್ಮಾನ ಮಾಡಿದರೆ ನಾವದರಂತೆ ಮಾಡುಸ್ತೀವಿ ಅಂತ ನೀನು ಉತ್ತರ ಬರೆದುಬಿಡು."

ಅವರ ಈ ಮಾತಿನಿಂದ ನನಗೆ ಕಸಿವಿಸಿ ಎನಿಸಿತು. ಅದರಲ್ಲಿ ಅವರ ತಪ್ಪೇನೂ ಇಲ್ಲ. ನಾವಿನಿಗೆ ಒಂದು ಕೆಲಸವಾಗಬೇಕು. ಅದಕ್ಕೆ ಭಾವನಾದವರು ತಮ್ಮ ಅನುಕೂಲ ಮತ್ತು ಪ್ರಭಾವಕ್ಕೆ ತಕ್ಕಂತೆ ಆ ಕೆಲಸವನ್ನು ಚೆನ್ನಾಗಿಯೇ ನಿರ್ವಹಿಸುವವರನ್ನು ಗೊತ್ತು ಮಾಡಿದ್ದಾರೆ. ಇದಕ್ಕಿಂತ ಹೆಚ್ಚಿನದನ್ನು ಯಾರು ತಾನೇ ಮಾಡಬಹುದು ?

ನನ್ನ ಮನಸ್ಸಿನಲ್ಲಿರುವುದನ್ನು ಇವರ ಕೈಲಿ ಹೇಗೆ ಹೇಳುವುದು ? ಬಾಯಿ ಬಿಡುವುದಕ್ಕೆಂದು ನಾನು ಒಳಗೇ ಸಾಹಸಪಡುತ್ತಿದ್ದೆ. ಅದನ್ನು ಗಮನಿಸಿರಬಹುದು. ಇವರೇ ಕೇಳಿದರು:

"ಅದೇನೋ ಹೇಳಬೇಕು ಅಂತಿರೊ ಹಾಗಿದೆಯಲ್ಲ ಹೇಳು."

"ಏನೂ ಇಲ್ಲ."

"ಓರುಕಣೆ ಬ್ಯಾಡ ನಂಗೆ ತಿಳಿಯುತ್ತೆ. ಹೇಳು."

"ನೋಡಿ ನೀವೇನೂ ಅಂದುಕೋ ಕೂಡದು."

"ಏನೂ ಇಲ್ಲ, ಹೇಳು."

ಆದರೂ ನನಗೆ ಹೇಳುವುದು ಯಾಕೋ ಕಷ್ಟವಾಯಿತು ಹೇಗೆ ಪ್ರಾರಂಭಿಸುವುದು ? ಕೊನೆಗೆ ಶುರುಮಾಡಿದೆ: "ಮಕ್ಕಳಾಗೋದೂ ಬಿಡೋದೂ ದೇವರ ಇಚ್ಛೆ. ಅವಳಿಗೆ ಆಗೂ ಹಾಗಿದ್ದರೂ ಬ್ಯಾಡವಾಗಿದೆ. ಡಾಕ್ಟರು ಇನ್ನೊಂದು ಆದಾಗ ಆಪರೇಶನ್ ಮಾಡಬೇಕು ಅಂತಾರೆ."

"ಈಗ ನೀನು ಏನು ಹೇಳಬೇಕು ಅಂತಿದೀಯ ?"

ನನಗೆ ಇವರ ಈ ಸ್ವಭಾವವನ್ನು ಕಂಡರೆ ಆಗುವುದಿಲ್ಲ. ಯಾವ ಮಾತನ್ನಾದರೂ ನೇರವಾಗಿ ಗುರಿ ಇಟ್ಟಹಾಗೆ ಕೇಳಿ ಬಿಡ್ತಾರೆ. ಇವರಿಗೆ ಗುರಿ ಇಟ್ಟಹಾಗಿರುವ ಉತ್ತರವೇಬೇಕು. ನಿಧಾನವಿಲ್ಲದೆ ಹೇಳಬೇಕು. ಕಂಪನಿಯ ಡೈರೆಕ್ಟರ್, ಮ್ಯಾನೆಜಿಂಗ್ ಡೈರೆಕ್ಟರ್ ಆಗೋರಿಗೆಲ್ಲ ಈ ಸ್ವಭಾವ ಬಂದುಬಿಡುತ್ತೆಯೋ ಏನೋ ! ನಾನೂ ಅದಷ್ಟು ನೇರವಾಗಿಯೇ ಹೇಳಿದೆ: "ನಮಗೆ ಹ್ಯಾಗೂ ಮಕ್ಕಳಿಲ್ಲ. ಅವಳು ಇನ್ನೊಂದು ಸಲ ಬಸುರಿಯಾಗಲಿ. ಗಂಡೋ ಹೆಣ್ಣೋ ದೇವರು ಕೊಟ್ಟದ್ದು ಯಾವುದಾದರೂ ಅದನ್ನು ಹುಟ್ಟಿದಾಗಲೇ ನಮಗೆ ಕೊಟ್ಟುಬಿಡು. ನಾವು ದತ್ತುಮಾಡಿಕೊತ್ತೀವಿ ಅಂತ ಕೇಳ್ತೀನಿ. ಎಷ್ಟಾದರೂ ಬೆನ್ನಲ್ಲಿಬಿದ್ದ ತಂಗಿ. ಒಪ್ಪಿಯೇ ಒಪ್ತಾಳೆ ಅಂತ ನಂಗೆ ಅನ್ಸುತ್ತೆ. ಆಮ್ಯಾಲೆ ಅವಳು ಆಪರೇಶನ್ ಮಾಡಿಸಿಕೊಳ್ಳಲಿ ಮುಪ್ಪಿನ ವಯಸ್ಸಿನಲ್ಲಿ ನಮಗೂ ಒಂದು ದಿಕ್ಕಾಗುತ್ತೆ."

ಇವರು ಒಂದು ನಿಮಿಷ ನನ್ನ ಮುಖವನ್ನೇ ಇರಿಯುವವರಂತೆ ನೋಡಿದರು. ನನಗೆ ಕಸಿವಿಸಿಯಾಗುತ್ತಿತ್ತು. ಇವರು ಏನು ಹೇಳುತ್ತಾರೆಂಬುದನ್ನು ನಾನು ಊಹಿಸಿದ್ದೆ. ತೀ[illegible] ಹೆಚ್ಚೆಂದರೆ ಹಂಗಿಸಬಹುದು. [illegible] ಬೇಕೆಂದಿ[illegible]ದನ್ನು ಹೇಳಿಬಿಟ್ಟಿದ್ದ

ಇವರು ಹೇಳಿದರು: 'ದತ್ತು ತಗೊ ಳೂ ವಯಸ್ಸೂ ನಮಗೆ ಮುಗಿದುಹೋಗಿದೆ ಯಾವುದೂ ಬ್ಯಾಡ."



"ಯಾಕೆ ಹಾಗಂತೀರಿ ? ನಿಮಗೆ ಐವತ್ತೆಂಟು ಆಗಿರಬಹುದು. ನನಗೆ ಐವತ್ತು. ಈ ವಯಸ್ಸಿನಲ್ಲಿ ಯಾರೂ ದತ್ತುತಗೋಳೋದೇ ಇಲ್ಲವೆ ?"

"ನಿನಗೆ ಇನ್ನೂ ವಯಸ್ಸಿರಬಹುದು. ಆದರೆ ನನಗೆ ಇಲ್ಲ—" ಎಂದು ಮುಖವನ್ನು ತುಸು ಗಡಸುಮಾಡಿಕೊಂಡರು. ಈ ಮಾತನ್ನು ಮುಂದುವರಿಸುವುದು ಬೇಡ ಎಂದು ಅದರ ಅರ್ಥ. ನಾನು ಸುಮ್ಮನಾದೆ. ಆದರೆ ಅವರ ಮಾತಿನ ಒಳಅರ್ಥ ಮಾತ್ರ ನನಗೆ ಆಗಲಿಲ್ಲ.

ನನಗಾಗಲೇ ಒಂದು ಸಲ ಹಾರ್ಟ್ ಅಟ್ಯಾಕ್ ಆಗಿದೆ. ಇನ್ನು ಯಾವತ್ತು ಮತ್ತೆ ಅದು ಆಗುತ್ತೆಯೋ ಯಾರಿಗೆ ಗೊತ್ತು ? ನಾನು ಯಾವ ನಿಮಿಷವಾದರೂ ಸಾಯಬಹುದು. ನನಗಿನ್ನೆಂತಹ ದತ್ತು ಮಗು! ಎಂಬುದು ಅವರ ಅರ್ಥವಿದ್ದರೂ ಇರಬಹುದು. ಇದೇ ಆಗಿದ್ದರೆ ನನಗೂ ತುಂಬ ದುಃಖವಾಗುತ್ತೆ. ಮೊದಲು ಮೈಕೈ ತುಂಬಿಕೊಂಡು ಇವರು ಎಷ್ಟು ಚೆನ್ನಾಗಿದ್ದರು ! ಅಟ್ಯಾಕ್ ಆದಮೇಲೆ ಡಾಕ್ಟರ ಸಲಹೆಯಂತೆ ಮಾತ್ರ ಆಹಾರ ತೆಗೆದುಕೊಂಡು ಶರೀರ ಇಳಿದುಹೋಗಿದೆ. ಶರೀರ ಹಗುರವಾಗಿದ್ದಷ್ಟೂ ಹೃದಯಕ್ಕೆ ಒಳ್ಳೆಯದಂತೆ.

ಆದರೆ ಇವರ ಅರ್ಥ ಬೇರೆಯದೇ ಇರಬಹುದು. ಹಿಂದೆ ಆಗಿದ್ದರೆ ದತ್ತು ತಗೋತಿದ್ದೆ. ಅದಕ್ಕೆ ನೀನೇ ಅಡ್ಡಬಂದೆ. ಆಗ ಆಗಲಿಲ್ಲ. ಈಗ ನನಗೆ ಯಾವುದೂ ಬ್ಯಾಡ ಎಂದಿರಬಹುದು. ಈಗಾಗಲೇ ಹನ್ನೆರಡು ವರ್ಷಕ್ಕೆ ಹಿಂದೆ ಒಂದು ಸಲ ದತ್ತುವಿನ ಮಾತು ಬಂದಿತ್ತು. ಬಂದಿತ್ತೇನು, ಹೆಚ್ಚು ಕಡಿಮೆ ನಿಶ್ಚಯವೇ ಆಗಿತ್ತು. ಇವರ ತಮ್ಮ ಕಿಟ್ಟುವಿನ ಕೊನೆಯ ಮಗು ರಾಜನನ್ನು ತಗೊಳ್ಳುವುದಕ್ಕೆ ಇವರಿಗೆ ತುಂಬ ಆಶೆಯಿತ್ತು. ಕೊಡುವುದಕ್ಕೆ ಕಿಟ್ಟು, ಲಕ್ಷ್ಮಿ ಇಬ್ಬರೂ ಒಪ್ಪಿದರು. ಒಪ್ಪದೆ ಏನು ಮಾಡಿಯಾರು ? ಕಿಟ್ಟುವನ್ನು ಓದಿಸಿದವರೇ ಇವರು. ಅವನು ಓದಿ ಮುಗಿದ ಮೇಲೆ ಇವರ ಜೊತೆಯೇ ಕಮಿಶನ್ ವ್ಯಾಪಾರದಲ್ಲಿರು

ವಂತೆ ಹೇಳಿದರೆ ಅವನು ಕೇಳಲಿಲ್ಲ. ಕಾಲೇಜಿನಲ್ಲಿ ಲೆಕ್ಚರರಾಗಿ ಮದರಾಸಿನಲ್ಲಿ ಸೇರಿಕೊಂಡ. ಅವನ ವಿಷಯವಾದ ಸಂಸ್ಕೃತದ ಮೇಲೆ ಒಟ್ಟು ೫ ಪುಸ್ತಕಗಳನ್ನೂ ಬರೆದಿದ್ದಾನೆ. ಗೋಪಾಲ, ವಾಸು, ರಾಜ, ಮೂರು ಜನ ಗಂಡುಮಕ್ಕಳು. ಶ್ರೀಮತಿ ಒಬ್ಬಳೇ ಮಗಳು. ಆಗ ರಾಜ ಹತ್ತು ವರ್ಷದ ಹುಡುಗ. ದತ್ತುವಾಗಿದ್ದರೆ ಇಲ್ಲಿಯೇ ಇರುತ್ತಿದ್ದ. ಹಾಗೆ ನೋಡಿದರೆ ರಜದಲ್ಲಿ ಅವರೆಲ್ಲ ಇಲ್ಲಿಯೇ ಇರುತ್ತಾರೆ. ಬೇಸಿಗೆ ರಜದಲ್ಲಿ ಇವರು ದತ್ತುಮಾತು ತೆಗೆದರು. ಗಂಡ ಹೆಂಡತಿ ಇಬ್ಬರೂ ಒಪ್ಪಿದರು. ಅದ್ಯಾಕೋ ಆ ಮಾತಿಗೆ ನನಗೆ ಇಷ್ಟವಿರಲಿಲ್ಲ. ಯಾಕೆ ಅಂತ ಇವತ್ತಿನ ತನಕ ನನಗೇ ಸ್ಪಷ್ಟವಾಗಿ ಗೊತ್ತಿಲ್ಲ.

ಕಿಟ್ಟು ನನಗೇನು ಅಪರಿಚಿತನಲ್ಲ. ನಾನೂ ಅವನೂ ತುಂಬ ಹೊಂದಿಕೊಂಡು ಮಾತಾಡುತೀವಿ. ಲಕ್ಷ್ಮಿಯೂ ಅಷ್ಟೆ. ಅವೊತ್ತು ಮಧ್ಯಾಹ್ನ ಇವರು ಕಂಪನಿಯ ಆಫೀಸಿಗೆ ಹೋಗಿದ್ದರು. ನಾನು, ಕಿಟ್ಟು, ಲಕ್ಷ್ಮಿ ಮೂರು ಜನರೂ ಅಡಿಗೆ ಮನೆಯಲ್ಲಿ ಮಾತನಾಡುತ್ತಿದ್ದೆವು. ನಾನು ಕೇಳಿದೆ:

"ರಾಜನನ್ನ ನಮಗೇ ಕೊಟ್ಟರೆ ನಿಮಗೆ ಅವನನ್ನು ಕಳಕೊಂಡಹಾಗೆ ಆಗುಲ್ಲವೆ ?"

ಅದೇನು ಮಾತುಮಾತಿಗೆ ಸುಮ್ಮನೆ ಕೇಳಿದೆನೋ ಅಥವಾ ಯಾಕೆ ಕೇಳಿದೆನೋ ನನಗೇ ಗೊತ್ತಿಲ್ಲ.

ಲಕ್ಷ್ಮಿ ಹೇಳಿದಳು: "ಆದರೆ ಅವನೆಲ್ಲಿ ಹೋಗ್ತಾನೆ ? ಇಲ್ಲೇ ಇರ್ತಾನಲ್ಲ. ನಾವು ಇಲ್ಲಿಗೆ ಬರ್ತಿರ್ತೀವಿ, ನೀವು ಅಲ್ಲಿಗೆ ಬರ್ತಿರ್ತೀರಿ."

ಆದರೆ ಕಿಟ್ಟು ಅಂದ "ನಾನು ಸಂಸ್ಕೃತ ಓದಿದೋನು, ನನಗೆ ಶಾಸ್ತ್ರ ಗೊತ್ತಿದೆ. ಕೆಲಸಕ್ಕೆ ಅಂತ ನಾನು ಬೇರೆ ಊರಿನಲ್ಲಿದ್ದರೂ ನಮ್ಮ ಇಡೀ ಮನೆಗೆ ಅಣ್ಣನೇ ಯಜಮಾನ. ನೀವೇ ಯಜಮಾನಿತಿ. ಮಕ್ಕಳಿಗೆಲ್ಲ ಮೊದಲನೆ ತಂದೆ ಅವನು, ಮೊದಲನೆ ತಾಯಿ ನೀವು. ಇದು ಶಾಸ್ತ್ರದ ಮಾತು. ಗೋಪಾಲನ ಉಪನಯನದಲ್ಲಿ ಆಹ್ವಾನಪತ್ರಿಕೆ ಬರೆದಾಗ ಯಾರ ಹೆಸರಿನಲ್ಲಿತ್ತು ? ಅಣ್ಣನ ಹೆಸರಿನಲ್ಲಿ ಅಂದರೆ ದತ್ತು ತಗೊಳ್ಳದಿದ್ದರೂ ಎಲ್ಲ ಮಕ್ಕಳೂ ನಿಮ್ಮೇವೇ. ಏನೋ ರಾಜ ಒಬ್ಬನನ್ನು ನೀವು ಶಾಸ್ತ್ರೋಕ್ತವಾಗಿ ಕೇಳಿದಿರಿ. ನಿಮಗೆ ಮನಸ್ಸು ಸಮಾಧಾನವಾಗುವುದಿದ್ದರೆ ಹಾಗೇ ಆಗಲಿ ಅಂತ ನಾವು ಹೂಂ ಅಂದೆವು. ಇದರಲ್ಲಿ ಕಳಕೊಳ್ಳೋದೇನು ?"

ಕಿಟ್ಟು ಶಾಸ್ತ್ರ, ಸಂಸ್ಕೃತ ಚೆನ್ನಾಗಿ ಓದಿರೋನು. ಅವನ ಮಾತು ಸರಿ ಎಂದು ಯಾರಾದರೂ ಹೇಳಿಯಾರು. ಆದರೆ ನನಗೆ ಯಾಕೋ ಅದು ಸಹಜ ಅನಿಸಲಿಲ್ಲ. ಕಿಟ್ಟುವಿನ ಸಂಬಳ ತಿಂಗಳಿಗೆ ಆರುನೂರು. ನಮಗಿರುವ ಆಸ್ತಿ ಆರೆಂಟುಲಕ್ಷ, ಇಷ್ಟೊಂದು ಆಸ್ತಿ ಇರುವವರು ದತ್ತುಕೇಳಿದರೆ ಯಾರುತಾನೇ ಬೇಡ ಅಂತಾರೆ. ಅದರಲ್ಲೂ ಸ್ವಂತ ಅಣ್ಣನದು, ಹಾಗೂ ತನ್ನದೆ, ಹೀಗೂ ತನ್ನದೇ; ಕಿಟ್ಟು ದತ್ತುಕೊಡಲು ಒಪ್ಪಿದ್ದಾನೆ- ಅಂತ ನಾನು ಭಾವಿಸಿದೆ.

ಕಿಟ್ಟುವಿನ ಮಕ್ಕಳೆಲ್ಲ ನನಗೇ ಹೊಂದಿಕೊಂಡಿದ್ದವು. ಈಗಲೂ ಹೊಂದಿಕೊಂಡೇ ಇವೆ. ಇಲ್ಲಿಗೆ ಬಂದಾಗ ದೊಡ್ಡಮ್ಮ ದೊಡ್ಡಮ್ಮ ಅಂತ ನನ್ನ ಕೈಲಿ ಮಾತಾಡುತ್ತವೆ. ನನ್ನ ಹಿಂದೆ ಮುಂದೆ ತಿರುಗುತ್ತವೆ. ಹಿರಿಯ ಹುಡುಗ ಗೋಪಾಲನ ಮೆಡಿಕಲ್ ಪರೀಕ್ಷೆಯ ರಿಸಲ್ಟ್ ಬಂದಾಗ ಅವರೆಲ್ಲ ಇಲ್ಲಿಯೇ ಇದ್ದರು. ಪಾಸಾಗಿದೆ ಅಂತ ಟೆಲಿಗ್ರಾಂ ಬಂದ ತಕ್ಷಣ ಅವನು ನನಗೆ, ಇವರಿಗೆ ಮೊದಲು ನಮಸ್ಕಾರ ಮಾಡಿದ. ಆಮೇಲೆ ಅವನ ತಾಯಿತಂದೆಯರಿಗೆ ಮಾಡಿದ. ಮಕ್ಕಳೆಲ್ಲ ಈಗಲೂ ನನ್ನ ಕೈಲಿ ಅಷ್ಟೇ ಚೆನ್ನಾಗಿ ಇದಾರೆ. ಲಕ್ಷ್ಮಿ ನನ್ನನ್ನು ಅಕ್ಕ ಅಂತಲೇ ಕರೀತಾಳೆ ಇವರಿಗೆ ತುಂಬ ಶ್ರದ್ಧೆಯಿಂದ ಉಪಚಾರ ಮಾಡ್ತಾಳೆ. ಇವರು ಕಂಪನಿ ಕೆಲಸಕ್ಕೆ ಮದರಾಸಿಗೆ ಹೋದಾಗ ಇನ್ಯಾರೂ ಮಾಡುಲ್ಲ, ಅಷ್ಟು ನಿಗ ತಗೋತಾಳೆ ಅಂತ ಇವರೇ ಹೇಳ್ತಾರೆ. ಸುಮ್ಮ ಸುಮ್ಮನೆ ಯಾರು ತಾನೇ ಗಂಡನ ಅಣ್ಣನ ಮೇಲೆ ಇಷ್ಟೊಂದು ಅಂತಃಕರಣ ತೋರಿಸ್ತಾರೆ? ನಮ್ಮ ಹತ್ತಿರ ಇಷ್ಟೊಂದು ಆಸ್ತಿ ಇದೆ. ಜೊತೆಗೆ ಮಕ್ಕಳಿಲ್ಲ. ನನಗೆ ಯಾಕೋ ಈ ದತ್ತು ಪ್ರಸ್ತಾಪ ಸರಿ ಎನಿಸಲಿಲ್ಲ. ರಜ ಕಳೆದ ಮೇಲೆ ಕಿಟ್ಟು, ಅವನ ಹೆಂಡತಿ

ಮಕ್ಕಳು ಎಲ್ಲರೂ ಮದರಾಸಿಗೆ ಹೋದರು.

ಒಂದು ದಿನ ನಾನು ಇವರನ್ನು ಕೇಳಿದೆ, "ಹಿಂದು ಮುಂದು ಯೋಚನೆ ಮಾಡದೆ ನೀವು ಯಾಕೆ ಕಿಟ್ಟು ಕೈಲಿ ದತ್ತು ವಿಷಯ ಮಾತಾಡಿದಿರಿ ?"

"ಅದರಲ್ಲೇನು ಯೋಚನೆ ಮಾಡ್ಬೋದು ?"

"ರಾಜನಿಗೆ ಆಗಲೇ ಹತ್ತು ವರ್ಷ. ತಿಳಿವಳಿಕೆ ಬಂದಿರೋ ಹುಡುಗ. ತನ್ನ ತಂದೆ ತಾಯಿ ಯಾರು ಅನ್ನೋದು ಅವನಿಗೆ ಗೊತ್ತೇ ಇದೆ. ಇನ್ನು ನಾವು ದತ್ತು ಮಾಡಿಕೊಂಡರೂ ಅವನಿಗೆ ಗೊತ್ತಿರೋದಿಲ್ಲವೇ, ಇವರು ನನಗೆ ದತ್ತು ತಂದೆತಾಯಿಗಳು ಅಂತ ?"

"ಗೊತ್ತಾದ್ರೇನು ? ಅವರೆಲ್ಲ ಹಾಗೂ ನಮ್ಮ ಮಕ್ಕಳು, ಹೀಗೂ ನಮ್ಮ ಮಕ್ಕಳು. ಇವರು ನಮ್ಮ ದೊಡ್ಡಪ್ಪ, ದೊಡ್ಡಮ್ಮ, ನನ್ನನ್ನು ದತ್ತು ತಗೊಂಡಿದಾರೆ, ಅಂತ ಅವನಿಗೆ ಗೊತ್ತಿದ್ದರೂ ಆಗೋ ಬಾಧಕವೇನು ?"

"ಹಾಗಾದರೆ ದತ್ತು ಅಂತ ತಾನೇ ಯಾಕೆ ಮಾಡಿಕೋಬೇಕು ?"

"ಮುಂದೆ ಶಾಸ್ತ್ರ ಸಂಬಂಧದಲ್ಲಾದರೂ ನಮ್ಮ ಹೆಸರು ಹೇಳೋಕೆ ಒಂದು ಬ್ಯಾಡವೆ ? ನಾವು ಸತ್ತ ಮೇಲೆ ನಮ್ಮ ಹೆಸರಿನಲ್ಲಿ ವರ್ಷಕ್ಕೊಂದು ಸಲ ಪಿಂಡ ಹಾಕೋಕೆ ಒಬ್ಬ ಹುಡುಗ ನಿಶ್ಚಿತವಾಗಿರಲಿ."

"ಇರೂ ತನಕ ನಾವು ಸತ್ತು ಬೂದಿಯಾದ ಮೇಲೆ ಮುಂದಿನ ಪಿಂಡಗಿಂಡ ಎಲ್ಲ ನಿಜವೋ ಸುಳ್ಳೋ ಯಾರಿಗೆ ಗೊತ್ತು. ಹ್ಯಾಗೂ ತಮ್ಮ ಅನಿಸಿಕೊಂಡ ಕಿಟ್ಟು ಸತ್ತಾಗ ಶ್ರಾದ್ಧ ಮಾಡಿಯೇ ಮಾಡ್ತಾನೆ. ನನಗಂತೂ ಈ ದತ್ತು ವಿಷಯಬ್ಯಾಡ ಅನಿಸುತ್ತೆ. ಇದರ ಮೇಲೆ ನಿಮ್ಮಿಷ್ಟ."

ಆ ಮೇಲೆ ಈ ವಿಷಯದಲ್ಲಿ ಇನ್ನೂ ಎರಡು ಮೂರು ದಿನ ಮಾತು ನಡೆಯಿತು. ನಾನು ಹಟವನ್ನೇ ಹಿಡಿದೆ. ನಾಲ್ಕು ದಿನ ನನ್ನ ಮೇಲೆ ಕೋಪಿಸಿಕೊಂಡಿದ್ದ ಇವರು ಸುಮ್ಮನಾದರು. ಕಿಟ್ಟು ತಾನಾಗಿಯೇ ಈ ವಿಷಯ ತೆಗೆಯಲಿಲ್ಲ. ಇವರಾಗಿಯೇ ಮತ್ತೆ ಮಾತನಾಡಲಿಲ್ಲ.

೨

ಇದು ಕಳೆದು ಆಗಲೇ ಹನ್ನೆರಡು ವರ್ಷವಾಗಿದೆ. ಅವರು ಇದನ್ನೇ ಮನಸ್ಸಿನಲ್ಲಿಟ್ಟುಕೊಂಡು ಮಾತನಾಡಿದ್ದಾರೆಯೊ ಅಥವಾ ಮತ್ತೆ ಏನನ್ನು ಇಟ್ಟುಕೊಂಡಿದ್ದಾರೆಯೊ ನನಗೆ ಖಚಿತವಾಗಿ ಗೊತ್ತಿಲ್ಲ. ಆದರೂ ನಾನು ಬಿಡಲಿಲ್ಲ. ಪಾಪುವಿಗೆ ಇನ್ನೊಂದು ಮಗುವಾಗಲಿ; ಅದು ಹುಟ್ಟಿದಾಗಲೇ ದತ್ತು ತಗೊಂಡು ಬಿಡೋಣ. ಅದಕ್ಕೆ ಬುದ್ಧಿ ಬರುವಾಗಲೇ ಇವರೇ ನನ್ನ ತಂದೆ ತಾಯಿ ಅಂತ ಬೆಳೀಲಿ; ಮುಂದೆ ಪಾಪುವಾಗಲಿ ಅವಳ ಗಂಡನಾಗಲಿ ಒಂದು ದಿನವೂ ಅದರ ಕೈಲಿ ನೀನು ದತ್ತು ಮಗು ಅಂತ ಹೇಳಬೇಡಿ ಅಂತ ಅವರಿಗೆ ಹೇಳ್ತೀನಿ; ಗಂಡಾದರೆ ನಮಗೆ ಆಗುತ್ತೆ. ಹೆಣ್ಣಾದರೆ ಸಾಕಿ ಬೆಳಸಿ ಮದುವೆ ಮಾಡೋಣ—ಎಂದು ಇವರಿಗೆ ಹೇಳಿ ಹಟವನ್ನೇ ಹಿಡಿದೆ.

ಅಷ್ಟರಲ್ಲಿ ಪಾಪು ಮತ್ತೆ ಒಂದು ಕಾಗದ ಬರೆದಳು. ಹಿಂದಿನ ಕಾಗದದ ವಿಷಯವನ್ನೇ ಮತ್ತೆ ಬರೆದು ಅದು ನನಗೆ ತಲುಪಿದೆಯೋ ಇಲ್ಲವೋ ಎಂಬ ಸಂದೇಹ ವ್ಯಕ್ತಪಡಿಸಿ ಈ ಕಾಗದಕ್ಕೆ ತಕ್ಷಣ ಉತ್ತರ ಬರೆಯಬೇಕೆಂದು ಕೇಳಿದ್ದಳು. ಅದನ್ನು ಇವರಿಗೆ ತೋರಿಸಿದೆ. ಒಂದು ಸಲ ಕಣ್ಣೀರನ್ನೂ ಹಾಕಿದೆ. ಕೊನೆಗೆ ಒಪ್ಪಿಕೊಂಡರು. ಒಪ್ಪಿಗೆಯಲ್ಲಿ ಉತ್ಸಾಹವೇನೂ ಇದ್ದಂತೆ ಕಾಣಲಿಲ್ಲ. ಒಂದು ಸಲ ಹಾರ್ಟ್ ಅಟ್ಯಾಕ್ ಆಗಿ ಕಂಪನಿಯ ಕೆಲಸದಿಂದಲೂ ನಿವೃತ್ತರಾದ ಮೇಲೆ ಇವರಿಗೆ ಯಾವುದರಲ್ಲೂ ಹೆಚ್ಚಿನ ಉತ್ಸಾಹವಿಲ್ಲ. ಅಂತೂ ಒಪ್ಪಿದರಲ್ಲ, ಅಷ್ಟೇ ಸಾಕು.

ಈ ವಿಷಯವನ್ನು ಕಾಗದದಲ್ಲಿ ಪ್ರಸ್ತಾಪಿಸುವುದು ಅಷ್ಟು ಚೆನ್ನಲ್ಲ. ನಾನೇ ಖುದ್ದು ಹೋಗುವುದು ಒಳ್ಳೆಯದೆಂದು ಯೋಚಿಸಿದೆ. ಅಲ್ಲದೆ ನಾನು ಪಾಪುವಿನ ಮನೆಗೆ ಹೋಗಿ ಎಷ್ಟೋ ದಿನವಾಗಿತ್ತು. ಕಿಟ್ಟು, ಅವನ ಹೆಂಡತಿ ಮತ್ತು ಮಕ್ಕಳಾದರೆ ಇಲ್ಲಿಗೆ ವರ್ಷಕ್ಕೊಂದು ಸಲ ತಪ್ಪದೆ ಬರುತ್ತಾರೆ. ಆದರೆ ಪಾಪು ಹಾಗೆ ಬರುವುದಿಲ್ಲ. ಕಿಟ್ಟುವಿಗಾದರೆ ಇದು ಅಣ್ಣನ ಮನೆ.

ಪಾಪುವಿಗೆ ಅಕ್ಕನ ಮನೆಯಾದರೂ ಪದೇಪದೇ ಹ್ಯಾಗೆ ಮಕ್ಕಳನ್ನೂ ಕರೆದುಕೊಂಡು ಬಂದಾಳು? ಅವಳು ಹಾಗೆಲ್ಲ ಕರೆಸಿಕೊಳ್ಳದೆ ಬರುವವಳಲ್ಲ.

ಅಡಿಗೆಯ ರುಕ್ಕಮ್ಮನಿಗೆ ಹೇಳಿ ತಿಂಡಿತೀರ್ಥ ಮಾಡಿಸಿಕೊಂಡು ನಾನೊಬ್ಬಳೇ ಕಾರಿನಲ್ಲಿ ಚಿಕ್ಕಮಗಳೂರಿಗೆ ಹೋದೆ. ನನ್ನನ್ನು ತಲುಪಿಸಿ ಊಟ ಮಾಡಿಕೊಂಡ ತಕ್ಷಣ ಡ್ರೈವರ್ ಕಾರು ತೆಗೆದುಕೊಂಡು ಹಿಂತಿರುಗಿದ. ನಾನು ಅಲ್ಲಿ ಎಂಟು ದಿನವಿದ್ದೆ. ನನ್ನ ಮಾತಿಗೆ ಪಾಪು ಅವಳ ಯಜಮಾನರು ಇಬ್ಬರೂ ಒಪ್ಪಿದರು.



ನಾನು ಅಲ್ಲಿಗೆ ಹೋಗಿ ಬಂದು ಆಗಲೇ ಒಂದು ವರ್ಷವಾಯಿತು. ಈಗ ಪಾಪು ಬಸುರಿ. ಏಳನೆಯ ತಿಂಗಳು ನಡೆಯುತ್ತಿದೆ. ಅವಳ ಹೊಟ್ಟೆಯಲ್ಲಿರುವ ಮಗು ನಮ್ಮದು, ಗಂಡಾಗಲಿ, ಹೆಣ್ಣಾಗಲಿ ನಮ್ಮದು. ದೇವರು ಗಂಡನ್ನೇ ಮಾಡಿರಲಿ. ಅವಳಿಗೆ ನಾಲ್ಕನೆಯ ತಿಂಗಳು ನಡೆಯುತ್ತಿದ್ದಾಗ ನಾನು ಇನ್ನೊಂದು ಸಲ ಚಿಕ್ಕಮಗಳೂರಿಗೆ ಹೋಗಿದ್ದೆ. ಡಾಕ್ಟರರಿಂದ ಪರೀಕ್ಷೆ ಮಾಡಿಸಿ ತುಂಬ ಟಾನಿಕ್, ಹಣ್ಣು-ಹಾಲುಗಳಿಗೆ ಅಂತ ಇನ್ನೂರು ರೂಪಾಯಿ ಕೊಟ್ಟು ಬಂದಿದ್ದೆ. ಬಸುರಿಗೆ ಪುಷ್ಟಿಯಾದ ಆಹಾರ ಬಿದ್ದರೆ ಹೊಟ್ಟೆಯಲ್ಲಿರುವ ಮಗು ಚೆನ್ನಾಗಿ ಬೆಳೆಯುತ್ತೆ. ಮಗು ನನ್ನ ಹೊಟ್ಟೆಯಲ್ಲಿ ಹುಟ್ಟಿದರೇನು ನನ್ನ ತಂಗಿಯ ಹೊಟ್ಟೆಯಲ್ಲಿ ಹುಟ್ಟಿದರೇನು. ಅಕ್ಕ ತಂಗಿ ಇಬ್ಬರೂ ಒಂದೇ ಬಳ್ಳಿಯ ಎರಡು ಕುಡಿಗಳು. ಬೆನ್ನಿನಲ್ಲಿ ಬಿದ್ದ ತಂಗಿಯ ಮಕ್ಕಳು ತನ್ನ ಮಕ್ಕಳೇ. ಪಾಪುವಿನ ಮೂರು ಮಕ್ಕಳೂ ತುಂಬ ಲಕ್ಷಣವಾಗಿವೆ. ಹಿರಿಯ ಹುಡುಗ ವಿಜಯನಿಗೆ ಈಗ ಹನ್ನೆರಡು ವರ್ಷ. ಆಗಲೇ ಮಿಡ್ಲ್‌ಸ್ಕೂಲು ಕೊನೆಯಲ್ಲಿದ್ದಾನೆ. ತುಂಬ ಜಾಣ. ಲತಾಗೆ ಒಂಬತ್ತು. ನಮ್ಮ ಅಮ್ಮ ಇದ್ದ ಹಾಗೆಯೆ ಇದಾಳೆ. ಎಷ್ಟು ಮುದ್ದು ಮುಖ! ಅಲ್ಲಿಗೆ ಹೋದಾಗ ಅವಳನ್ನು ನನ್ನ ತೊಡೆಯ ಮೇಲೆಯೇ ಕೂರಿಸಿಕೊತ್ತೀನಿ; ನನ್ನ ಜೊತೆಯೇ ಮಲಗಿಸಿಕೊತ್ತೀನಿ; ಸ್ವಂತ ಮಕ್ಕಳಿಲ್ಲದ ಹೆಂಗಸು ತಂಗಿಯ ಮಕ್ಕಳನ್ನು ಪ್ರೀತಿಸಿಯೇ ಸಂತೋಷಪಡಬೇಕು. ಮೂರನೆಯ ಕುಮಾರ ಆರು ವರ್ಷದವನು. ದೊಡ್ಡಮ್ಮ ದೊಡ್ಡಮ್ಮ ಅಂತ ನನ್ನ ಹಿಂದೆಯೇ ತಿರುಗುತ್ತಾನೆ.

ವಿಜಯನನ್ನು ಮೆಡಿಕಲ್ ಕಾಲೇಜಿನಲ್ಲಿ ಓದಿಸಬೇಕು. ಲತಾಳನ್ನು ಏನಿಲ್ಲವೆಂದರೂ ಒಂದು ಸಾವಿರ ಸಂಬಳದ ಹುಡುಗನಿಗೆ ಕೊಟ್ಟು ಮದುವೆ ಮಾಡಬೇಕು. ಕುಮಾರನನ್ನೂ ಓದಿಸಬೇಕು. ಪಾಪುವಿನ ಗಂಡನ ಸಂಬಳ ಸಾಲದು. ನಾವು ಮಾಡಬೇಕು. ನಮಗೆ ದೇವರು ಇಷ್ಟೆಲ್ಲ ಕೊಟ್ಟಿರುವುದು ಯಾಕೆ? ಪಾಪುವಿನ ಹೆಸರಿನಲ್ಲಿ ಬೆಂಗಳೂರಿನಲ್ಲಿ ಒಂದು ಮನೆ ಕಟ್ಟಿಸಿ ಕೊಡಬೇಕು.

ಪಾಪು ತುಂಬ ಲಕ್ಷಣವಾದ ಹುಡುಗಿ. ಬಸುರಿ

ಯಲ್ಲಂತೂ ಅಷ್ಟು ಚೆನ್ನಾಗಿ ಕಾಣ್ತಾಳೆ. ಕಿಟ್ಟು ವಿನ ಹೆಂಡತಿ ಲಕ್ಷ್ಮಿ ಚೆನ್ನಾಗಿದ್ದರೂ ಪಾಪುವಿನ ರೂಪ, ರೇಖೆ ಅವಳಿಗೆಲ್ಲಿಂದ ಬರಬೇಕು? ಸೀತಾ ದೇವಿ, ಮಂಡೋದರಿ ಇಬ್ಬರೂ ಸಮ ಸಮ ಲಕ್ಷಣವಾದ ಹೆಂಗಸರಂತೆ. ಆದರೆ ಸೀತಾ ದೇವಿಗೆ ಪದ್ಮರೇಖೆಯಿತ್ತು. ಮಂಡೋದರಿಗೆ ಕಾಕರೇಖೆಯಿತ್ತು. ಮಕ್ಕಳು ಪಾಪುವಿನ ಹೊಟ್ಟೆಯಲ್ಲಿ, ಮುದ್ದಾಗಿ ಹುಟ್ಟುವ ಹಾಗೆ ಬೇರೆ ಯಾರ ಹೊಟ್ಟೆಯಲ್ಲೂ ಹುಟ್ಟುಲ್ಲ.

ಈಗ ಎಂಟು ದಿನದಲ್ಲಿ ನಾನೇ ಹೋಗಿ ಕಾರಿನಲ್ಲಿ ಪಾಪುವನ್ನು ಇಲ್ಲಿಗೆ ಕರೆದುಕೊಂಡು ಬಂದೆ. ಇವರು ಡಾಕ್ಟರ್ ನಾಯ್ಡು ಅವರಿಗೆ ಹೇಳಿದ್ದಾರೆ. ಅವಳಿಗೆ ಆಪರೇಶನ್ ಆಗುವುದು ಮಾತ್ರವಲ್ಲ. ಈ ಸಲದ ಹೆರಿಗೆ ಸಹ ಸ್ವಲ್ಪವೂ ಕಷ್ಟವಿಲ್ಲದೆ ಆಗಬೇಕು. ಹೆರಿಗೆಯಲ್ಲಿ ತೊಂದರೆಯಾದರೆ ಮಗುವಿಗೆ ಏನಾದರೂ ಐಬು ಆಗಬಹುದು. ಮಗು ಆರೋಗ್ಯ, ದೃಢಕಾಯವಾಗಿ ಹುಟ್ಟಬೇಕು. ಹೆಣ್ಣಾಗುತ್ತೆಯೋ ಗಂಡಾಗುತ್ತೆಯೋ ಗೊತ್ತಿಲ್ಲ ಅದು ನಮ್ಮ ಕೈಲಿಲ್ಲ. ಅವಳಿಗೆ ಮೊದಲನೆಯದು ಗಂಡು ಎರಡನೆಯದು ಹೆಣ್ಣು, ಮೂರನೆಯದು ಗಂಡು. ನಾಲ್ಕನೆಯದು ಹೆಣ್ಣೇ ಆದರೆ? ಥೂ, ಹೆಣ್ಣು ಬೇಡ. ಹೆಣ್ಣು ಮಗುವನ್ನು ಯಾರು ತಾನೇ ದತ್ತು ತೆಗೆದುಕೊಳ್ಳುತ್ತಾರೆ? ನಮ್ಮ ಮನೆಯ ಹೆಸರು ಹೇಳುವುದು ಗಂಡೇ ಹೊರತು ಕಂಡವರ ಮನೆಗೆ ಹೋಗುವ ಹೆಣ್ಣಲ್ಲ. ಇದು ಹೆಣ್ಣೇ ಆಗಿಬಿಟ್ಟರೆ ಅದೂ ನಮ್ಮ ಗ್ರಹಚಾರವೋ ಏನೋ! ಹೇಳಿ ಕೇಳಿ ಹೆಣ್ಣನ್ನು ದತ್ತು ತಗೊಂಡರೆ ಕಿಟ್ಟು, ಲಕ್ಷ್ಮಿ ಏನೂ ಅನ್ನದೆ ಇರ್ತಾರೆಯೆ? ಇವರು ತಾನೆ ಅದಕ್ಕೆ ಒಪ್ಪುತ್ತಾರೆಯೆ? ಪಾಪು ಮತ್ತೆ ಬಸುರಿಯಾಗಲಿ, ಆ ಮಗೂನ ನಾವು ದತ್ತು ತಗೋಳೋಣ ಅನ್ನೋ ಮಾತಿಗೆ ಇವರೇನು ಅಷ್ಟು ಆಕರಾಸ್ಥೆ ತೋರಿಸಲಿಲ್ಲ. ನನ್ನ ಬಲವಂತಕ್ಕೆ ಹೂಂ ಅಂತ ಒಪ್ಪಿಕೊಂಡರು. ಅದು ಹೆಣ್ಣೇ ಆದರೆ ಅವರು ಬ್ಯಾಡ ಅಂದು ಬಿಡಬಹುದು. ಆಗ ನನ್ನ ಮಾತಿನ ಗತಿ ಏನು? ಹೆಣ್ಣಾಯಿತು, ನಮಗೆ ಬ್ಯಾಡ ಕಣೇ ಅಂತ ಪಾಪೂಗೆ ಹೇಳೋಕ್ಕೆ ಆಗುತ್ತೆಯೆ? ದೇವರೇ, ಅದು ಗಂಡೇ ಆಗಲಿ. ನನಗೂ ಸಂತೋಷವಾಗಬೇಕು. ಇವರಿಗೂ ಸಂತೋಷವಾಗಬೇಕು. ನಾಳೆ ಕಿಟ್ಟು ಲಕ್ಷ್ಮಿ ಅವರುಗಳು ಹಿಂದುಗಡೆಯಾದರೂ ಒಂದು ಮಾತು ಆಡಿಕೊಳ್ಳೋಹಾಗಿರಬಾರದು.

ಪಾಪುವಿನ ಬಣ್ಣ ಬಿಳುಪು. ಆದರೆ ಈಗ ಅವಳ ಮುಖ, ಮೈ, ಕೈ ಎಲ್ಲ ಸ್ವಲ್ಪ ಕಪ್ಪಗೆ ಕಾಣುತ್ತಿದೆ. ನನಗೆ ಚೆನ್ನಾಗಿ ಗೊತ್ತು. ಎಷ್ಟೋ ಕಡೆ ನೋಡಿದೀನಿ. ಕೇಳಿದಿನಿ. ತುಂಬಿದ ಬಸುರಿಯ ಮೈಬಣ್ಣ ಕಪ್ಪು ತಿರುಗಿದರೆ ಗಂಡು, ಬಿಳುಪು ತಿರುಗಿದರೆ ಹೆಣ್ಣು. ಪಾಪು ಕಪ್ಪಗೆ ಆಗಿದಾಳೆ. ಹ್ಯಾಗಾದರೂ ಆಗಲಿ, ಇನ್ನೂ ಒಂದು ಪರೀಕ್ಷೆ. ಮಗುವಿನ ತಲೆ ಬಲಗಡೆಯಲ್ಲಿ ಕಾಣುತ್ತಿದ್ದರೆ ಗಂಡು, ಎಡಗಡೆಯಲ್ಲಿ ಕಾಣುತ್ತಿದ್ದರೆ ಹೆಣ್ಣು. ಪಾಪುವಿನ ಹೊಟ್ಟೆಯನ್ನು ನಾನೇ ಮುಟ್ಟಿ ನೋಡಿದೆ. ಬಲಗಡೆಯಲ್ಲಿಯೇ ತಲೆ ಕಾಣುತ್ತಿದೆ. ಮೊದಲನೆಯ ತಿಂಗಳುಗಳಲ್ಲಿ ತುಂಬ ವಾಂತಿಯಾದರೆ ಗಂಡಂತೆ. ಏನೂ ಆಗದೆ ಇದ್ದರೆ ಹೆಣ್ಣಂತೆ. ಇದು ನಿಜವೋ ಸುಳ್ಳೋ ಗೊತ್ತಿಲ್ಲ. ಆದರೂ ಪಾಪೂಗೆ ತುಂಬ ವಾಂತಿಯಾಯಿತಂತೆ. ಇದೆಲ್ಲ ನೋಡಿದರೆ ಗಂಡು ಅನ್ನುವುದು ಗ್ಯಾರಂಟಿ. ಗಂಡೇ ಆಗಬೇಕು. ಧರ್ಮಸ್ಥಳದ ಮಂಜುನಾಥನಿಗೆ ಹರಕೆ ಮಾಡಿಕೊತ್ತೀನಿ ಗಂಡಾದರೆ ಅವನ ಹೆಸರೇ ಮಗೂಗೆ ಇಡ್ತೀನಿ.

ಪಾಪುವಿನ ಹೊಟ್ಟೆ ಈಗ ತುಂಬಿ ಹೋಗಿದೆ. ಅವಳು ನಡೆಯುವಾಗ ಆಯಾಸಪಟ್ಟುಕೊತ್ತಾಳೆ. ನನಗಾಗಿ ಪಾಪ ಅವಳು ಮತ್ತೆ ಬಸುರಿಯಾದಳು. ನನಗೆ ಕೊಡುವ ಮಗುವನ್ನು ಹೊಟ್ಟೆಯಲ್ಲಿ ಇಟ್ಟುಕೊಂಡು ಹೊತ್ತು ಹೆಣಗುತ್ತಿದ್ದಾಳೆ. ಅವಳ ಋಣಾನ ಅಕ್ಕನಾದರೂ ನಾನು ಹ್ಯಾಗೆ ತಾನೆ ತೀರಿಸೋಕ್ಕೆ ಆಗುತ್ತೆ. ಅವಳನ್ನು ನೋಡುತ್ತಿದ್ದರೆ ನನ್ನ ಹೊಟ್ಟೆಯೇ ಭಾರವಾಗಿರುವ ಹಾಗೆ ಆಗುತ್ತೆ. ನಡೆಯುವಾಗ ನನಗೂ ಆಯಾಸ ಕಾಣುತ್ತೆ. ನಾನೂ ಕಾಲು ಎಳೆದು ಹಾಕ್ತೀನಿ. "ಅಕ್ಕ ನೀನ್ಯಾಕೆ ಹೀಗೆ ಬಳಲಿಕೊಂಡು ನಡೀತೀಯ?", ಅಂತ ಅವಳು ನಿನ್ನೆದಿನ ಕೇಳಿದಳು. ಅದನ್ನ

ಅವಳಿಗೆ ಹ್ಯಾಗೆ ಹೇಳಲಿ? ಹೇಳೋಕೆ ನನಗೇ ನಾಚಿಕೆಯಾಗುತ್ತೆ: ನನ್ನ ಹೊಟ್ಟೇಲೇ ಮಗು ಹುಟ್ಟಿ ಬೆಳೀತಿದೆ ಅನ್ನೋ ಹಾಗೆ ಆಗ್ತಾ ಇದೆ.

ಇವರು ಪಾಪೂ ಕೈಲಿ ಆಗಾಗ್ಗೆ ಮಾತಾಡ್ತಾರೆ. ಒಂದೊಂದು ಸಲ ಅವಳ ಆರೋಗ್ಯ ವಿಚಾರಿಸ್ತಾರೆ. ಅಷ್ಟೆ ಅದಕ್ಕಿಂತ ಹೆಚ್ಚಿಗೆ ಯಾವ ಅಕರಾಸ್ಥೆಯೂ ಇಲ್ಲ ಅನಿಸುತ್ತೆ. ಅವಳ ಹೊಟ್ಟೇಲಿರೋ ಮಗು ನಮ್ಮದು ಅನ್ನೋ ಭಾವನೆ, ಸಂತೋಷ ಇದ್ದಹಾಗೆ ಕಾಣುಲ್ಲ. ಇದೆಲ್ಲ ಏನು ಬರೀ ನನ್ನ ಸಂತೋಷವೋ, ಇವರಿಗೆ ಇದ್ಯಾವುದೂ ಬ್ಯಾಡವೋ ಅನಿಸುತ್ತೆ. ಆದರೆ ಒಂದು ಸಲ ಹಾರ್ಟ್ ಅಟ್ಯಾಕ್ ಆಗಿರೋದು. ಯಾವುದಕ್ಕೂ ಹೆಚ್ಚು ಸಂತೋಷಾನೂ ಪಡಬಾರದು, ದುಃಖಾನೂ ಪಡಬಾರದು. ಸ್ವಲ್ಪವೂ ಅಂಟದೆ ಇರಬೇಕು ಅಂತ ಡಾಕ್ಟರು ಹೇಳಿದಾರಲ್ಲ. ಅದಕ್ಕೋಸ್ಕರ ಹೀಗಿದ್ದಾರೆ ಅಂತ ನನ್ನ ಅಂದಾಜು. ಹೀಗೆಯೇ ಇರಲಿ. ಪಾಪೂನ ಹೊಟ್ಟೇಲಿರೋ ಮಗೂನ ವಿಷಯದಲ್ಲಿ ಇವರಿಗೆ ಒಳಗಡೆಯೇ ಸಂತೋಷ ಇದ್ದೇ ಇದೆ. ನನಗೆ ಇರುವಾಗ ಇವರಿಗೆ ಇಲ್ಲದೆ ಇದ್ದೀತೆ?

೨

ಹೆರಿಗೆಯ ನೋವು ಶುರುವಾಯಿತು. ಒಂಬತ್ತು ತಿಂಗಳು ಪೂರ್ತಿ ತುಂಬುವ ಮೊದಲೇ ನೋವು ಬಂದಿದೆ. ತಕ್ಷಣ ಆಸ್ಪತ್ರೆಗೆ ಕರೆದುಕೊಂಡು ಹೋಗಬೇಕು. ಇವರು ಮನೆಯಲ್ಲಿಲ್ಲ. ಆದರೆ ಕಾರು ತೆಗೆದುಕೊಂಡು ಹೋಗಿಲ್ಲ. ಸ್ನೇಹಿತರೊಬ್ಬರ ಜೊತೆ ಅವರ ಕಾರಿನಲ್ಲಿಯೇ ಹೋಗಿದಾರೆ. ಪಾಪುವನ್ನು ಕೂರಿಸಿ ಅವಳನ್ನು ಹಿಡಿದುಕೊಂಡು ನಾನೂ ಜೊತೆಯಲ್ಲಿ ಕೂತು ಆಸ್ಪತ್ರೆಗೆ ಹೊರಟೆ. ಅವಳ ನೋವು ಹೇಳತೀರದು. ಯಾತನೆಯಿಂದ ಅವಳು ಮುಖ ಹಿಂಡಿಕೊಂಡರೆ ನನಗೂ ಮುಖ ಹಿಂಡಿಕೊಳ್ಳುವ ಹಾಗೆ ಆಗುತ್ತಿತ್ತು. ಇದು ನಾನು ಅನುಭವಿಸಬೇಕಾಗಿದ್ದ ನೋವು. ನನಗಾಗಿ ನನ್ನ ತಂಗಿ ಅನುಭವಿಸುತ್ತಿದ್ದಾಳೆ. ನನಗೆ ನಿಜವಾಗಿಯೂ ಹೊಟ್ಟೆಯಲ್ಲಿ ನೋವಾಗುತ್ತಿದೆ. ಹೊಟ್ಟೆ ಶೂಲೆ ಬಂದಾಗ ಆಗುವುದಕ್ಕಿಂತ ಪ್ರಚಂಡವಾಗಿ ನೋವು ಕಾಣಿಸುತ್ತಿದೆ. ಇದ್ದಕ್ಕಿದ್ದ ಹಾಗೆ ನನಗ್ಯಾಕೆ ಹೀಗಾಯಿತು? ಪಾಪುವಿನ ನಿಗ ನೋಡಿಕೋಬೇಕಾದೋಳು ನಾನು. ನಾನೇ ಹೀಗೆ ಇದೇ ಸಮಯದಲ್ಲಿ ಹೊಟ್ಟೆ ನೋವು ಬಂದು ಮಲಗಿಬಿಟ್ಟರೆ ಅವಳನ್ನು ನೋಡಿಕೊಳ್ಳೋರು ಯಾರು? ಇಂಥ ಹೊಟ್ಟೆ ನೋವು ನನಗೆ ಎಲ್ಲೋ ಹತ್ತು ಹದಿನೈದು ವರ್ಷದ ಹಿಂದೆ ಬಂದಿತ್ತು. ಮದರಾಸಿನಿಂದ ಬರುವಾಗ ದಾರಿಯಲ್ಲಿ ಸಿಕ್ಕಿದ ಆಲೂಗಡ್ಡೆ ವಡೆ ತಿಂದು ಅರಗದೆ ಹಾಗೆ ಆಗಿತ್ತು. ಆದರೆ ಈಗ ನನ್ನ ಆಹಾರದಲ್ಲಿ ಯಾವ ವ್ಯತ್ಯಾಸವೂ ಆಗಿಲ್ಲ. ಆದರೂ ಇಂಥಾನೋವು ಯಾಕೆ ಬಂದಿದೆ? ಆಸ್ಪತ್ರೆ ಮುಟ್ಟಿದ ತಕ್ಷಣ ಡಾಕ್ಟರಿಗೆ ಹೇಳಬೇಕು

ಡ್ರೈವರ್ ಬೇಗ ಕಾರು ನಡೆಸುತ್ತಿದ್ದಾನೆ. ತನಗೆ ಆಗುತ್ತಿರುವ ನೋವಿನಲ್ಲೂ ಮಧ್ಯೆ ಸಮಾಧಾನ ತಂದುಕೊಂಡು ಪಾಪು ಮೆಲ್ಲಗೆ ಹೇಳಿದಳು: "ಅಕ್ಕ, ನೋಡು, ಒಂಬತ್ತು ತಿಂಗಳು ಇನ್ನೂ ಪೂರ್ತಿ ಕಳೆದಿಲ್ಲ. ಈಗಲೇ ಹೆರಿಗೆಯಾಗುತ್ತೆ. ಅಂದರೆ ಗಂಡುಮಗುವೇ ಅಂತಕಾಣುತ್ತೆ."

ಹೌದು ಗಂಡು ಮಗುವೇ. ಹಾಗೆಯೇ ಆಗಲಿ. ದೇವರೇ ಗಂಡು ಮಗುವೇ ಆಗಲಿ. ಪಾಪುವಿನ ನಾಲಿಗೆಯಲ್ಲಿ ನುಡಿದದ್ದು ಯಾವತ್ತು ನಿಜವೇ ಆಗುತ್ತೆ. ಪಾಪು ಮತ್ತೆ ಅಂದಳು: "ಗಂಡು ಮಗುವೇ ಆದರೆ ಹೆರಿಗೆ ಬೇಗ ಆಗುತ್ತೆ. ವಿಜಿ, ಕುಮಾರ ಇಬ್ಬರು ಹುಟ್ಟಿದಾಗಲೂ ಹಾಗೆಯೇ ಆಗಲಿಲ್ಲವೆ? ಲತಾ ಹುಟ್ಟಿದಾಗಲೇ ತುಂಬ ಹೊತ್ತು ನೋವು ತಿನ್ನಬೇಕಾಯ್ತು"

"ಹೌದು ಪಾಪು, ಈ ಸಲ ಬೇಗ ಹೆರಿಗೆಯಾಗುತ್ತೆ. ನಿನ್ನ ಮಾತು ನಿಜ" ನಾನು ಅಂದೆ.

"ಅದ್ಹ್ಯಾಗೆ ಹೇಳ್ತಿಯಾ?" ಅವಳು ಕೇಳಿದಳು.

"ನೀನೇ ಅಂದೆಯಲ್ಲ, ಒಂಬತ್ತು ತುಂಬೂ ಮೊದಲೇ ಆದರೆ ಗಂಡು ಅಂತ."

ಅವಳು ಸುಮ್ಮನಾದಳು. ಈಗ ನನ ಹೊಟ್ಟೆಯ ನೋವು ಸ್ವಲ್ಪ ಕಡಿಮೆಯಾದ ಹಾಗೆ

ಆಗಿದೆ ಪೂರ್ತಿ ಗುಣವಾಗಿಲ್ಲ. ಆದರೆ ಸಹಿಸುವ ಮಟ್ಟದಲ್ಲಿದೆ. ಪಾಪುವೂ ಸ್ವಲ್ಪ ಗೆಲುವಾಗಿದ್ದಾಳೆ. "ಈಗ ನೋವು ಸ್ವಲ್ಪ ಕಡಿಮೆಯಾಗಿದೆ—" ಅಂತ ಅವಳೇ ಹೇಳಿದಳು.

ಆಸ್ಪತ್ರೆಗೆ ಹೋದ ತಕ್ಷಣ ಅವಳನ್ನು ಸೇರಿಸಿಕೊಂಡರು. ನಾನು ಆಸ್ಪತ್ರೆಯಿಂದಲೇ ಡಾಕ್ಟರ್ ನಾಯ್ಡು ಅವರಿಗೆ ಫೋನು ಮಾಡಿದೆ. ಪಾಪುವನ್ನು ಸ್ಪೆಶಲ್ ವಾರ್ಡಿಗೆ ಸೇರಿಸಿ ಚೆನ್ನಾಗಿ ನೋಡಿಕೊಳ್ಳಬೇಕೆಂದು ಅವರು ಫೋನಿನಲ್ಲಿಯೇ ಆರ್.ಎಂ.ಓ.ಗೆ ಹೇಳಿದರು. ನನಗೂ ಹೊಟ್ಟೆಯ ನೋವು ಹೆಚ್ಚಾಗುತ್ತಿತ್ತು. ಪಾಪು ವಿಲಿವಿಲಿ ಒದ್ದಾಡುತ್ತಿದ್ದಳು. "ಅಕ್ಕ, ಈ ನೋವು ಯಾರು ಸಹಿಸ್ತಾರೆ?" ಅಂತ ನನ್ನ ಕೈಹಿಡಿದು ಮುಖ ಹಿಂಡಿಕೊಂಡು ಗೋಳು ಗುಟ್ಟಿದಳು. ನನಗೋಸ್ಕರ ಅವಳು ಸಹಿಸುತ್ತಿದ್ದಾಳೆ. ನನ್ನ ಬೆನ್ನಿನಲ್ಲಿ ಬಿದ್ದ ತಂಗಿ.

"ನೀನೇ ಹೇಳಿದೆಯಲ್ಲ, ಗಂಡು ಮಗೂಗೆ ಬೇಗ ಹೆರಿಗೆಯಾಗುತ್ತೆ ಅಂತ. ಸ್ವಲ್ಪ ಹ್ಯಾಗಾದರೂ ಸಹಿಸಿಕೋ ಅಮ್ಮ" ನಾನು ಸಮಾಧಾನ ಹೇಳಿದೆ.

ಸ್ವಲ್ಪ ಹೊತ್ತಿಗೆ ಅವಳನ್ನು ಲೇಬರ್ ವಾರ್ಡಿಗೆ ಕರೆದುಕೊಂಡು ಹೋದರು. ಅಂದರೆ ಬೇಗ ಹೆರಿಗೆಯಾಗುತ್ತೆ. ಪಾಪು ಹೇಳಿದ ಹಾಗೆ ಗಂಡು ಮಗುವೇ ಆಗುತ್ತೆ. ಎಲ್ಲ ಸೂಚನೆಗಳೂ ಗಂಡು ಮಗು ಆಗುವುದನ್ನೇ ಹೇಳುತ್ತಿವೆ. ಅವಳ ಮೈ ಕಪ್ಪಗಾಗಿತ್ತು. ತಲೆ ಬಲಭಾಗದ ಹೊಟ್ಟೆಯಲ್ಲಿತ್ತು. ಒಂಬತ್ತು ತುಂಬುವ ಮೊದಲೇ ಹೆರಿಗೆ. ಹೆಚ್ಚು ಹೊತ್ತು ಹೆಣಗದೆ ಬೇಗ ಲೇಬರ್ ವಾರ್ಡಿಗೆ ಹೋಗಿದ್ದಾಳೆ. ಖಂಡಿತ ಗಂಡು ಮಗುವೇ. ಅವಳನ್ನು ಕರೆದುಕೊಂಡು ಹೋದ ಮೇಲೆ ನನಗೂ ಹೊಟ್ಟೆಯ ನೋವು ಹೆಚ್ಚಾಗಿದೆ ಹಾ. ತಡೆಯಲಾರದಷ್ಟು ಉಗ್ರಯಾತನೆ. ತಕ್ಷಣ ಒಬ್ಬ ನರ್ಸಿಗೆ ಹೇಳಿದೆ. ಅವಳು ಡ್ಯೂಟಿ ಡಾಕ್ಟರಿಗೆ ಹೇಳಿದಳು. ಆ ಮೇಲೆ ಡಾಕ್ಟರು ಹೇಳಿದ ಹಾಗೆ ಒಂದು ಡೋಸ್ ಔಷಧಿ ಕೊಟ್ಟಳು. ಕಣ್ಣು ಮುಚ್ಚಿಕೊಂಡು ಕುಡಿದೆ. ಆದರೂ, ನೋವು ಕಡಿಮೆಯಾಗಲಿಲ್ಲ.

"ಅಮ್ಮ, ಔಷಧಿ ಕುಡಿದ ತಕ್ಷಣ ಯಾವುದೂ ಗುಣವಾಗುಲ್ಲ. ಸ್ವಲ್ಪ ಹೊತ್ತು ಕಳೀಬೇಕು. ನೀವು ಈ ಮಂಚದ ಮೇಲೆ ಅಂಗಾತವಾಗಿ ಮಲಕೊಳ್ಳಿ. ನಿಧಾನವಾಗಿ ನೋವು ನಿಲ್ಲುತ್ತೆ"- ನರ್ಸ್ ಹೇಳಿದಳು.

ನಾನು ಮಂಚದ ಮೇಲೆ ಮಲಗಿದೆ. ಆದರೂ ನೋವು ಕಡಿಮೆಯಾಗಲಿಲ್ಲ. ಅದೆಂತಹ ನೋವು! ಹಿಂದೆಂದೂ ನಾನು ಅನುಭವಿಸಿರಲಿಲ್ಲ. ಈ ನೋವಿನಲ್ಲಿ ನಾನು ಉಳಿಯುವುದಿಲ್ಲ. ಡಾಕ್ಟರನ್ನು ಕರೆಯುವ ಹಾಗೆ ನರ್ಸಿಗೆ ಹೇಳಿದೆ. ಡಾಕ್ಟರು ಬಂದರು. ನೋವು ಎಲ್ಲಿ ಹುಟ್ಟುತ್ತೆ, ಹೇಗೆ ಬಳಸುತ್ತೆ, ಎಲ್ಲಿ ನುಗ್ಗಿ ನುಸಿಯುತ್ತೆ ಎಂಬುದನ್ನೆಲ್ಲ ಕೇಳಿದ ಡಾಕ್ಟರು ಹೇಳಿದರು: "ಅಪೆಂಡಿಸೈಟಿಸ್ ಅಂತ ನನಗೆ ಅನುಮಾನ ಬಂತು. ನೀವು ಹೇಳೋದು ಕೇಳಿದರೆ ಅದಲ್ಲ."

"ಹೆರಿಗೆಯ ನೋವಿನ ಥರ ಅನಿಸುತ್ತೆ ಇವರ ಹೊಟ್ಟೆನೋವು—" ನರ್ಸ್ ಹೇಳಿದಳು.

"ಒಂದು ಇಂಜೆಕ್ಷನ್ ಕೊಡ್ತೀನಿ. ಹತ್ತು ನಿಮಿಷದಲ್ಲಿ ನಿಮಗೆ ನಿದ್ರೆ ಬರುತ್ತೆ. ಆ ಮೇಲೆ ನೋವು ತಾನೇ ಸಬ್‌ಸೈಡ್ ಆಗುತ್ತೆ. ಅಜೀರ್ಣಕ್ಕೆ ಬಂದಿರಬಹುದು-" ಎಂದು ಡಾಕ್ಟರು ಇಂಜೆಕ್ಷನ್ ಕೊಟ್ಟರು.

ಐದು ನಿಮಿಷದಲ್ಲಿ ನನಗೆ ಮಂಪರು ಹುಟ್ಟಿತು. ಕಣ್ಣು ಎಳೆದುಕೊಂಡು ಹೋಗಿ ಕೈಕಾಲು ಮೈಗಳು ಸೋತು ಬೀಳುತ್ತಿದ್ದವು. ಉಬ್ಬರಿಸಿಕೊಂಡ ಹೊಟ್ಟೆ ಸಮಸ್ಥಿತಿಗೆ ಬರುವಂತೆ ಭಾಸವಾಗುತ್ತಿತ್ತು; ನೋವು ಕಡಿಮೆಯಾಗುವಂತೆ ಕಾಣುತ್ತಿತ್ತು. ಬಸವಳಿದು ಹೋಗುತ್ತಿದ್ದೆ. ಅಷ್ಟರಲ್ಲಿ ಲೇಬರ್ ವಾರ್ಡಿನ ನರ್ಸ್ ಬಂದು

"ಸುಲಭವಾಗಿ ಹೆರಿಗೆಯಾಯಿತು. ಗಂಡು ಮಗು" ಎಂದಳು.

"ಹೌದಾ?" -ಎಂದು ನಾನು ಉತ್ಸುಕಳಾಗಿ ಕೇಳುತ್ತಿದ್ದೆ.

"ತುಂಬ ಹೊಟ್ಟೆನೋವು. ಡಾಕ್ಟರ್ ಟ್ರಿಕ್ ಕೊಟ್ಟಿದ್ದಾರೆ. ಅವರನ್ನು ಡಿಸ್ಟರ್ಬ್ ಮಾಡಬೇಡ" - ಎಂದು ನನ್ನ ಹತ್ತಿರವಿದ್ದ ನರ್ಸ್ ಅವಳಿಗೆ ಹೇಳಿದಳು. ಮೇಲೆ ಎದ್ದು ಮಗು

ವನ್ನು ನೋಡಬೇಕೆಂಬ ಆಶೆಯೇನೋ ಹುಟ್ಟಿತು. ಆದರೆ ಪ್ರಜ್ಞೆ ನನ್ನ ಸ್ವಾಧೀನದಲ್ಲಿಯೇ ಇರಲಿಲ್ಲ. ಜ್ಞಾನ ತಪ್ಪಿದಂತೆ ಆಗಿ ಪೂರ್ತಿ ನಿದ್ರೆ ಬಂದುಬಿಟ್ಟಿತು.

*

ಪಾಪುವಿಗೆ ಮೂರನೆಯ ದಿನ ಡಾಕ್ಟರ್ ನಾಯ್ಡು ಅವರೇ ಆಪರೇಶನ್ ಮಾಡಿದರು. ಆ ದಿನದ ತನಕ ಅವಳ ಎದೆಯಲ್ಲಿ ಹಾಲು ಬಂದಿರಲಿಲ್ಲ. ಆ ಮೇಲೆ ಏಳೆಂಟು ದಿನ ಬರಲಿಲ್ಲ. ಅದುವರೆಗೂ ಮಗುವಿಗೆ ಹಾಕು ಹಾಲೇ. ಆಸ್ಪತ್ರೆಯಲ್ಲಿ ಇದ್ದುಕೊಂಡು ನಾನೇ ಅದಕ್ಕೆ ಹಾಲು ಹಾಕುತ್ತಿದ್ದೆ. ಮಗು ತುಂಬ ಚೆನ್ನಾಗಿತ್ತು. ಆಪರೇಶನ್ ಆದ ನಾಲ್ಕನೆಯ ದಿನ ಪಾಪು ಕಣ್ಣಿನಲ್ಲಿ ನೀರು ತಂದುಕೊಂಡು "ಇನ್ನೂ ಹಾಲು ಬರಲೇ ಇಲ್ಲ. ಇದರ ಅದೃಷ್ಟ ಎಂಥದೋ" —ಎಂದಳು. ಡ್ಯೂಟಿ ನರ್ಸ್ "ಆಪರೇಶನ್ ಆಗಿ ಆಹಾರ ಮಿತವಾಗಿರುವುದರಿಂದ ಹಾಗಾಗಿದೆ. ಇನ್ನು ಒಂದೆರಡು ದಿನದಲ್ಲಿ ತಾನಾಗಿಯೇ ಬರುತ್ತೆ. ಸುಮ್ಮನಿರಿ ಅಮ್ಮ"- ಎಂದು ಸಮಾಧಾನ ಹೇಳಿದಳು.

ಎದೆಯಲ್ಲಿ ಹಾಲುಬಂದು, ಮೊದಲನೆಯ ಸಲದ್ದನ್ನು ಬ್ರೆಸ್ಟ್‌ಪಂಪಿನಿಂದ ನರ್ಸು ಕರೆದು ಹಾಕಿದ ಮೇಲೆ ಎರಡನೆಯ ಸಲದ್ದಕ್ಕೆ ಮಗುವನ್ನು ಅವಳ ಪಕ್ಕದಲ್ಲಿ ನಾನೇ ಮಲಗಿಸಿ ಬಾಯಿಯನ್ನು ಕೊಡಿಸಿದೆ. ತನ್ನ ಅಮ್ಮನ ಎದೆಯ ಹಾಲನ್ನು ಹೀರಿಕೊಳ್ಳುವುದನ್ನು ಮಕ್ಕಳಿಗೆ ಯಾರುತಾನೇ ಹೇಳಿಕೊಡಬೇಕು? ಲೊಚಲೊಚನೆ ಹೀರಿ ಕುಡಿಯಿತು. ಪಾಪು ತನ್ನ ಬಲಗೈಯಿಂದ ಅದನ್ನು ತಬ್ಬಿಕೊಂಡಳು. ಅವಳ ಕಣ್ಣುಗಳು ಸೂಕ್ಷ್ಮವಾಗಿ ಹನಿಗೂಡಿದುವು.

ಹೇಳಿದಳು: "ಎಲ್ಲಿ ಹಾಲೇ ಬರುಲ್ಲವೋ ಇದರ ದುರಾದೃಷ್ಟಕ್ಕೆ ಅಂತ ನಂಗೆ ತುಂಬ ದುಃಖವಾಗಿತ್ತು. ಸದ್ಯ, ದೇವರು ಯಾವ ತೊಂದರೇನೂ ಕೊಡಲಿಲ್ಲ."

ಅವಳಿಗೆ ತನ್ನ ಮಕ್ಕಳ ಮೇಲೆ ಯಾವಾಗಲೂ ಪ್ರೀತಿ. ನಮ್ಮಮ್ಮನಿಗೂ ನಮ್ಮ ಮೇಲೆ ಅಷ್ಟೇ ಪ್ರೀತಿಯಿತ್ತು. ನಮ್ಮ ಅಮ್ಮನಂತೆಯೇ ಪಾಪುವಿನದೂ ತುಂಬ ಅಂತಃಕರಣದ ಸ್ವಭಾವ. ಈ ಮಗುವಿಗೆ ನಾನೇ ಎದೆಹಾಲು ಕೊಡಬೇಕಾಗಿತ್ತು. ಆದರೆ ನನ್ನ ಬದಲು ನನ್ನ ತಂಗಿ ಕೊಡುತ್ತಿದ್ದಾಳೆ. ಮಗುವಿಗೆ ಎದೆಹಾಲು ಸಿಕ್ಕುವುದು ಮುಖ್ಯ. ಅದೂ ನನ್ನ ತಂಗಿ. ಮಗುವಿನ ಚಿಕ್ಕತಾಯಿಯೇ ಕುಡಿಸಿದರೆ ಒಳ್ಳೆಯದೇ. ಅದು ಅವಳ ತೋಳಸುತ್ತಿನಲ್ಲಿ ಮಲಗಿ ಕಣ್ಣು ಮುಚ್ಚಿ ಹಾಲನ್ನು ಹೀರಿಕೊಳ್ಳುತ್ತಿದ್ದೆ.

ಎರಡೇ ದಿನದಲ್ಲಿ ಎದೆಯಲ್ಲಿ ತುಂಬ ಹಾಲು





## ಭೀತಿಗೊಂಡ ಚಂದ್ರ

ಶಶಿಯು ಮೈಸುತ್ತಲೂ ತಿರುಗಿದರು-
-ಇವರು.
ಚಂದಿರನ ಹಣೆಗೆ ಮೂಡಿತು ಭರ್ತಿ-
-ಚಿವರು.
ಬೆನ್ನೇರಿದರೆ ಕೆಟ್ಟ ಮಾನವನ ಜಾತಿ.
ತನ್ನ ಗತಿ ಏನಾಗಬಹುದೆಂಬ ಭೀತಿ.

—ದಿನಕರ ದೇಸಾಯಿ

ಕೂಡಿತು. ಈಗ ಮಗುವಿಗೆ ಅದೇ ಸಾಕು. ಮೇಲು ಹಾಲು ಬೇಡ. ಈ ಮೊದಲು ನನ್ನ ತೊಡೆಯ ಮೇಲೆ ಮಲಗಿಸಿಕೊಂಡು ನಾನೇ ಕುಡಿಸುತ್ತಿದ್ದೆ. ಈಗ ಅದಕ್ಕೆ ನಾನೇ ಅಷ್ಟು ಮಾಡುವುದೂ ತಪ್ಪಿಹೋಯಿತು. ನನಗೆ ಒಂದು ತರಹ ಕಸಿವಿಸಿಯಾಗುತ್ತಿತ್ತು. ಆದರೆ ಮಕ್ಕ-ಳಿಗೆ ತಾಯಿಯ ಹಾಲು ಒಳ್ಳೆಯದು. ತಾಯಿಯ ಹಾಲು ಸಾಲದಾಗ ಅಥವಾ ತಾಯಿ ಸತ್ತ ತಬ್ಬಲಿ ಮಕ್ಕಳಿಗೆ ಮಾತ್ರ ಮೇಲುಹಾಲು. ನನ್ನ ತಂಗಿಯ ಎದೆಯಲ್ಲಿ ಅಷ್ಟೊಂದು ಧಾರಾಳ ವಾಗಿ ಹಾಲು ಕೊಡುವಾಗ ಅದಕ್ಕೆ ಇನ್ನು ಮೇಲುಹಾಲು ಯಾಕೆ ಬೇಕು ? ನನ್ನ ಪರವಾಗಿ ಅವಳೇ ಕುಡಿಸುತ್ತಿದ್ದಾಳೆ.

ಆಸ್ಪತ್ರೆಯಲ್ಲಿದ್ದಾಗ ಅವಳ ಯಜಮಾನರು ಉಳಿದ ಮೂರು ಜನ ಮಕ್ಕಳೊಡನೆ ಬಂದು ನೋಡಿಕೊಂಡು ಹೋಗಿದ್ದರು. ಸ್ಕೂಲು ಹೋಗುತ್ತದೆಂದು ಮಕ್ಕಳೆಲ್ಲ ಚಿಕ್ಕಮಗಳೂರಿನಲ್ಲಿಯೇ ಇದ್ದರು. ಪಾಪುವಿನ ಅತ್ತೆಯ ಅಕ್ಕ, ಒಬ್ಬ ಮುದಿ ಹೆಂಗಸು ಈಗ ಅಲ್ಲಿಗೆ ಬಂದು ಮನೆ ನೋಡಿಕೊಳ್ಳುತ್ತಿದಾರೆ.

ನಾನು ಅವಳ ಜೊತೆ ಪೂರ್ತಿಯಾಗಿ ಆಸ್ಪತ್ರೆಯಲ್ಲೇ ಇದ್ದೆ. ಆಗ ಇವರು ಮೂರು ನಾಲು ದಿನಕ್ಕೆ ಒಂದು ಸಲ ಬಂದು ನಮ್ಮನ್ನು ನೋಡಿಕೊಂಡು ಹೋಗುತ್ತಿದ್ದರು. ದಿನಾ ಯಾಕೆ ಬರಬಾರದು ? ದಿನಕ್ಕೆ ಎರಡು ಸಲವಾದರೂ ಯಾಕೆ ಬರಬಾರದು ?— ಎಂದು ನಾನು ಮನಸ್ಸಿನಲ್ಲಿಯೇ ಸಿಡಿಮಿಡಿಗುಟ್ಟುತ್ತಿದ್ದೆ. ನಾನೇ ಬಾಣಂತಿಯಾಗಿದ್ದು ಈ ಮಗು ನಮ್ಮ ಹೊಟ್ಟೆಯಲ್ಲಿ ಹುಟ್ಟಿದ್ದರೆ ದಿನಕ್ಕೆ ಎರಡು ಸಲವಾದರೂ ಬರುತ್ತಿರಲಿಲ್ಲವೆ ? ಪಾಪುವಿನ ಹೊಟ್ಟೆಯಲ್ಲಿ ಹುಟ್ಟಿದರೆ ಏನಾಯ್ತು ? ಅವಳೇನು ಹೊರಗಿನವಳೇ ? ಹೆಂಡತಿಯ ಸ್ವಂತ ತಂಗಿ, ಅಕ್ಕನ ಮಗುವನ್ನು ತಾನು ಹೆತ್ತಿದ್ದಾಳೆ ಇದು ನಮ್ಮದೇ ಮಗು ಅನ್ನುವ ಭಾವನೆ, ಆಶೆ, ಅಕ-ರಾಸ್ಥೆ ಇವರಿಗೆ ಸಾಕಷ್ಟು ಇಲ್ಲವೋ ಏನೋ! ಇಲ್ಲಿಗ ಬಂದಾಗ ಮಗುವಿನ ಮುಂದೆ ಚಿಟಕಿ ಹಾಕಿ ಮಾತನಾಡಿಸುತ್ತಿದ್ದರು. ಆದರೆ ಎತ್ತಿಕೊಂಡು ತೊಡೆಯ ಮೇಲೆ ಮಲಗಿಸಿಕೊಳ್ಳುತ್ತಿರಲಿಲ್ಲ. ಯಾಕೆ ಈ ಉದಾಸೀನ? ಗಂಡಸರೇ ಹಾಗೆ ಅಂತ ಕಾಣುತ್ತೆ. ಪ್ರೀತಿಯ ಭಾವನೆಯೇ ಕಡಿಮೆ. ಆದರೆ ಪಾಪುವಿನ ಗಂಡ ಮಾತ್ರ ಎತ್ತಿ ತೊಡೆಯ ಮೇಲೆ ಮಲಗಿಸಿಕೊಂಡರು. ಬಾಗಿ ಕೆನ್ನೆಗೆ ಮಿದುವಾಗಿ ಮುತ್ತುಕೊಟ್ಟರು. ಈ ಪ್ರೀತಿ ಇವರಿಗೆ ಯಾಕೆ ಇರಬಾರದು ? ಇದು ನಮ್ಮ ಮಗುವಲ್ಲವೆ ? ಅಥವಾ ಹಾರ್ಟ್ ಅಟ್ಯಾಕ್ ಆದ ಮೇಲೆ ಹೆಚ್ಚು ಪ್ರೀತಿ-ಪ್ರೇಮ, ಸುಖ-ದುಃಖ ಆಗಬಾರದು ಅಂತ ಹೀಗೆ ಎಚ್ಚ-ರಿಕೆಯಿಂದ ಇದಾರೆಯೋ !

*

ಬ್ಯಾಂಡೇಜು ಬಿಚ್ಚಿ "ಇನ್ನು ಯಾವ ಯೋಚನೆಯೂ ಇಲ್ಲ, ನೀವು ಮನೆಗೆ ಹೋಗಿ" ಅಂತ ಸರ್ಜನ್ ನಾಯ್ಡು ಅವರೇ ಹೇಳಿದ ಮೇಲೆ ನಾವು ಮನೆಗೆ ಬಂದೆವು. ಬಾಣಂತಿಗೆ ನೀರು ನೀಡಿ, ಮಗುವಿಗೆ ಎರೆಯುವುದು, ಮೊದಲಾಗಿ ಎಲ್ಲಾನೂ ನಾನೇ ವಹಿಸಿಕೊಂಡೆ. ಅಡಿಗೆಯ ರುಕ್ಕಮ್ಮ ಸಹಾಯಕ್ಕಿದ್ದರೂ ಈ ಕೆಲಸ ನನಗೆ ಅತ್ಯಂತ ಪ್ರಿಯವಾಗಿತ್ತು. ಮಗು ಅತ್ತಾಗ ಎತ್ತಿಕೊಂಡು ಸಮಾಧಾನ ಮಾಡುವುದು, ಅರ್ಧರಾತ್ರಿಯಲ್ಲಿ ಅದಕ್ಕೆ ಎಚ್ಚರವಾದರೆ ಆಡಿಸುವುದು, ಆಗಾಗ್ಗೆ ಬಟ್ಟೆ ಬದಲಾಯಿಸುವುದು ಮೊದಲಾಗಿ ಮಗುವಿನ ಎಲ್ಲ ಕೆಲಸವೂ ನನ್ನದೇ ಆಗಿತ್ತು. ಆರೋಗ್ಯವಾಗಿ ತುಂಬ ಚೆನ್ನಾಗಿ ಬೆಳೆಯುತ್ತಿತ್ತು. ಇನ್ನೂ ನಾಮಕರಣ ಮೊದಲಾಗಿ ಯಾವ ಶಾಸ್ತ್ರವೂ ಆಗಿರಲಿಲ್ಲ. ಮೊದಲು ಅವರು ನಾಮಕರಣಮಾಡಿ ನಂತರ ನಮಗೆ ದತ್ತು ಕೊಡುವುದೋ ಅಥವಾ ಮಗುವನ್ನು ನನ್ನ ಮಡಿಲಿಗೆ ಹಾಕಿ ನಾವೇ ಆ ಮೇಲೆ ನಾಮಕರಣ ಮಾಡಿಕೊಳ್ಳುವುದೋ ಎಂಬುದನ್ನು ತೀರ್ಮಾನಿಸಿರಲಿಲ್ಲ. ಇಂಥ ವಿಷಯವನ್ನು ಬಾಯಿಬಿಟ್ಟು ಮಾತನಾಡಿ ತೀರ್ಮಾನಿಸಿಬಿಟ್ಟರೆ ಚೆನ್ನ. ಆದರೆ ಮಾತನಾಡುವವರು ಯಾರು ? ಇವರು ತಾವಾಗಿಯೇ ಏನೂ ಆಡದೆ ಮೌನವಾಗಿದ್ದಾರೆ. ನಾನೇ ಆಡಲಿ ಅಂತ ಇವರ ಇಚ್ಛೆ ಇರಬಹುದು. ಆದರೆ ಇವರಿಗೆ ಸ್ವಲ್ಪವಾದರೂ ಉತ್ಸಾಹವಿರಬೇಡವೆ ?

ನಾಮಕರಣವಾಗಿರದಿದ್ದರೂ ನಾನು ಮಗು

ವನ್ನು ಮಂಜುನಾಥ ಅಂತಲೇ ಕರೆಯುತ್ತಿದ್ದೆ. ಅವನ ದಯದಿಂದ ತಾನೇ ಅದು ಗಂಡಾಗಿ ಹುಟ್ಟಿದುದು ?

೪

ಮಗುವಿಗೆ ಆರುತಿಂಗಳು ನಡೆಯುತ್ತಿದ್ದಾಗ ಒಂದು ದಿನ ಮದರಾಸಿನಿಂದ ರಾಜ ಬಂದ. ಈಗ ಅವನಿಗೆ ಇಪ್ಪತ್ತಮೂರುವರ್ಷ. ಅಥವಾ ಇಪ್ಪತ್ತಮೂರು ತುಂಬಿರಬಹುದು. ಒಳ್ಳೇ ಎತ್ತರಕ್ಕೆ ಚೆನ್ನಾಗಿ ಬೆಳೆದಿದಾನೆ. ಹದಿಮೂರು ವರ್ಷದ ಹಿಂದೆ ಮಾತು ಆಗಿದ್ದಂತೆ ದತ್ತು ಮಾಡಿಕೊಂಡಿದ್ದರೆ ಅವನು ಯಾವಾಗಲೂ ನಮ್ಮ ಜೊತೆಯೇ ಇರುತ್ತಿದ್ದ. ಮಾಡಿಕೊಳ್ಳ ಲಿಲ್ಲ. ಅದರಿಂದ ನನಗೇನೂ ದುಃಖವಿಲ್ಲ, ಈಗ ನಮ್ಮದೇ ಆದ ಮಗು ಆಯಿತೋ ಇಲ್ಲವೋ! ನನ್ನ ಪರವಾಗಿ ನನ್ನ ತಂಗಿ ಹೆತ್ತಿದ್ದಾಳೆ.

ದತ್ತುವಾಗದಿದ್ದರೂ ರಾಜ ಆಗಾಗ್ಗೆ ಇಲ್ಲಿಗೆ ಬರುತ್ತಿರುತ್ತಾನೆ. ಅವನೊಬ್ಬನೇ ಅಲ್ಲ, ಎಲ್ಲ ಹುಡುಗರೂ ಬರುತ್ತಿರುತ್ತಾರೆ. ರಾಜ ನನ್ನನ್ನು ತುಂಬ ಸಲಿಗೆಯಿಂದ ಮಾತಾಡಿಸುತ್ತಾನೆ. ಅವನ ಅಮ್ಮನ ಕೈಲಿ ಮಾಡುವ ಹಾಗೆ ನನ್ನ ಕೈಲೂ ಸದರವಾಗಿ ತಮಾಷೆಮಾಡುತ್ತಾನೆ. ಅವನ ದೊಡ್ಡಪ್ಪನ ಹತ್ತಿರವಂತೂ ಇನ್ನೂ ಎಳೆಯ ಹುಡುಗನ ಹಾಗೆ ಹುಡುಗಾಟವಾಡು ತ್ತಾನೆ. ಪಾಪುವನ್ನು ಅವನು ಮೊದಲಿನಿಂದ ಚಿಕ್ಕಮ್ಮ ಅಂತ ಕೂಗುತ್ತಿದ್ದ. ಈಗ ನೇರವಾಗಿ ಬಾಣಂತಿಯ ರೂಮಿಗೆ ಹೋಗಿ ಮಂಜುನಾಥನ ಎರಡು ಕಾಲುಗಳನ್ನೂ ಹಿಡಿದು ತಲೆಕೆಳಗಾಗಿ ಎತ್ತಿಹಿಡಿದುಬಿಟ್ಟ. ಹತ್ತಿರವೇ ಇದ್ದ ನನಗೆ ಉಸಿರುಕಟ್ಟಿ ಬಂದ ಹಾಗೆ ಆಯಿತು. "ದೊಡ್ಡಮ್ಮ, ಏನೂ ಹೆದರಿಕೋ ಬ್ಯಾಡಿ. ರಕ್ತ ಮಗುವಿನ ಮೆದುಳಿನಲ್ಲಿ ಚೆನ್ನಾಗಿ ಸಂಚಾರ ಮಾಡುತ್ತೆ. ದಿನಾ ಎರಡೆರಡು ನಿಮಿಷ ಹೀಗೆ ಮಾಡ್ತಾ ಇದ್ದರೆ ಮುಂದೆ ಮಕ್ಕಳು ತುಂಬ ಬುದ್ಧಿವಂತರಾಗ್ತಾರೆ"— ಎಂದ.

ಮಗುವಿನ ಮುಖ ಕೆಂಪಗಾಗಿಹೋಗಿತ್ತು. ತಡೆಯಲಾರದೆ ನಾನು ಅದನ್ನು ಹಾಗೆಯೇ ತೋಳುನೀಡಿ ಕರಕೊಂಡು ಬಿಟ್ಟೆ. "ಇನ್ನು ಮೇಲೆ ಹೀಗೆ ತಲೆಕೆಳಗು ಮಾಡಬ್ಯಾಡ"— ಅಂತ ಅವನಿಗೆ ಹೇಳಿದೆ.

ಈಗ ತಾನು ಬಂದ ವಿಷಯ ಅವನೇ ಹೇಳಿದ. ಅವನು ಕೆಮಿಕಲ್ ಎಂಜನೀರ್ ಆಗಿ ಕೆಲಸ ದಲ್ಲಿರುವ ಕಂಪನಿಯವರು ಅವನನ್ನು ಟ್ರೈನಿಂಗ್ ಗಾಗಿ ಜರ್ಮನಿಗೆ ಕಳಿಸುತ್ತಾರಂತೆ. ಇನ್ನು ಹದಿನೈದು ದಿನಕ್ಕೇ ಮದರಾಸಿನಿಂದ ಹೊರಡ ಬೇಕು. ಅದಕ್ಕೆ ಮೊದಲು ಎಂಟು ದಿನವಾದರೂ ನಮ್ಮ ಜೊತೆ ಇದ್ದು ಹೋಗಬೇಕು ಅಂತ ಬಂದಿದ್ದಾನೆ. ಇವರಿಗೆ ಅವನನ್ನು ಕಂಡರೆ ಈಗಲೂ ಎಲ್ಲಿಲ್ಲದ ವಾತ್ಸಲ್ಯ. ಅವನೂ ತನ್ನ ಅಪ್ಪನಿಗಿಂತ ದೊಡ್ಡಪ್ಪ ಅಂದರೆ ಹೆಚ್ಚು ಆಸೆ ಪಡುತ್ತಾನೆ. ದೊಡ್ಡಪ್ಪ ಮಕ್ಕಳು ವಾತ್ಸಲ್ಯ ಇಟ್ಟುಕೊಳ್ಳಲಿ, ನಾನೇನು ಬೇಡ ಅನ್ನುವುದಿಲ್ಲ.

ರಾಜ ಎಂಟುದಿನ ಇಲ್ಲಿ ಇದ್ದ. ಇವರು ದಿನಾ ಅವನ ಜೊತೆ ವಾಕಿಂಗ್ ಹೋಗುತ್ತಿದ್ದರು. ಪುರಾಣ ಶ್ರವಣಕ್ಕೂ ಅವನನ್ನೇ ಕರೆದುಕೊಂಡು ಹೋಗುತ್ತಿದ್ದರು. ಪಾಪು ಬಂದ ಮೇಲೆ ನಾನು ಪುರಾಣ ಕೇಳಲು ಹೋಗುವುದನ್ನು ಬಿಟ್ಟು ಬಿಟ್ಟೆ. ಡ್ರೈವರ್ ಬದಲು ದೊಡ್ಡಪ್ಪನ ಕಾರನ್ನು ಅವನೇ ಡ್ರೈವ್ ಮಾಡುತ್ತಿದ್ದ. ರಾತ್ರಿಯ ಹೊತ್ತು ಇವರು ಅವನನ್ನು ತಮ್ಮ ರೂಮಿ ನಲ್ಲಿಯೇ ಮಲಗಿಸಿಕೊಂಡಿರುತ್ತಿದ್ದರು ಜರ್ಮನಿ ಚಳಿದೇಶ, ಅಲ್ಲಿಗೆ ಹೋಗುವ ಇವನು ಬೆಚ್ಚಗೆ ಉಲನ್‌ಸೂಟುಗಳನ್ನು ಹೊಲಿಸಿಕೊಳ್ಳದೆ ಇರುತ್ತಾನೆಯೇ? ಆದರೂ ಇವರು ಎರಡು ಸೂಟು ಹೊಲಿಸಿಕೊಟ್ಟರು ಅವನು ಹೊರಡು ವಾಗ ಇವರು ಎದುರಿಗೇ ಇದ್ದರೂ ಮೊದಲು ನನಗೆ ನಮಸ್ಕಾರ ಮಾಡಿದ

"ಮೊದಲು ಅವರಿಗೆ ನಮಸ್ಕಾರಮಾಡು"— ನಾನಂದೆ.

"ಮಾತೃದೇವೋಭವ ಆದಮೇಲೆ ಪಿತೃ ದೇವೋಭವ. ಹಾಗಂತ ಅಣ್ಣ ಹೇಳ್ತಾನೇ ಇರ್ತಾನೆ. ಅದಕ್ಕೆ ನಿಮಗೆ ಮೊದಲು"— ಅಂತ ಶಾಸ್ತ್ರವನ್ನೇ ಹೇಳಿದ. ಇವರಿಗೆ ಮಾಡಿದ ಮೇಲೆ ಪಾಪುವಿಗೆ ನಮಸ್ಕರಿಸಿ ಮಗುವಿಗೆ ಮುತ್ತು ಕೊಟ್ಟು ಅದರ ಎರಡು ಕಾಲುಗಳನ್ನೂ ಹಿಡಿದು ತಲೆಕೆಳಗಾಗಿ ಎತ್ತಿ ಹಿಡಿದುಕೊಂಡ. "ರಾಜ,

ಹುಡುಗಾಟ ಮಾಡಬ್ಯಾಡ"— ಎಂದು ನಾನು ತಕ್ಷಣ ಮಗುವಿನ ಕುತ್ತಿಗೆ, ಬೆನ್ನಿಗೆ ಎರಡು ತೋಳನ್ನೂ ಕೊಟ್ಟು ಎತ್ತಿಕೊಂಡುಬಿಟ್ಟೆ. "ಅದರ ಮೈದುಳಿನ ಶಕ್ತಿ ಬೆಳೆಯಬ್ಯಾಡವೆ? ಹೆದರಿಕೋಬ್ಯಾಡ. ದಿನಾ ಹೀಗೆ ಮಾಡಿಸು ಚಿಕ್ಕಮ್ಮ" —ಎಂದು ಪಾಪುವಿಗೆ ಹೇಳಿ ಅವನು ಹೊರಗೆ ಹೋಗಿ ಕಾರಿನಲ್ಲಿ ಕೂತುಕೊಂಡ. ರೈಲ್ವೆ ಸ್ಟೇಶನ್ನಿಗೆ ಇವರೂ ಹೋದರು.

ಅವನು ಹೋದ ಮಧ್ಯಾಹ್ನದ ಹೊತ್ತಿಗೆ ಪಾಪು ಯಾಕೋ ಮಂಕಾಗಿದ್ದಳು. ಸಂಜೆ ಐದು ಗಂಟೆಯಲ್ಲಿ ಮಗುವನ್ನು ತಬ್ಬಿಕೊಂಡು ಹನಿ ಹನಿಯಾಗಿ ಕಣ್ಣೀರು ಹಾಕುತ್ತಿದ್ದಳು. ಆಗ ನಾನು ಅವಳು ಮಲಗಿದ್ದ ರೂಮಿಗೆ ಹೋದೆ. ನನ್ನನ್ನು ಕಂಡು ತಕ್ಷಣ ಮುಖವನ್ನು ಗೆಲುವು ಮಾಡಿಕೊಳ್ಳಲು ಪ್ರಯತ್ನಿಸಿದಳಾದರೂ ಮುಖದಲ್ಲಿ ಒಂದು ತೆರನಾದ ದುಃಖ ಒಡೆದು ಕಾಣುತ್ತಿತ್ತು. ಹತ್ತಿರ ಕೂತು ಅವಳ ತಲೆಯನ್ನು ಕೈಯಿಂದ ಸವರುತ್ತಾ ಸಂತೈಸುವ ಧ್ವನಿಯಲ್ಲಿ ಕೇಳಿದರೂ ಏನೂ ಹೇಳಲಿಲ್ಲ: ಅಸಂಬದ್ಧವೆನ್ನಬಹುದಾದ ಯಾವುದೋ ಮಾತನಾಡಿ ಸುಮ್ಮನಾದಳು.

ಆದರೆ ರಾತ್ರಿ ಇಬ್ಬರೂ ಮಲಗಿದಾಗ ನಾನು ಮತ್ತೆ ಕೇಳಿದೆ. ಹೇಳಿದಳು :

"ಇವತ್ತು ಬೆಳಗಿನ ಪೋಸ್ಟಿನಲ್ಲಿ ಚಿಕ್ಕಮಗಳೂರಿನಿಂದ ಇವರ ಕಾಗದ ಬಂತಲ್ಲ."

"ಯಾಕೆ, ಏನು ಬರೆದಿದಾರೆ?"

"ಆಗಲೇ ಆರುತಿಂಗಳು ಕಳೆಯಿತು. ನೀನು ಬೇಗ ಹೊರಟು ಬಾ ಅಂತ ಬರೆದಿದಾರೆ."

"ಇಷ್ಟು ಬೇಗ ಹ್ಯಾಗೆ ಹೋಗೋಕೆ ಆಗುತ್ತೆ? ನಾನು ಬಾಯಿಬಿಟ್ಟು ಹೇಳಿರಲಿಲ್ಲ. ಆದರೂ ಮಗು ಹಾಲು ಕುಡೀತಿರುವಾಗ ನೀನು ಹ್ಯಾಗೆ ಹೋಗೋದು? ಹಾಗಂತ ಅವರಿಗೆ ಬರಿ."

ಆ ಮಾತಿಗೆ ಪಾಪು ಯಾವ ಮಾತನ್ನೂ ಆಡಲಿಲ್ಲ. ಪಕ್ಕದಲ್ಲಿದ್ದ ಮಗುವನ್ನು ತಬ್ಬಿಕೊಂಡಳು. ಆದರೆ ಕಣ್ಣುಗಳಲ್ಲಿ ಮತ್ತೆ ಏಳು ಎಂಟು ತೊಟ್ಟು ನೀರು ಹರಿದು ಅವಳ ಎಡತೋಳಿನ ಮೇಲೆ ಬಿತ್ತು. "ಪಾಪು, ಯಾಕೆ ಅಳ್ತೀಯ ಹೇಳು"— ಅಂತ ನಾನು ಬಲವಂತ ಮಾಡಿದರೂ ಏನೂ ಹೇಳಲಿಲ್ಲ. ನಾನು ಸುಮ್ಮನಾದೆ.

ಮರುದಿನ ಯಾವುದೋ ಮಾತಿಗೆ ಹೇಳಿದಳು: "ಅಕ್ಕ, ಇವನೊಬ್ಬನನ್ನೇ ನಿನ ಮಗ ಅಂತೀಯೇನು? ಚಿಕ್ಕಮಗಳೂರಿನಲ್ಲಿರೋ ಉಳಿದ ಮೂರು ಜನ ನಿನ್ನ ಮಕ್ಕಳೇ ಅಲ್ಲವೆ?"

"ಯಾಕೆ ಹೀಗಂತೀಯ?" ನಾನು ಕೇಳಿದೆ.

"ಅಲ್ಲ ಸುಮ್ಮನೆ ಹೇಳಿದೆ. ಅವರೂ ನಿನ್ನ ಮಕ್ಕಳೇ, ಇವನೂ ನಿನ್ನ ಮಗನೇ. ಇವನೊಬ್ಬನಿಗೇ ಏನು ಯಾರಿಗೂ ಇಲ್ಲದ ಕೋಡು ಬೆಳಿಸ್ತೀಯ?"

"ನಾನೇನು ಇವನನ್ನ ಅತಿಮುದ್ದು ಮಾಡುಲ್ಲ ಸುಮ್ಮನಿರು,"

"ಅದಕ್ಕಲ್ಲ ನಾನು ಅಂದದು."

"ಮತ್ತೇನು ಹೇಳು."

ಆದರೆ ಪಾಪು ಪುನಃ ಸುಮ್ಮನಾಗಿಬಿಟ್ಟಳು. ಅವಳು ಎಂದೂ ಒಗಟಿನಂತೆ ಮಾತನಾಡುವವಳಲ್ಲ. ಅವಳ ಮನಸ್ಸಿನಲ್ಲಿ ಏನಿದೆಯೋ? ಈಗ ಕಾಲಸ್ಥಿತಿ ಕಷ್ಟವಾಗುತ್ತಿದೆ. ಊರಿನಲ್ಲಿರುವ ಇಬ್ಬರು ಗಂಡುಮಕ್ಕಳ ವಿದ್ಯಾಭ್ಯಾಸವಾಗಬೇಕು. ಇದಕ್ಕೆಲ್ಲ ಅವಳ ಗಂಡನ ಸಂಬಳ ಸಾಲದು. ಆದುದರಿಂದ ಆ ಮಕ್ಕಳ ಪುರೋಭಿವೃದ್ಧಿಗೆ ನಮ್ಮ ಸಹಾಯಬೇಕು ಅಂತ ಅವಳ ಇಂಗಿತವಿರಬಹುದು. ಅದನ್ನು ಅವಳು ಬಾಯಿಬಿಟ್ಟು ಹೇಳಬೇಕೆ? ಆ ಕಾಲ ಬಂದಾಗ ನಾವು ಖಂಡಿತ ಆ ಹುಡುಗರಿಗೂ ಮಾಡ್ತೀವಿ. ನಾನೂ ಇದನ್ನು ಬಾಯಿಬಿಟ್ಟು ಹೇಳಲಿಲ್ಲ.

ಇದಾದ ನಾಲ್ಕನೆಯ ದಿನ ಅವಳ ಗಂಡನಿಂದ ಇನ್ನೊಂದು ಕಾಗದ ಬಂತು. ಅವರ ಚಿಕ್ಕಮ್ಮ ಅರ್ಜೆಂಟ್ ಕೆಲಸವಿದ್ದುದರಿಂದ ಊರಿಗೆ ಹೊರಟು ಹೋಗಿದ್ದಾರೆ. ತಾವು ಆಫೀಸಿನ ಕೆಲಸಕ್ಕೆ, ಕೆಲವು ಸಲ ಪ್ರವಾಸಕ್ಕೆ, ಹೋದರೆ ಮನೆಯಲ್ಲಿರುವ ಚಿಕ್ಕ ಹುಡುಗರನ್ನು ನೋಡಿಕೊಳ್ಳುವವರಿಲ್ಲ. ಪಾಪು ತಕ್ಷಣ ಹೊರಡಬೇಕು. ಅವಳು ಕಾಗದವನ್ನು ನನ್ನ ಕೈಲೇ ಕೊಟ್ಟಳು. ಅದನ್ನು ತೋರಿಸಿ ಇವರನ್ನು ಕೇಳಿದಾಗ ಇವರು, "ಹಾಗಾದರೆ ಕಳಿಸು. ಪಾಪ, ಅಲ್ಲಿ ಮಕ್ಕಳನ್ನ ನೋಡಿಕೊಳ್ಳೋರು ಯಾರು?" ಎಂದರು.

ವಿಷಯವನ್ನು ನಾನು ಇವರ ಕೈಲಿ ಬಾಯಿಬಿಟ್ಟು ಆಡಬಹುದಿತ್ತು. ಆದರೆ ಆಡಲಿಲ್ಲ. ಅವರೇ ಈ ಬಗೆಗೆ ಸುಮ್ಮನಿರುವಾಗ ನಾನಾಗಿಯೇ ತೆಗೆಯಬಾರದು ಅಂತ ಸುಮ್ಮನಾದೆ. ಅದಕ್ಕೆ ಇನ್ನೂ ಕಾಲವಿದೆ ಎಂದು ಅವರು ಸುಮ್ಮನಿರಬಹುದು. ಯಾವುದನ್ನೂ ತಾವೇ ಯೋಚಿಸಿಕೊಂಡು ಸಮಯ ಬಂದಾಗ ಮಾಡುವುದು ಅವರ ಪದ್ಧತಿ. ಪ್ರತಿಯೊಂದನ್ನೂ ಹೆಂಡತಿಯ ಕೈಯಲ್ಲಿ ಹೇಳುವುದು ಇವರಂಥವರ ಜಾಯಮಾನಕ್ಕೆ ಬಂದುದಲ್ಲ. ತಿಳಿದೂ ತಿಳಿದೂ ನಾನೇ ಯಾಕೆ ಈಗಲೇ ಮಾತು ತೆಗೆಯಲಿ ಅಂತ ಸುಮ್ಮನಾದೆ.

ಆದರೆ ಪಾಪುವಿನ ಕೈಲಿ ಮಾತ್ರ ಬಾಯಿಬಿಟ್ಟು ಹೇಳಿದೆ : "ಮಗೂಗೆ ಹಾಲು ಬಿಡಿಸೋತಂಕ ನೀನು ಇಲ್ಲೇ ಇರಬೇಕು ಅಂತ ನನ್ನ ಆಸೆಯಿತ್ತು. ಒಂದು ವರ್ಷಕ್ಕೆ ಹಾಲು ಬಿಡುಸ್ತಾರೆ. ಆಗ ಶಾಸ್ತ್ರವೂ ಆದಮೇಲೆ ನೀನು ಊರಿಗೆ ಹೋಗಬಹುದಿತ್ತು. ಆದರೆ ಏನೂ ಮಾಡೋ ಹಾಗಿಲ್ಲ. ನೀನು ಈಗ ಊರಿಗೆ ಹೋಗು. ಆ ಮೇಲೆ ಶಾಸ್ತ್ರ ಮಾಡ್ಕಳಾಣ."

ಅವಳು ಏನೂ ಮಾತನಾಡಲಿಲ್ಲ. ಒಂದು ಸಲ ಸಣ್ಣದಾಗಿ ನಿಟ್ಟುಸಿರಿಟ್ಟಳು. "ಹಾಗಾದರೆ ನಾನು ಯಾವತ್ತು ಹೊರಡಲಿ?"

ನಾಡದ್ದು ದಿನ ಚೆನ್ನಾಗಿದೆ. ಅವತ್ತು ಬೆಳಿಗ್ಗೆಯೇ ಕಾರಿನಲ್ಲಿ ಪ್ರಯಾಣ ಮಾಡುವುದೆಂದು ತೀರ್ಮಾನವಾಯಿತು. ಹೇಗೂ ಕಾರು ಹೋಗಿ ಬರುತ್ತೆ. ನಾನೂ ಪಾಪು ಮತ್ತು ಮಗುವಿನ ಸಂಗಡ ಹೊರಟೆ. ಭಾನುವಾರವಾಗಿದ್ದುದರಿಂದ ನಾವು ಹೋದಾಗ ಚಿಕ್ಕಮಗಳೂರಿನಲ್ಲಿ ಮಕ್ಕಳೆಲ್ಲ ಮನೆಯಲ್ಲೇ ಇದ್ದವು. ಎಲ್ಲರೂ ದೊಡ್ಡಮ್ಮ ದೊಡ್ಡಮ್ಮ ಅಂತ ನನನ್ನು ಮುತ್ತಿಕೊಂಡವು. ಮೂರನೆಯವನಾದ ಕುಮಾರ ಸಂತೂ ನನ್ನ ಭುಜವನ್ನೇ ಹತ್ತಿ ಕೂತುಬಿಟ್ಟ. ಅದೇ ಸಾಯಂಕಾಲ ಹೊರಡುವಾಗ ನನಗೆ ಅಳುವೇ ಬಂತು. ಪುಟ್ಟ ಮಗುವನ್ನು ಇನ್ನು ಆರು ತಿಂಗಳು ಬಿಟ್ಟಿರಬೇಕು. ಅದಂತೂ ಆಗದ ಕೆಲಸ. ತಿಂಗಳಿಗೊಂದು ಸಲದಂತೆಯಾದರೂ ಇಲ್ಲಿಗೆ ಬಂದು ನಾಲ್ಕು ನಾಲ್ಕು ದಿನ ಮಗುವಿನ ಜೊತೆ ಇದ್ದು ಹೋಗಬೇಕು ಎಂದು ನಿಶ್ಚಯಿಸಿ ಕಾರನ್ನು ಹತ್ತಿದೆ.

೫

ಮಗುವನ್ನು ಪಾಪುವಿನೊಡನೆ ಅಲ್ಲಿ ಬಿಟ್ಟು ಬಂದ ಮೇಲೆ ನನಗೆ ಇಲ್ಲಿ ದಿನ ಕಳೆಯುವುದೇ ಕಷ್ಟವಾಗಿದೆ. ಅದು ಹ್ಯಾಗೋ ಒಂದು ತಿಂಗಳನ್ನು ಕಳೆದು ನಾನೇ ಚಿಕ್ಕಮಗಳೂರಿಗೆ ಹೋಗಿ ಐದು ದಿನ ಇದ್ದುಬಂದೆ. ಹೀಗೆಯೇ ಇನ್ನು ಐದು ತಿಂಗಳು ಕಳೆದರೆ ಮಗುವಿಗೆ ಹಾಲು ಬಿಡಿಸಬಹುದು. ಆ ಮೇಲೆ ಅದನ್ನು ಅಲ್ಲಿಗೆ ಕಳಿಸುವುದಿಲ್ಲ. ಇತ್ತೀಚೆಗೆ ಅದು ತುಂಬ ಹಟ ಕಲಿತಿದೆ. ಪಾಪು ಒಂದು ನಿಮಿಷ ಸಹ



**ಪಡುವಣದ ಗಾಳಿ**

ರಭಸದಲಿ ಬೀಸುತಿದೆ ಪಡುವಣದ ಗಾಳಿ.
ಗಾಳಿಯೊಂದಿಗೆ ಬಂತು ಅಮೆರಿಕದ-
-ಕೋಳಿ.
ಪ್ರತಿಯೊಂದು ಹಳ್ಳಿಯಲಿ ರೋಟರಿ-
-ಕ್ಲಬ್ಬು.
ಈ ಪ್ರಗತಿ ನೋಡಿ ಹಾರಿತು ನನ್ನ-
-ಹುಬ್ಬು.

— ದಿನಕರ ದೇಸಾಯಿ

ಹತ್ತಿರವಿಲ್ಲದಿದ್ದರೆ ಅಳುತ್ತೆ. ಹಾಲು ಕುಡಿಯುವ ಮಕ್ಕಳೇ ಹಾಗೆ. ಹಾಲು ಬಿಟ್ಟ ಮೇಲೆ ಅದು ಪಾಪು ಇಲ್ಲದಿದ್ದರೂ ನನ್ನ ಜೊತೆ ಇರುತ್ತೆ.

ದತ್ತುವಿನ ವಿಷಯವಾಗಿ ಇವರು ಒಂದು ಮಾತೂ ಆಡಿಲ್ಲ. ಅವರಾಗಿಯೇ ಮಾತನಾಡದೆ ನಾನು ಆಡಬಾರದು, ನಿಜ. ಆದರೆ ಹೀಗೆ ಎಷ್ಟು ದಿನ ಅಂತ ಸುಮ್ಮನಿರೋಕೆ ಆಗುತ್ತೆ? ಮಗೂಗೆ ಶಾಸ್ತ್ರೋಕ್ತವಾಗಿ ನಾಮಕರಣ ಸಹ ಆಗಿಲ್ಲ. ದತ್ತು ಶಾಸ್ತ್ರಕ್ಕೆ ಯಾವ ತಿಂಗಳು, ನಕ್ಷತ್ರ, ಮುಹೂರ್ತ ಒಳ್ಳೆಯದು ಅನ್ನುವುದನ್ನು ಪುರೋಹಿತರನ್ನ ಕೇಳಬೇಕು. ಎಲ್ಲಾನೂ ಮೊದಲೇ ನಿಶ್ಚಯಿಸಿ ಅಣಿಮಾಡಿಕೊಳ್ಳೋದು ಒಳ್ಳೆಯದು. ಇವರ ಕೈಲಿ ಮಾತಾಡದೆ ನಾನೇ ಮುಂದುವರೆದು ವ್ಯವಸ್ಥೆ ಮಾಡೋದು ಚೆನ್ನಲ್ಲ. ಯಜಮಾನರಾದ ಅವರು ಯಾವುದನ್ನೂ ಮಾಡಬೇಕು. ಏನಾದರೂ ಇನ್ನು ಒಂದೆರಡು ದಿನದಲ್ಲಿ ನಾನು ಅವರ ಕೈಲಿ ಮಾತು ತೆಗೆದೇ ತೆಗಿತೀನಿ.

ಅಷ್ಟರಲ್ಲಿ ಒಂದು ದಿನ ಪಾಪುವಿನಿಂದ ಒಂದು ಕಾಗದ ಬಂತು. ನಾಲ್ಕು ಪುಟದ ದೊಡ್ಡ ಕಾಗದ. ಮೊದಲ ಸಲ ಓದಿದಾಗ ನನಗೆ ಅದನ್ನು ನಂಬುವುದಕ್ಕೇ ಆಗಲಿಲ್ಲ. ಪಾಪು, ನನ್ನ ಬೆನ್ನಿನಲ್ಲಿ ಬಿದ್ದ ತಂಗಿ ಹೀಗೆ ಬರೀತಾಳೆ ಅಂತ ನಂಬುವುದಾದರೂ ಹ್ಯಾಗೆ? ನನಗೆ ಗಟ್ಟಿಯಾಗಿ ಅಳು ಬಂದುಬಿಟ್ಟಿತು ರೂಮಿನ ಬಾಗಿಲು ಹಾಕಿಕೊಂಡು ಎರಡು ನಿಮಿಷ ಒಂದೇ ಸಮನೆ ಅತ್ತು ಮನಸ್ಸನ್ನು ಸಮಾಧಾನ ಪಡಿಸಿಕೊಂಡೆ.

ಬರೆದಿದ್ದಳು: "ಮಗುವನ್ನ ನೀನು ಎಷ್ಟು ಪ್ರೀತಿಸುತೀಯ ಅಂತ ನನಗೆ ಗೊತ್ತು. ನಿನ್ನ ಪ್ರೀತಿಗೆ ನಾನು ಅಡ್ಡಿ ಮಾಡುಲ್ಲ. ಅದು ನಿನ್ನದೇ ಮಗು. ಬೇಕಾದರೆ ಸ್ವಲ್ಪ ದೊಡ್ಡವನಾದ ಮೇಲೆ ಅವನನ್ನ ನೀನೇ ಸಾಕು. ಹಾಗೆಯೇ ಉಳಿದ ಮೂರು ಮಕ್ಕಳೂ ನಿನ್ನವೇ. ಆದರೆ ಹಸೆಯ ಮೇಲೆ ಕೂತುಕೊಂಡು ಮಗುವನ್ನು ಕೈಎತ್ತಿ ಇದು ಇನ್ನು ಮೇಲೆ ನಮ್ಮದಲ್ಲ ಅಂತ ಹೇಳಿ ಕೊಡೋಕೆ ಮನಸ್ಸಿಗೆ ಕಷ್ಟವಾಗುತ್ತೆ. ಇವರು ಸಹ ಹಾಗೆಯೇ ಅಂತಾರೆ.

"ಹೊಟ್ಟೆಯಲ್ಲಿದ್ದಾಗ ಇದು ನಿನ್ನದೇ ಅಂತ ನಾವಿಬ್ಬರೂ ತೀರ್ಮಾನಿಸಿದ್ದೆವು. ಇವರೂ ಹಾಗೆಯೇ ಭಾವಿಸಿದ್ದರು. ಅದಕ್ಕೆ ನಾನು ಆಸ್ಪತ್ರೆಯಲ್ಲಿದ್ದಾಗ ಇವರು ನನ್ನನ್ನು ನೋಡೋಕೆ ಅಂತ ಬಂದರೆ ಹೊರತು ಮಗೂನ ನೋಡಬೇಕು ಅಂತ ಆಶೆಯೇ ಇರಲಿಲ್ಲವಂತೆ. ಆದರೆ ಆಸ್ಪತ್ರೆಗೆ ಬಂದು ಒಂದು ಸಲ ಎತ್ತಿಕೊಂಡ ಮೇಲೆ ಅವರಿಗೆ ಆಶೆ ಹುಟ್ಟಿಬಿಟ್ಟಿತಂತೆ. ಈಗಲಂತೂ ಅವರು ಆಫೀಸಿನಿಂದ ಬಂದಮೇಲೆ ಒಂದು ಗಳಿಗೆಯೂ ಅದನ್ನ ಬಿಟ್ಟಿರುಲ್ಲ. ಉಳಿದ ಹುಡುಗರೂ ಅಷ್ಟೆ. ಪುಟ್ಟ ಪಾಪನ್ನ ಬೆಂಗಳೂರಿಗೆ ಕಳಿಸಿಬಿಡ್ತೀವಿ ಅಂದರೆ ವಿಜಯ ಮಂಕಾಗುತ್ತಾನೆ. ಲತಾ ಅತ್ತೇ ಬಿಡ್ತಾಳೆ. ಕುಮಾರ ನನ್ನನ್ನೇ ಹೊಡೀತಾನೆ.

"ಈ ಮಗುವಿನ ಮೇಲೆ ಪ್ರೀತಿಯನ್ನೇ ಬೆಳೆಸಿಕೊಳ್ಳಬಾರದು ಅಂತ ನಾನು ತುಂಬ ಪ್ರಯತ್ನಪಟ್ಟೆ. ಎದೆಯಲ್ಲಿ ಹಾಲೇ ಬರದಿದ್ದರೆ ಹೆಚ್ಚು ಪ್ರೀತಿ ಬೆಳೆಸಿಕೊಳ್ಳದೆ ಇರಬಹುದಿತ್ತೇನೋ! ಆದರೆ ಹಾಲು ಬಂದು, ಮಗು ಕುಡಿಯೋಕ್ಕೆ ಶುರುಮಾಡಿದ ಮೇಲೆ ವಾತ್ಸಲ್ಯ, ಅಂತಃಕರಣ ಅನ್ನುವುದು ತನಗೆ ತಾನೇ ಹುಟ್ಟಿಬಿಟ್ಟಿತು. ಹೆತ್ತಮಗುವಿನ ಮೇಲೆ ತಾಯಿಗೆ ಪ್ರೀತಿ ಅನ್ನುವುದು ಯಾರನ್ನಾದರೂ ಹೇಳಿಕೇಳಿ ಬರುತ್ತೆಯೇ? ಬೇಡವೆಂದರೆ ಬಿಡುತ್ತೆಯೆ? ಆದರೆ ನಿನಗೆ ಕೊಟ್ಟಿದ್ದ ಮಾತು ನೆನಪಿನಲ್ಲಿ ಬಂದು ನನಗೆ ನಾನೇ ಕರುಳು ಕೊಯ್ದುಕೊಳ್ಳುವ ಹಾಗೆ ಆಗುತ್ತಿತ್ತು. ಇನ್ನೊಂದು ಮಗುವೇ ನಮಗೆ ಬೇಡವಾಗಿತ್ತು. ಆದರೆ ಹುಟ್ಟುವ ಮೊದಲು ಬೇಡವಾದ ಮಗು ಹುಟ್ಟಿದ ಮೇಲೆ ಎಷ್ಟೊಂದು ಬೇಕಾಗಿ ಬಿಡುತ್ತೆ!

"ನಾನೇನು ನಿನಗೆ ಕೊಟ್ಟ ಮಾತಿಗೆ ತಪ್ಪುವುದಿಲ್ಲ. ಇದನ್ನು ನೀನೇ ತಗೋ. ನೀನೇ ಸಾಕು. ಆದರೆ ಹಸೆಯ ಮೇಲೆ ಕೂತು ಇದು ಇನ್ನು ಮೇಲೆ ನಮ್ಮದಲ್ಲ ಅಂತ ಬಾಯಿಯಲ್ಲಿ ನುಡಿಯುವುದು ಮಾತ್ರ ಬೇಡ ಅಂತ ಇವರೂ ಅಂತಾರೆ. ನನಗೂ ಹಾಗೆಯೇ ಅನಿಸುತ್ತೆ.

"ನೀನು ಇಲ್ಲಿಗೆ ಬೇಗ ಬಾ. ಹುಡುಗರು

ದೊಡ್ಡಮ್ಮ ದೊಡ್ಡಮ್ಮ ಅಂತ ನೆನಸಿಕೊಳ್ಳುತ್ತಾರೆ. ಇಂತೀ ನಮಸ್ಕಾರಗಳು."

ಪಾಪು ಕೊನೆಗೂ ತನ್ನ ಕರುಳಿನ ಕಷ್ಟವನ್ನೇ ದೊಡ್ಡದು ಅಂತ ತಿಳಿದುಕೊಂಡಳು. ನನ್ನ ಕಷ್ಟವನ್ನ ಯೋಚಿಸಲಿಲ್ಲ. ಇವರು ಕೇಳಿದರೆ ಏನಂತ ಹೇಳಲಿ? ಕೊನೆಗೂ ನಾನು ಮಕ್ಕಳಿಲ್ಲದ ಬಂಜೆಯೇ ಆಗಿ ಉಳಿದೆ. ನನ್ನ ಹೊಟ್ಟೆಯಲ್ಲೇ ಹುಟ್ಟಬೇಕು ಅಂತ ಏನು, ನನ್ನ ತಂಗೀದು ನಂದು ಎರಡೂ ಒಂದೇ ಹೊಟ್ಟೆ ಅಂತ ತಿಳಕೊಂಡು ನಾನು ಇಷ್ಟುದಿನ ಆ ಮಗೂನ ಪ್ರೀತಿಸಿದೆ. ಅದು ನಮಗೆ ಅಂತಲೇ ಜನ್ಮ ತಾಳಿದ್ದು, ನಮಗೆ ಅಂತಲೇ ಹುಟ್ಟಿದ್ದು, ನಮಗಾಗಿಯೇ ಬೆಳೆದದ್ದು. ಹೀಗಿದ್ದು ಅವಳು ಮಾತು ;ಬದಲಾಯಿಸಿಬಿಟ್ಟಳಲ್ಲ. ಯಾರನ್ನು ತಾನೇ ನಾನು ನಂಬಬಹುದು! ನಮ್ಮ ಅಮ್ಮ ಇಲ್ಲ. ಆದರೆ ಅವಳಿಗೆ ಆ ದುಃಖ ಆಗಬಾರದು ಅಂತ ನಾನೇ ಅವಳಿಗ ತವರಿನ ತಾಯಿಯು ಹಾಗಿದ್ದೆ. ನನ್ನ ಕರುಳು ಏನು ಅಂತ ಅವಳು ಪೂರ್ತಿಯಾಗಿ ತಿಳಕೋ ಬೇಡವೇ? ಅಥವಾ ಅವಳ ಗಂಡ ಬ್ಯಾಡ ಅಂದರೆ? ಹಾಗಾದರೆ ಗಂಡನಿಗಿಂತ ತನಗೇ ಹೆಚ್ಚು ದುಃಖವಾಗುತ್ತೆ ಅನ್ನೋ ಹಾಗೆ ಬರೆದಿದಾಳಲ್ಲ. ಈ ಕಾಗದಾನ ಅವಳೇ ಬರೆದಳೇ ಅಥವಾ ಅವಳ ಗಂಡ ಬುದ್ಧಿವಂತಿಕೆ ಉಪಯೋಗಿಸಿ ಬರೆದಿದ್ದನ್ನ ಇವಳು ತನ್ನ ಅಕ್ಷರದಲ್ಲಿ ಬರೆದು ಪೋಸ್ಟ್ ಮಾಡಿದಾಳೆಯೇ ಅಥವಾ ಗಂಡ ಹೆಂಡತಿ ಇಬ್ಬರೂ ಕೂಡಿ ಯೋಚನೆ ಮಾಡಿ ಹೀಗೆ ಬರೆದಿದಾರೆಯೇ ? ಒಟ್ಟಿನಲ್ಲಿ ಇಬ್ಬರೂ ಕೂಡಿಯೇ ಮಾಡಿರೋ ತೀರ್ಮಾನ ಇದು. ಇಬ್ಬರೂ ಸೇರಿ ನನ್ನ ಕರುಳು ಕುಯ್ದರು. ನನ್ನ ಮರ್ಯಾದೇನ ಒಂದು ಹಿಡಿ ಸಾಸಿವೆ ತೂಕಕ್ಕೆ ಇಳಿಸಿದರು.

ಇನ್ನೊಂದು ಸಲ ತಡೆಯಲಾರದಷ್ಟು ಅಳು ಬಂದುಬಿಟ್ಟಿತು. ನಾನು ಗಟ್ಟಿಯಾಗಿಯೇ ಅತ್ತುಬಿಟ್ಟೆ. ಅದೇ ಸಮಯಕ್ಕೆ ರೂಮಿನ ಬಾಗಿಲು ತೆಗೆದುಕೊಂಡು ಇವರು ಒಳಗೆ ಬಂದರು. "ಯಾಕೆ ಹೀಗೆ ಅಳ್ತಿಯ? ಏನು ಸಮಾಚಾರ?" ಅಂತ ಕೇಳಿದರು. ನಾನು ಮಾತನಾಡಲಿಲ್ಲ. ಅವರ ದೃಷ್ಟಿ ನನ್ನ ಕೈಲಿದ್ದ ಕಾಗದದ ಮೇಲೆ ಬಿತ್ತು. "ಯಾವ ಕಾಗದ ಇದು? ಪಾಪೂದೆ? ಎಲ್ಲಾ ಕ್ಷೇಮವಾಗಿದಾರೆ ತಾನೆ?" ಕೇಳಿದರು. "ಅದೇನು ಹೇಳು. ಅಂಥದೇನಾದರೂ ಕಷ್ಟದಲ್ಲಿದ್ದರೆ ನಮ್ಮ ಕೈಲಾದ ಸಹಾಯ ಮಾಡಾಣ" "ಅವರಿಗೆಂಥ ಕಷ್ಟ. ಇನ್ನೊಬ್ಬರನ್ನು ಗೋಳುಹುಯ್ಕಳುಕ್ಕೇ ಅವಳು ಹುಟ್ಟಿದ್ದಾಳೆ." "ಅದೇನು ಬಿಡಿಸಿ ಮಾತಾಡು"- ಅಂತ



ಇವರು ನನ್ನ ಕೈಲಿದ್ದ ಕಾಗದವನ್ನು ಕೈಗೆ ತೆಗೆದುಕೊಂಡರು.

ಆದರೆ ಅದನ್ನು ಹಾಗೆಯೇ ಹಿಂದಕ್ಕೆ ಎಳೆದು ಕೊಂಡು ನಾನು ಹೇಳಿದೆ:

"ನನ್ನಾಣೆ. ಅದನ್ನ ನೀವು ಓದಕೂಡದು."

"ಹಾಗಾದರೆ ಬ್ಯಾಡ" — ಎಂದು ಹೇಳಿ ಅವರು ಶಾಂತವಾಗಿ ಅಲ್ಲಿಂದ ಹೊರಟು ಹೋದರು,

ಇವರಿಗೆ ಶಾಂತಿ ಇದೆ. ಯಾವ ಸಂದರ್ಭ ದಲ್ಲೂ ಮನಸ್ಸಿಗೆ ಅಶಾಂತಿ ಮಾಡಿಕೊಳ್ಳ ಕೂಡದು ಅಂತ ಡಾಕ್ಟರ್ ಹೇಳಿದ್ದಾರೆ. ಅದಕ್ಕೆ ತಕ್ಕಂತೆ ಇರ್ತಾರೆ. ದಿನಾ ಪುರಾಣ ಕೇಳುಕ್ಕೆ ಹೋಗುವುದೇ ಅದಕ್ಕೆ. ಆದರೆ ನನಗೇಕೆ ಬೇಕು ಅಂಥಾ ಶಾಂತಿ? ನನ್ನ ಕೈಲಿ ಅದು ಎಂದಿಗೂ ಸಾಧ್ಯವಿಲ್ಲ. ಆಗಲೇ ಕೂತು ಪಾಪುವಿಗೆ ಎರಡು ದೊಡ್ಡ ಹಾಳೆಯ ತುಂಬ ಕಾಗದ ಬರೆದೆ: ನಮಗೆ ಅಂತಲೇ ಆ ಮಗುವಿಗೆ ಅವಳು ಬಸುರಿ ಯಾದದ್ದರಿಂದ ಹಿಡಿದು ಅದು ಹುಟ್ಟಿ ಇಲ್ಲಿ ಆರು ತಿಂಗಳಾಗುವ ತನಕ ನಾನು ಎಷ್ಟು ಆಶೆ ಇಟ್ಟು ಕೊಂಡಿದ್ದೆ ಎಂಬುದನ್ನು ಬರೆದು, ಹೆಚ್ಚು ಮಾತ ನಾಡದಿದ್ದರೂ ಇವರೂ ಆ ಮಗುವಿನ ಬಗೆಗೆ ತುಂಬ ಅಕರಾಸ್ಥೆಯಿಂದ ಇದ್ದರು ಎಂಬುದನ್ನೂ ಸೇರಿಸಿದೆ. "ಬೆನ್ನಲ್ಲಿ ಬಿದ್ದ ನನ್ನ ತಂಗಿಯಾಗಿ ನೀನು ಹೀಗೆ ನನ್ನ ಕರುಳು ಕುಯ್ದು, ನನ್ನ ಮಾನವನ್ನು ಒಂದು ಸಾಸುವೆ ಕಾಳಿನಷ್ಟು ಮಾಡಿದೆ. ನಾನು ಇರಬಾರದು, ಸಾಯಬೇಕು. ಆಡಿದ ಮಾತಿನ ಮೇಲೆ ನಿನಗೆ ಜ್ಞಾನವಿಲ್ಲ. ನಾನು ಸತ್ತರೆ ನಿನಗೆ ಬುದ್ಧಿ ಬರುತ್ತೆ" –ಎಂದು ಮುಕ್ತಾಯ ಮಾಡಿದೆ.

ಕಾಗದವನ್ನು ಕವರಿಗೆ ಹಾಕಿ, ಆಳನ್ನು ಕರೆದು ಆಗಲೇ ಪೋಸ್ಟಿಗೆ ಹಾಕಿ ಬರುವಂತೆ ಹೇಳಿದೆ.

೬

ಒಂದು ತಿಂಗಳಾಗಿತ್ತು. ಪಾಪುವಿನಿಂದ ನನ್ನ ಕಾಗದಕ್ಕೆ ಉತ್ತರವೂ ಬರಲಿಲ್ಲ; ನಾನೂ ಮತ್ತೆ ಬರೆಯಲಿಲ್ಲ. ಇನ್ನು ನಾನು ಬರೆಯುವು ದಾದರೂ ಏನಿದೆ?

ಒಂದು ದಿನ ಇವರು ಹೇಳಿದರು: ರಾಜ ಜರ್ಮನಿಯಿಂದ ಇನ್ನು ಎಂಟು ತಿಂಗಳಿಗೆ ಬರುತ್ತಾನಂತೆ. ಅವನಿಗೆ ಕೊಡಲು ಮದರಾಸಿ ನದೇ ಒಂದು ಹೆಣ್ಣಿನ ತಂದೆ ತಾಯಿಗಳು ಕಿಟ್ಟು ಮತ್ತು ಲಕ್ಷ್ಮಿಯರನ್ನು ಕೇಳುತ್ತಿದ್ದಾರಂತೆ. ಕಿಟ್ಟು ಮನೆಗೆ ಪರಿಚಯವೇ ಇರುವ ಆ ಮನೆಯ ಹುಡುಗಿಯನ್ನು ರಾಜ ಮೊದಲಿನಿಂದ ನೋಡಿದ್ದಾನಂತೆ. ಅವನ ಅಭಿಪ್ರಾಯ ಕೇಳಿ ದುದಕ್ಕೆ "ನಾನೇನೋ ನೋಡಿದೀನಿ. ನೀವಿ- ಬ್ಬರು ಮತ್ತು ಬೆಂಗಳೂರಿನ ದೊಡ್ಡಮ್ಮ ದೊಡ್ಡಪ್ಪ ನೋಡಿ ಒಪ್ಪಿದರೆ ಹೆಣ್ಣು ನನಗೂ ಒಪ್ಪಿಗೆ. ನಿಮಗೆ ಬೇಡವಾದರೆ ನನಗೂ ಬ್ಯಾಡ"- ಅಂತ ಬರೆದಿದಾನಂತೆ. ಬೆಂಗಳೂರಿಗೇ ಮಗ ಳನ್ನು ಕರೆದುಕೊಂಡು ಬಂದು ತೋರಿಸಲು ಹೆಣ್ಣಿನ ತಂದೆ ತಾಯಿಗಳು ಸಿದ್ಧವಿದ್ದಾರೆ ಅಂತ ಕಿಟ್ಟುವೇ ಬರೆದಿದ್ದಾನೆ. ಆದರೆ ಇವರು "ಹೆಣ್ಣು ಹುಡುಗಿಯನ್ನು ಅವರ್ಯಾಕೆ ಪ್ರಯಾಣ ಮಾಡಿಸಿ ಕೊಂಡು ಬರಬೇಕು. ನಾವೇ ಅಲ್ಲಿಗೆ ಬರು ತ್ತೇವೆ-" ಅಂತ ಜವಾಬು ಕೊಟ್ಟರಂತೆ. "ನಡೀ, ಇಬ್ಬರೂ ಮದರಾಸಿಗೆ ಹೋಗಿ ಒಂದು ತಿಂಗಳು ಇದ್ದು ಬರಾಣ. ಚಳಿಗಾಲದಲ್ಲಿ ಅಲ್ಲಿಯ ಹವೆ ಬೆಂಗಳೂರಿಗಿಂತ ಚೆನ್ನಾಗಿರುತ್ತೆ" — ಇವರು ಹೇಳಿದರು.

ಆದರೆ ನನಗೆ ಹೋಗುವ ಮನಸ್ಸಿರಲಿಲ್ಲ. ಪಾಪು ಹೀಗೆ ಕಾಗದ ಬರೆದ ಮೇಲೆ ನನಗೆ ಯಾರ ಮೇಲೂ ಸಮಾಧಾನವಿರಲಿಲ್ಲ. ಹೆಣ್ಣು ನೋಡುವುದಕ್ಕೆ, ಮದುವೆ ಮುಂಜಿಗೆ, ನಮ್ಮನ್ನು ಎಷ್ಟು ಕರೆದರೂ, ಎಂಥ ದೊಡ್ಡ ಮಣೆಯ ಮೇಲೆ ಕೂಡಿಸಿದರೂ ಅವು ಬೇರೆಯ ವರ ಮಕ್ಕಳೇ ಹೊರತು ನಮ್ಮವಾಗುತ್ತವೆಯೆ? ಗೋಪಾಲ, ವಾಸು ಇಬ್ಬರಿಗೂ ಹೆಣ್ಣು ನೋಡು ವಾಗ, ಶ್ರೀಮತಿಗೆ ಗಂಡು ನೋಡಿದಾಗ ನಾವೇ ಹೋಗಿದ್ದೆವು. ಎಲ್ಲ ನಮ್ಮ ಮಾತಿನಂತೆಯೇ ಆಯಿತು. ಅದು ಬೇರೆಯ ಮಾತು. ಆದರೆ ಈಗ ನನಗೆ ಪ್ರಪಂಚದ ಹೊಸ ಸತ್ಯವೊಂದು ಗೊತ್ತಾಗಿದೆ. ಯಾರ ಮಕ್ಕಳನ್ನೂ ನಮ್ಮ ಮಕ್ಕಳು ಅಂತ ಭಾವಿಸಿ ಭ್ರಮಿಸಿರಬಾರದು. ಸ್ವಂತ ತಂಗಿಯ ಮಕ್ಕಳೂ ಅಷ್ಟೆ.

ಶಾಭಾಸ್, ಭಾಗವತರೇ!
ನಿಮ್ಮ 'ಕರಹರಪ್ರಿಯ'
ರಾಗ ಭಾರೀ ಚೆನ್ನಾಗಿತ್ತು!

ಇರ್ಲಿ ಬಿಡೋ, ಈ 'ಕರಕರ'
ಗ್ಲೂಕೊ ಬಿಸ್ಕಿಟ್‌ನ
ಎದುರು ಯಾವುದೂ
ನಿಲ್ಲುವುದಿಲ್ಲ!



ಪಾರ್ಲೆ ಗ್ಲೂಕೊ

ಬಿಸ್ಕಿಟ್‌ಗಳು




★ ಉತ್ಕೃಷ್ಟ ಸ್ವಾದ
★ ಅಸಮಾನ ರುಚಿ
★ ಗರಿಮುರಿ–ತಾಜಾ
★ ಅನುಪಮ ಪೌಷ್ಟಿಕತೆ

ಆದುದರಿಂದಲೇ ಪಾರ್ಲೆಯವರ ಗ್ಲೂಕೊ ಭಾರತದಲ್ಲಿ ಎಲ್ಲಕ್ಕಿಂತ ಹೆಚ್ಚು ಮಾರಾಟವಾಗುವ ಬಿಸ್ಕಿಟ್ ಆಗಿದೆ!

"ನಾನು ಬರುಲ್ಲ. ನೀವೊಬ್ಬರೇ ಹೋಗಿ ಬನ್ನಿ. ನೀವು ಒಪ್ಪಿದರೆ ಸಾಕು. ನಾನು ಮುಂದೆ ಯಾವಾಗಲಾದರೂ ನೋಡ್ತೀನಿ" – ಅಂದೆ. ಇವರು ಹ್ಯಾಗೂ ಚಳಿಗಾಲ ಒಂದು ತಿಂಗಳು ಅಲ್ಲಿರಬೇಕೆಂದು ಹೊರಟಿದ್ದರು. ನನ್ನ ಮಾತಿಗೆ ಹಾಗೆಯೇ ಆಗಲಿ ಎಂದು ಹೇಳಿ ಒಬ್ಬರೇ ಹೊರಟುಹೋದರು.

ಇವರು ಹೋದ ದಿನವೆಲ್ಲ ನನಗೆ ಇನ್ನಿಲ್ಲ-ದಷ್ಟು ಬೇಸರವಾಯಿತು. ನಮ್ಮಿಬ್ಬರನ್ನು ಬಿಟ್ಟರೆ ಈ ಮನೆಯಲ್ಲಿ ಮತ್ತೆ ಯಾರಿದ್ದಾರೆ? ಇನ್ನು ಆರು ತಿಂಗಳಿಗೆ ಕಿಟ್ಟುವಿಗೆ ರಿಟೈರ್ ಆದ ಮೇಲೆ ಗಂಡ ಹೆಂಡತಿ ಇಲ್ಲಿಯೇ ಬಂದು ಬಿಡಿ ಅಂತ ಇವರೇನೋ ಅವರಿಗೆ ಹೇಳಿದ್ದಾರೆ. ಹಿರಿಯವ ನಾದ ಗೋಪಾಲ ಮದರಾಸನ್ನು ಬಿಟ್ಟು ಬೆಂಗ-ಳೂರಿನಲ್ಲಿಯೇ ಪ್ರಾಕ್ಟೀಸ್ ಮಾಡಲಿ ಅಂತಲೂ ಇವರ ಇಷ್ಟ. ಆದರೆ ಕಿಟ್ಟು, ಅವನ ಹೆಂಡತಿ, ಗೋಪಾಲ ಅವನ ಹೆಂಡತಿ ಮಕ್ಕಳು ಬಂದರೆ ನಮ್ಮ ಮಕ್ಕಳು ಅಂತ ಇದ್ದ ಹಾಗಾಯಿತೆ? ಏನು ಜೀವನವೋ, ಏನು ಕರ್ಮವೋ.

ಮರುದಿನ ಮಧ್ಯಾಹ್ನ ಒಂದು ಗಂಟೆಯ ಹೊತ್ತಿಗೆ ಮನೆಯ ಮುಂದೆ ಒಂದು ಆಟೋರಿಕ್ಷ ಬಂದು ನಿಂತಿತು. ರೂಮಿನ ಕಿಟಕಿಯಿಂದ ನೋಡುತ್ತೀನಿ: ಪಾಪು ಸಣ್ಣ ಮಗುವನ್ನು ಎತ್ತಿಕೊಂಡು ಇಳಿಯುತ್ತಿದ್ದಾಳೆ. ಜೊತೆಗೆ ಅವಳ ಹಿರಿಯ ಹುಡುಗ ವಿಜಯ ಇದ್ದಾನೆ. ಈಗ ಯಾಕೆ ಬಂದಳೋ? ಅವಳನ್ನು ಮಾತನಾಡಿ ಸಲೇ ಬೇಡವೆ? ಅವಳಾಗಿಯೇ ಬಂದು ಮಾತ ನಾಡಿಸುತ್ತಾಳೆ. ಆಗ ಏನನ್ನಲಿ, ಸುಮ್ಮನಿದ್ದು ಬಿಡಲೆ, ಕೋಪದ ಮಾತನಾಡಲೆ? ಅಥವಾ ಸಮಾಧಾನದಿಂದ ಉತ್ತರ ಕೊಡಲೆ? – ಎಂದು ನಾನು ಯೋಚಿಸಿ ಯಾವುದನ್ನೂ ನಿಶ್ಚಯಿಸುವ ಮೊದಲೇ ಅವಳು ಒಳಗೆ ಬಂದುಬಿಟ್ಟಳು. ರೂಮಿನ ಬಾಗಿಲು ತೆಗೆದೇ ಇತ್ತು. ನಾನಾ-ಗಿಯೇ ಅವಳನ್ನು ಮಾತನಾಡಿಸಲಿಲ್ಲ. ಅವಳೇ ಹತ್ತಿರ ಬಂದು ಮಗುವನ್ನು ನಾನು ಕೂತಿದ್ದ ಮಂಚದ ಮೇಲೆ ನನ್ನ ಮುಂದೆ ಮಲಗಿಸಿ ಹೇಳಿ ದಳು:

"ಅಕ್ಕ, ನಿನಗೆ ಸಿಟ್ಟು ಬರೋದು ನ್ಯಾಯವೇ. ಆದರೂ ನೋಡು, ಮಗೂನ ಈಗಲೇ ನಿನಗೆ ಕೊಟ್ಟಿದೀನಿ. ನೀನು ಹೇಳಿದ ದಿನ ಬಂದು ನಾವಿಬ್ಬರೂ ಶಾಸ್ತ್ರೋಕ್ತ ದತ್ತು ಕೊಡ್ತೀವಿ. ನಾವು ತಪ್ಪು ಯೋಚನೆ ಮಾಡಿದ್ದೆವು. ಈಗ ಕ್ಷಮಿಸಿ ಬಿಡು."

ನನಗೆ ಏನು ಮಾತನಾಡುವುದಕ್ಕೂ ತಿಳಿಯು ಲಿಲ್ಲ. ಪಾಪು ಹೀಗೆ ಬರುತ್ತಾಳೆಂದು ಯಾರು ತಾನೆ ಕಲ್ಪಿಸಿಕೊಳ್ಳಬಹುದಿತ್ತು? ಆದರೂ ತಕ್ಷಣ ಹೇಳಿದೆ:

"ನಿನ್ನ ಮಗೂನ ನೀನು ಇಟ್ಟುಕೋ. ನನಗೆ ಏನು ಬ್ಯಾಡ."

"ಅಕ್ಕ, ನಂದು ತಪ್ಪಾಯಿತು. ನಿನ್ನ ಮನಸ್ಸು ನೋಯಿಸಿದೀನಿ ನೀನು ಎಷ್ಟು ಬೈದರೂ ಬೈಸಿಕೊಳ್ಳೋಕೆ ಅಂತಲೇ ಬಂದಿದ್ದೀನಿ" ಎಂದು ನನ್ನ ಕಾಲುಗಳನ್ನೇ ಮುಟ್ಟಿಬಿಟ್ಟಳು. ಇನ್ನು ಏನು ಹೇಳುವುದಕ್ಕೂ ತೋಚದೆ ನಾನು ಸುಮ್ಮನೆ ಕುಳಿತಿದ್ದೆ. ಕಾಲು ಹಿಡಿದವರನ್ನು ಬೈಯುವುದು ಹೇಗೆ?

"ಹದಿನೈದು ದಿನದಿಂದ ಮನಸ್ಸು ಕೊರೀತಿತ್ತು. ಅವರು ಸಹ ನಾವು ಮಾಡಿದ್ದು ತಪ್ಪು ಅಂದರು. ನಿನ್ನೆ ರಾತ್ರಿ ಹೀಗೆ ಮಾಡೋದು ಅಂತ ಇಬ್ಬರೂ ತೀರ್ಮಾನ ಮಾಡಿದೆವು. ಇವತ್ತು ಬೆಳಗಿನ ಬಸ್ಸಿಗೆ ಸುಮ್ಮನೆ ಹೊರಟು ಬಿಟ್ಟೆ."

ವಿಜಯನ ಕೈಲಿದ್ದ ಒಂದು ಕಿಟ್ ಅಲ್ಲದೆ ಅವಳು ಮತ್ತೆ ಏನೂ ತಂದಿರಲಿಲ್ಲ. ಆಗ ನನಗೆ ಜ್ಞಾಪಕವಾಯಿತು. "ಏಳು, ಇಬ್ಬರೂ ಸ್ನಾನ ಮಾಡಿ. ನಂದೂ ಇನ್ನೂ ಊಟವಾಗಿಲ್ಲ. ಜೊತೇಲಿ ಮಾಡೋಣ" ಎಂದೆ. ಅವಳು ಬಚ್ಚಲ ಮನೆಗೆ ಹೋದಳು.

ಅಷ್ಟರಲ್ಲಿ ಚೆಲುವಮ್ಮ ಬಂದರು. ಆಕೆ ಅಡ್ವೋಕೇಟ್ ರಂಗಾಚಾರ್ಯರ ಆಫೀಸಿನ ಮುಖ್ಯ ಗುಮಾಸ್ತೆ ಸುಬ್ಬರಾಯರ ಹೆಂಡತಿ. ರಂಗಾಚಾರ್ಯರು ಹೈಕೋರ್ಟಿನ ದೊಡ್ಡ ಅಡ್ವೋಕೇಟ. ಇವರ ಕಂಪನಿಗೆ ಮೊದಲಿ ನಿಂದ ಲೀಗಲ್ ಅಡ್ವೈಸರ್. ಗುಮಾಸ್ತೆ ಸುಬ್ಬ ರಾಯರಿಲ್ಲದೆ ಅವರ ಆಫೀಸು ನಡೆಯುವುದಿಲ್ಲ ವಂತೆ. ಆಫೀಸಿನಲ್ಲಿರುವ ನಾಲ್ಕು ಜನ ಗುಮಾ

ಸ್ತರುಗಳೂ ಸುಬ್ಬರಾಯರ ಕೈಕೆಳಗೇ ಕೆಲಸ ಮಾಡುತ್ತಾರೆ. ಚೆಲುವಮ್ಮ ಇದೇ ಸಮಯಕ್ಕೆ ಯಾಕೆ ಬಂದರು? ನಮಗೆ ಬೇಸರವಾದಾಗ ಮನೆಗೆ ಯಾರಾದರೂ ಬರಬಾರದೇ ಅನಿಸುತ್ತೆ. ಆಗ ಯಾರೂ ಬರುವುದಿಲ್ಲ. ಒಂದೊಂದು ಸಲ ಈಗ ಯಾರೂ ಬರುವುದು ಬೇಡ ಅನ್ನುವ ಸಂದರ್ಭದಲ್ಲಿಯೇ ಯಾರಾದರೂ ಬಂದು ಬಿಡುತ್ತಾರೆ. ನಮ್ಮ ಸಂದರ್ಭ ಹೀಗೆ ಅಂತ ಅವರಿಗೆ ಏನು ಗೊತ್ತಿರುತ್ತದೆ?

ನಾನು ಚೆಲುವಮ್ಮನನ್ನು ಕೂಡಿಸಿ ಮಾತನಾಡಿಸಿದೆ. ಅವರ ಮಗಳಿಗೆ ಬೆಂಗಳೂರಿನದೇ ಒಂದು ಗಂಡು ನೋಡಿದಾರಂತೆ. ಹುಡುಗನ ತಾಯಿ ನನಗೆ ಚೆನ್ನಾಗಿ ಗೊತ್ತಿರುವವರು. ಆಕೆ ಒಪ್ಪಿದರೆ ಮದುವೆ ಆದ ಹಾಗೆಯೇ. ಅವರಿಗೆ ನಾನು ಒಂದು ಮಾತು ಹೇಳಿ ಕಲ್ಯಾಣ ಮಾಡಿಸಬೇಕು. ಇದನ್ನು ಹೇಳುವುದಕ್ಕೆ ಆಕೆ ಬಂದಿದ್ದಾರೆ. ಆಗಲಿ ಅಂತ ಅವರು ನನ್ನಿಂದ ಮಾತು ತೆಗೆದುಕೊಂಡರು. ಹೊರಡುವಾಗ ಹೇಳಿದರು: "ನಮ್ಮ ಮನೇಲಿ ಹೇಳಿದರು. ನಿಮ್ಮ ಯಜಮಾನರು ಅನಾಥಾಲಯದ ಬಡಮಕ್ಕಳನ್ನ ತಮ್ಮ ಮಕ್ಕಳು ಅಂತ ತಿಳಕೊಂಡು ಅಷ್ಟೆಲ್ಲ ವಿಲ್ ಬರೆದಿದಾರಂತೆ. ನನ್ನ ಮಗಳನ್ನು ನಿಮ್ಮ ಮಗಳು ಅಂತಲೇ ತಿಳಕೊಂಡು ಗಂಡಿನ ತಾಯೀನ ಒಪ್ಪಿಸಿ ಈ ಮದುವೆ ಮಾಡಿಸಿಕೊಡಬೇಕು."

"ಯಾವ ವಿಲ್ಲು! ಏನು ವಿಷಯ?" ನಾನು ಆಶ್ಚರ್ಯದಿಂದ ಕೇಳಿದೆ.

"ನಿಮ್ಮ ಯಜಮಾನರು ಬರೆದದು, ಯಾಕೆ ನಿಮಗೆ ಗೊತ್ತಿಲ್ಲವೆ?"

"ಇಲ್ಲವಲ್ಲ. ನಿಮಗೆ ಯಾರು ಹೇಳಿದರು?"

"ಅಯ್ಯೋ ಹಾಗಾದರೆ ಸುಳ್ಳಿರಬಹುದು. ನಿಮಗೆ ತಿಳಿಯದ ಹಾಗೆ ಯಾವುದು ನಡೆಯುತ್ತೆ?" ಎಂದು ಆಕೆ ಮಾತನ್ನು ಅಲ್ಲಿಗೇ ನಿಲ್ಲಿಸಿಬಿಟ್ಟರು. ನಾನು ಮತ್ತೆ ಕೇಳಿದಾಗ ಹೇಳಿದರು: "ನಮ್ಮ ಮನೆಯೋರು ಹಾಗೆ ಅಂದಿದ್ದ ಹಾಗಿತ್ತು. ಅವರು ಏನಂದರೋ ನಾನು ಏನು ಅರ್ಥಮಾಡಿಕೊಂಡೆನೋ. ಅಡಿಗೆ ಮನೇಲಿದ್ದೆ. ಸರಿಯಾಗಿ ಕೇಳಿಸಲಿಲ್ಲ."

ಕುಂಕುಮ ಇಟ್ಟುಕೊಂಡು ಆಕೆ ಹೊರಟು ಹೋದರು. ಆದರೆ ನನಗೆ ಈ ಮಾತಿನಿಂದ ಆಶ್ಚರ್ಯಮಾತ್ರವಲ್ಲ. ಆತಂಕವೂ ಆಗಿತ್ತು. ಇವರು ಯಾವುದನ್ನೂ ನನ್ನನ್ನು ಕೇಳಿ ಮಾಡುವುದಿಲ್ಲ. ದೊಡ್ಡ ದೊಡ್ಡ ವ್ಯವಹಾರ ಮಾಡುವಾಗ ಹೆಂಡತಿಯನ್ನೇನು ಕೇಳುವುದು ಅಂತ ಮೊದಲಿನಿಂದ ಇವರ ಭಾವನೆ. ಸುಬ್ಬರಾಯರನ್ನೇ ಕೇಳಬೇಕು ಎಂದು ತೀರ್ಮಾನಿಸಿ ನಾನು ತಕ್ಷಣ ಅಡ್ವೋಕೇಟರ ಆಫೀಸಿಗೆ ಫೋನು ಮಾಡಿದೆ. ಸುಬ್ಬರಾಯರು ಇದ್ದರು. ಇನ್ನು ಅರ್ಧಗಂಟೆಯಲ್ಲಿ ಬರುವುದಾಗಿ ಹೇಳಿದರು.

ಅಷ್ಟರಲ್ಲಿ ಪಾಪು ಮತ್ತು ವಿಜಯರ ಸ್ನಾನವಾಗಿತ್ತು. ನಾನು ಶಾಸ್ತ್ರಕ್ಕಾಗಿ ಅವರ ಜೊತೆ ಕೂಳಿತೆ. ಅವರಿಬ್ಬರೂ ಊಟ ಮಾಡಿದರು. ನನಗೆ ಅನ್ನ ಸೇರಲಿಲ್ಲ. ನಾನು ಕೈತೊಳೆದುಕೊಳ್ಳುವ ಹೊತ್ತಿಗೆ ಸುಬ್ಬರಾಯರು ಬಂದರು. ಅವರ ಸ್ವಭಾವ ನನಗೆ ಗೊತ್ತು. ದೊಡ್ಡ ಲಾಯರ ಆಫೀಸಿನ ಹೆಡ್ ಗುಮಾಸ್ತರು ಯಾವ ಕಾಗದ ಪತ್ರಗಳ ವಿಷಯವನ್ನೂ ಹೊರಗಿನವರಿಗೆ ಹೇಳುವುದಿಲ್ಲ. ಅದರಲ್ಲೂ ನನಗೆ ಇದೇನೂ ಗೊತ್ತಿಲ್ಲ ಅಂತ ತೋರಿಸಿಕೊಂಡರೆ ಅವರು ಬಾಯಿಬಿಡುವುದಿಲ್ಲ. ಆದುದರಿಂದ ನಾನು ಕೇಳಿದೆ: "ನೋಡಿ, ವಿಲ್ ಬರೆಯೋ ವಿಷಯ ನಮ್ಮ ಮನೆಯೋರು ನಾನು ಮಾತನಾಡ್ತಾ ಇದ್ವು. ಅದನ್ನ ಬರೆದ ಮೇಲೆ ಅವರು ತಕ್ಷಣ ಮದರಾಸಿಗೆ ಹೋದರು. ಅದರ ಡಿಟೇಲ್ ನನಗೆ ತಿಳಿಯಲಿಲ್ಲ. ಅನಾಥಾಲಯಕ್ಕೆ ಎಷ್ಟು, ಉಳಿದದ್ದು ಎಷ್ಟು ಅನ್ನೋದು ನಿಮಗೆ ಜ್ಞಾಪಕದಲ್ಲಿದ್ದರೆ ಹೇಳಿ."

"ಅನಾಥಾಲಯಕ್ಕೆ ಮೂರು ಲಕ್ಷ ರೂಪಾಯಿ."

"ಉಳಿದದ್ದು?"

"ಅವರ ತಮ್ಮನ ಮೂರು ಜನ ಗಂಡು ಮಕ್ಕಳಿಗೂ ತಲಾ ಒಂದೊಂದು ಲಕ್ಷ ರೂಪಾಯಿ. ನಿಮ್ಮ ಹೆಸರಿನಲ್ಲಿ ಒಂದು ಲಕ್ಷ. ಎಲ್ಲ ಹಣದ ಅಧಿಕಾರವೂ ಯಜಮಾನರು ಜೀವಂತ ಇರೂತನಕ ಅವರದ್ದೇ. ಅವರು ಗತಿಸಿದರೆ ಈ ಹಣ ಅವರವರಿಗೆ ಬರುತ್ತೆ. ಅನಾ

# ಕಾಲ್ಗೇಟ್ ನಿಂದ ಉಸಿರಿನ ದುರ್ವಾಸನೆಯನ್ನು ನಿವಾರಿಸಿರಿ ಅದರೊಂದಿಗೆ ದಿನವಿಡೀ ದಂತಕ್ಷಯವನ್ನು ಎದುರಿಸಿರಿ !






ಏಕೆಂದರೆ: ಕಾಲ್ಗೇಟ್ ಡೆಂಟಲ್ ಕ್ರೀಮ್ ನಿಂದ ಒಮ್ಮೆ ಹಲ್ಲುಜ್ಜಿದರೆ, ದುರ್ವಾಸನೆಯನ್ನು ಮತ್ತು ದಂತ ಕ್ಷಯವನ್ನು ಉಂಟುಮಾಡುವ ಶೇಕಡಾ 85 ರಷ್ಟು ರೋಗಾಣುಗಳ ನಿವಾರಣೆಯಾಗುತ್ತದೆ.

ವೈಜ್ಞಾನಿಕ ಪರೀಕ್ಷೆಗಳು, ಪ್ರತಿ 10 ಮಂದಿ ಜನರಲ್ಲಿ 7 ಜನರ ಉಸಿರಿನ ದುರ್ಗಂಧವನ್ನು ಕಾಲ್ಗೇಟ್ ಕೂಡಲೇ ನಿಲ್ಲಿಸುತ್ತದೆಂದೂ, ಮತ್ತು 'ಕಾಲ್ಗೇಟ್ ವಿಧಿ'ಯಲ್ಲಿ, ಊಟಮಾಡಿದ ಮೇಲೆ ಕೂಡಲೇ ಹಲ್ಲುಜ್ಜುವುದರಿಂದ ಹಿಂದೆ ಎಂದೂ, ದಂತವಂ-ಜನಗಳ ಇಡೀ ಇತಿಹಾಸದಲ್ಲಿಯೇ, ಕಂಡುಬರದಷ್ಟು ಅಧಿಕ ಜನರಿಗ ಅಧಿಕ ಪ್ರಮಾಣದಲ್ಲಿ ದಂತಕ್ಷಯದ ನಿಗ್ರಹವಾಗುತ್ತದೆಂದೂ ಸಿದ್ಧಗೊಳಿಸಿವೆ. ಕೇವಲ ಕಾಲ್ಗೇಟ್‌ನ ಬಳಿಯಲ್ಲಿ ಈ ಪುರಾವೆ ಇದೆ!

ಎಷ್ಟು ಸೊಗಸಾದ ಪೆಪ್ಪರ್‌ಮಿಂಟ್‌ನ ರುಚಿ! ಕಾಲ್ಗೇಟ್ ಡೆಂಟಲ್ ಕ್ರೀಮ್‌ನಿಂದ ನಿಯಮಿತವಾಗಿ ಹಲ್ಲುಜ್ಜಿಕೊಳ್ಳಲು ಮಕ್ಕಳಿಗೂ ಆನಂದ!

ಅಧಿಕ ಶುಚಿಯಾದ, ದುರ್ಗಂಧರಹಿತವಾದ ಉಸಿರಿಗಾಗಿ ಮತ್ತು ಅಧಿಕ ಬಿಳುಪಾದ ಹಲ್ಲುಗಳಿಗಾಗಿ... ಜಗತ್ತಿನಲ್ಲಿ ಹೆಚ್ಚು ಜನರು ಬೇರೆ ಯಾವುದೇ ಟೂಥ್ ಪೇಸ್ಟ್‌ಗಿಂತ ಅಧಿಕವಾಗಿ ಕಾಲ್ಗೇಟ್‌ನ್ನೇ ಕೊಳ್ಳುತ್ತಾರೆ.




ಹಲ್ಲುಜ್ಜಲು ನಿಮಗೆ ಟೂಥ್ ಪೌಡರ್ ಬೇಕೆಂದಿದ್ದರೆ – ಈ ಎಲ್ಲ ಪ್ರಯೋಜನಗಳನ್ನು ಕಾಲ್ಗೇಟ್ ಟೂಥ್ ಪೌಡರಿನಿಂದ ನೀವು ಪಡೆಯಬಹುದು.

ಥಾಲಯದ್ದಂತೂ ಈಗಲೇ ಸಂದಾಯವಾಗಿ ಹೋಗಿದೆ. ನಿಮಗೆ ಒಂದು ಲಕ್ಷ ರೂಪಾಯಿ, ಈ ಬಂಗಲೆ ಬರುತ್ತೆ. ಬ್ಯಾಂಕಿನವರು ಒಂದು ಲಕ್ಷಕ್ಕೆ ಬಡ್ಡಿ ಅಂದರೆ ವರ್ಷಕ್ಕೆ ಏಳು ಸಾವಿರ ರೂಪಾಯಿಯನ್ನು ನೀವು ಇರೂತನಕ ಸಂದಾಯ ಮಾಡಬೇಕು. ಆದರೆ ಆ ಒಂದು ಲಕ್ಷ ರೂಪಾಯಿ ಅಸಲನ್ನು ನೀವು ಖರ್ಚು ಮಾಡುವಹಾಗಿಲ್ಲ. ನಿಮ್ಮ ಮರಣಾನಂತರ ಆ ಹಣ ರಾಮಕೃಷ್ಣಾಶ್ರಮಕ್ಕೆ ಸೇರುತೆ. ಈ ಬಂಗಲೆ ಮಾತ್ರ ಅವರ ತಮ್ಮ ಕೃಷ್ಣರಾಯರಿಗೆ, ಅದೂ ನಿಮ್ಮ ಕಾಲಾನಂತರ."

"ಮುಂದೆ ?" ನನ್ನ ಮನಸ್ಸಿನಲ್ಲಿ ಆಗುತ್ತಿದ್ದ ಭಾವನೆಗಳನ್ನು ಸ್ವಲ್ಪವೂ ವ್ಯಕ್ತಪಡಿಸದೆ ಕೇಳಿದೆ.

"ಅಷ್ಟೇ. ಅವರ ತಮ್ಮನ ಮಗಳು ಶ್ರೀಮತಿ ಅನ್ನುವವರಿಗೆ ಹತ್ತು ಸಾವಿರ ರೂಪಾಯಿ ಕೊಟ್ಟಿದ್ದಾರೆ"

"ವಿಲ್ಲಿನಲ್ಲಿ ಇನ್ನೇನು ಬರದಿದ್ದಾರೆ ?"

"ಇನ್ನೇನೂ ಇಲ್ಲ. ಈ ಆಸ್ತಿ ಎಲ್ಲ ಪೂರ್ತಿ ಸ್ವಯಾರ್ಜಿತ. ಇದರಲ್ಲಿ ಒಂದು ಕಾಸೂ ನನಗೆ ಪಿತ್ರಾರ್ಜಿತವಾಗಿ ಬಂದದ್ದಲ್ಲ. ನನಗೆ ಒಂದೂ ಮಕ್ಕಳಿಲ್ಲ. ಆದುದರಿಂದ ನನ್ನ ಆಸ್ತಿಯನ್ನು ಈ ವಿಲ್ಲಿನಲ್ಲಿ ಕಾಣಿಸಿರುವಂತೆ ಬರೆಯುವ ಪೂರ್ಣ ಅಧಿಕಾರ ನನಗಿದೆ. ಈಗ ಮೂರು ವರ್ಷದಲ್ಲಿ ಒಂದು ಸಲ ನನಗೆ ಹಾರ್ಟ್ ಅಟ್ಯಾಕ್ ಆಗಿತ್ತು. ಇನ್ನು ನಾನು ಎಷ್ಟು ದಿನ ಇರುತ್ತೇನೆಯೋ ಗೊತ್ತಿಲ್ಲ. ಆದುದರಿಂದ ಈಗಲೇ ಇದನ್ನ ಸ್ವ ಇಚ್ಛೆಯ ಮೇರೆಗೆ ಆತ್ಮ ಸಂತೋಷ ದಿಂದ ಬರೆದು ರಿಜಿಸ್ಟರ್ ಸಹ ಮಾಡಿಸಿರುತ್ತೇನೆ ಅಂತ ಬರೆದಿದ್ದಾರೆ."

"ರಿಜಿಸ್ಟರ್ ಕೂಡ ಆಯಿತೆ ?"

"ಹೂಂ."

ಇನ್ನು ನಾನು ಯಾವ ಮಾತೂ ಆಡುವಂತೆ ಇರಲಿಲ್ಲ. ಅಷ್ಟರಲ್ಲಿ ಸುಬ್ಬರಾಯರಿಗೆ ಯಾಕೋ ಅನುಮಾನ ಬಂದಿರಬಹುದು. ಅವರು ಹೇಳಿದರು : "ಅಮ್ಮ, ನೀವು ಕೇಳಿದಿರಿ ಅಂತ, ಅದೂ

ರಾಯರ ಯಜಮಾಂತಿ ಅಂತ ನಾನು ಇದೆಲ್ಲ ಹೇಳಿದೆ. ಇನ್ನು ಯಾರು ಕೇಳಿದರೂ ಹೇಳುಲ್ಲ. ನೀವು ನನ್ನನ್ನ ಕರೆಸಿದ್ದನ್ನ, ನಾನು ಈಗ ಹೇಳಿದ್ದನ್ನ ನೀವು ದಯವಿಟ್ಟು ಯಾರ ಕೈಲೂ ಹೇಳಬಾರದು."

"ಆಗಲಿ"—ಎಂದು ಹೇಳಿ ಅವರನ್ನು ಕಳಿಸಿದೆ.

ಸುಬ್ಬರಾಯರು ಹೋದ ಮೇಲೆಯೂ ನಾನು ವರಾಂಡದ ಕುರ್ಚಿಯ ಮೇಲೆಯೇ ಕೂತಿದ್ದೆ. ಪಾಪು ಮತ್ತು ವಿಜಯ ರೂಮಿನಲ್ಲಿದ್ದರು. ನಮ್ಮ ಮಾತು ಅವರಿಗೆ ಕೇಳಿಸಿಲ್ಲ. ಪಾಪು ಆಗ ಕಾಗದ ಬರೆದಾಗ ನಾನು ಅದನ್ನು ಇವರಿಗೆ ತೋರಿಸಿರಲಿಲ್ಲ. ನನಗೆ ಬಂದ ಕಾಗದವನ್ನು ಇವರು ಎಂದೂ ತೆಗೆದುಕೊಂಡು ಓದುವುದಿಲ್ಲ. ಇದನ್ನು ಸಹ ಅವರು ಓದಿಲ್ಲ ಅಂತ ನನಗೆ ನಂಬಿಕೆ ಇದೆ. ಅಲ್ಲದೆ ಈ ಕಾಗದವನ್ನು ನಾನು ಬೇರೆ ಪೆಟ್ಟಿಗೆಯಲ್ಲಿ ಸೀರೆಯ ಮಡಿಕೆಯಲ್ಲಿ ಇಟ್ಟುಬಿಟ್ಟಿದ್ದೆ. ಆದರೂ ಇವರು ಹೀಗೆ ವಿಲ್ಲು ಬರೆದಿದ್ದಾರೆ. ಅಂದರೆ ಇವರ ಅಭಿಪ್ರಾಯವೇನಿತ್ತು? ಮಗು ಹುಟ್ಟಿದಾಗಲೇ ನಾವು ಶಾಸ್ತ್ರ ಮಾಡಿಕೊಳ್ಳಬೇಕಾಗಿತ್ತೋ ಏನೋ! ಇವರ ವಿಲ್ಲಿನಲ್ಲಿ ತಮ್ಮ, ತಮ್ಮನ ಮೂರು ಜನ ಗಂಡುಮಕ್ಕಳು, ಒಬ್ಬಳು ಹೆಣ್ಣುಮಗಳು ಇದ್ದಾರೆ. ಅರ್ಧ ಗಂಟು ಅನಾಥಾಲಯಕ್ಕೆ. ನನಗೆ ಒಂದು ಲಕ್ಷದ ಬಡ್ಡಿಮಾತ್ರ ಜೀವನಕ್ಕೆ. ಅಸಲಿನ ಮೇಲೆ ನನ್ನ ಅಧಿಕಾರವಿಲ್ಲ. ವಿಲ್ ಬರೆಯುವಾಗ ಪಾಪುವಿನ ಮಕ್ಕಳ ನೆನಪೇ ಬರಲಿಲ್ಲವೇ ಇವರಿಗೆ?

ಒಂದು ಗಂಟೆಯಾದರೂ ನಾನು ಅಲ್ಲಿಯೇ ಕೂತಿದ್ದೆ. ಪಾಪುವೇ ಹೊರಗೆ ಬಂದು ಸುಬ್ಬರಾಯ ಕುಳಿತಿದ್ದ ಕುರ್ಚಿಯ ಮೇಲೆ ಕುಳಿತಳು. ಅವಳೇ ಮಾತನ್ನು ಶುರುಮಾಡಿದಳು: "ಅಕ್ಕ, ಊರಿನಲ್ಲಿ ಹುಡುಗರನ್ನ ನೋಡಿಕೊಳ್ಳೋರು ಇಲ್ಲ. ವಿಜೀಗೆ ಸ್ಕೂಲು ಹೋಗುತ್ತೆ. ನಾಳೆ ಬೆಳಿಗ್ಗೆ ನಾನು ಪ್ರಯಾಣ ಮಾಡ್ತೀನಿ. ಮಗೂನ ಈಗಲೇ ಬಿಟ್ಟು ಹೋಗಲೇ ಅಥವಾ ಹಾಲು ನಿಲ್ಲಿಸಿದ ಮೇಲೆ ಕಳಿಸಲೇ? ನೀವು ಶಾಸ್ತ್ರ ಯಾವಾಗ ಮಾಡಿಕೊಂಡರೂ ಸರಿ."

ಅರ್ಧಗಂಟೆ ಸುಮ್ಮನಿದ್ದು ನನ್ನಲ್ಲಿಯೇ ಯೋಚಿಸಿ ನಾನು ಹೇಳಿದೆ: "ಪಾಪು, ಎಲ್ಲ ನಾವು ಯೋಚನೆ ಮಾಡೋಹಾಗೆಯೇ ಆಗಿಲ್ಲ. ದತ್ತುಶಾಸ್ತ್ರ ಬ್ಯಾಡ. ಮಗೂನ ನೀನು ಕರಕೊಂಡು ಹೋಗು."

"ಅಂದರೆ ನಿನಗಿನ್ನೂ ಸಿಟ್ಟು ಹೋಗಿಲ್ಲವೆ?"

"ನಾನು ಸಿಟ್ಟಿನಿಂದ ಹೇಳ್ತಿಲ್ಲ ದತ್ತು ಮಾತು ಬ್ಯಾಡ. ನಿನ್ನ ಉಳಿದ ಮೂರು ಮಕ್ಕಳು ಹ್ಯಾಗೆ ನನ್ನೋವೋ ಹಾಗೆ ಇದೂ ನನ್ನ ಮಗುವೇ. ನಿನ್ನಾಣೆಗೂ ನನಗೆ ಸ್ವಲ್ಪವೂ ಕೋಪ ವಿಲ್ಲ. ನನ್ನನ್ನ ಇದಕ್ಕಿಂತ ಹೆಚ್ಚಾಗಿ ಏನೂ ಕೇಳಬೇಡ. ಹಾಲು ಕುಡೀತಾ ಇರೂ ಮಗು. ನಾಳೆ ಕರಕೊಂಡೇ ಹೋಗು. ಕಾರು ಕಳುಸ್ತೀನಿ. ಮಕ್ಕಳಿಗೆ ರಜ ಬಂದ ಮೇಲೆ ಬಾ!"

ಪಾಪು ಯಾಕೋ ಕುತ್ತಿಗೆಯನ್ನು ಬಾಗಿಸಿಕೊಂಡಳು. : ನಾನು ಸಹ ತಲೆ ಎತ್ತಲಿಲ್ಲ. *



ಕುದಿಯುವ ನೀರಿನಲ್ಲಿ ನಮ್ಮ ಪ್ರತಿಬಿಂಬ ಹೇಗೆ ಕಾಣಿಸುವುದಿಲ್ಲವೋ ಹಾಗೆ ಕ್ರೋಧದಲ್ಲಿದ್ದಾಗ ನಮ್ಮ ಕಲ್ಯಾಣ ಎಲ್ಲಿ ಅಡಗಿದೆ ಎಂಬುದು ತಿಳಿಯುವುದಿಲ್ಲ.

—ಪ್ರೇಮಚಂದ

ನಾವು ಬಂಗಾರವನ್ನು ಒರೆಗಲ್ಲಿಗೆ ಹಚ್ಚುತ್ತೇವೆ. ಬಂಗಾರ ನಮ್ಮನ್ನು ಒರೆಗೆ ಹಚ್ಚುತ್ತದೆ.

—ಥಾಮಸ್ ಫುಲರ್

# ಪಾಲನೆ ಪೋಷಣೆ ಸರಿಯಾಗಿ ಮಾಡಿರಿ
# ಮಕ್ಕಳಿಗೆ ಬೋರ್ನ್‌ವಿಟಾ ಕೊಡಿರಿ!

ಬೆಳೆಯುತ್ತಿರುವ ಮತ್ತು ಕಲಿಯುತ್ತಿರುವ ಮಕ್ಕಳಿಗೆ ಸರಿಯಾದ ಆಹಾರದಿಂದ ಪ್ರಾಪ್ತವಾಗುವ ಶಕ್ತಿ [illegible]. ಅವರು ದಿನಾಲೂ ಎಷ್ಟು ಶಕ್ತಿ [illegible] ಅಷ್ಟನ್ನು [illegible]. ಅವರ [illegible] ಮತ್ತು [illegible] ಶಕ್ತಿಯ ಅವಶ್ಯಕತೆ ಇದೆ. ಮಕ್ಕಳಲ್ಲಿ ಸರಿಯಾದ ಶಕ್ತಿ [illegible] ಮಾಡಲು ಅವರಿಗೆ ಪ್ರತಿದಿನವೂ ಬೋರ್ನ್‌ವಿಟಾ ಕೊಡಬೇಕು. ಬೋರ್ನ್‌ವಿಟಾದಿಂದ ಮಕ್ಕಳು ಆರೋಗ್ಯಶಾಲಿಗಳಾಗಿ, [illegible]. ಸ್ವಾದಿಷ್ಟ ಹಾಗೂ ಪೌಷ್ಟಿಕ ಬೋರ್ನ್‌ವಿಟಾ [illegible] ಹಾಲು, ಮಾಲ್ಟ್ ಮತ್ತು [illegible]




ಶಕ್ತಿ, ಉತ್ಸಾಹ ಮತ್ತು ಸ್ವಾದಕ್ಕಾಗಿ- ಕ್ಯಾಡ್‌ಬರೀಸ್ ಬೋರ್ನ್‌ವಿಟಾ!



ದೂರ ದೂರದ ರೋಗಿಗಳು
ಬರುವಂತಾದುದರ ರಹಸ್ಯ
ಕೊನೆಗೆ ತಿಳಿಯಿತು.

# ನಗಿಸಿದ ಹಾಡಿನ ಕಿನ್ನರಿ

ರಾ. ಶಿ.

ಕೆಲಸವಿಲ್ಲದ ಡಾಕ್ಟರು ಖಾಲಿ ಶೀಷೇನ ತೊಳೀತಾನೆ ಎಂದು ಹೊಸ ಗಾದೆಯನ್ನು ಕಟ್ಟಬಹುದು. ನನ್ನ ಅನುಭವದಿಂದ ಇದನ್ನು ಹೇಳುತ್ತಿದ್ದೇನೆ. ಏಕೆಂದರೆ ಮೊದಲು ಮೊದಲು ದಿನಾಲೂ ಬೆಳಿಗ್ಗೆ ನಾಲ್ಕು ತಾಸು, ಸಂಜೆ ನಾಲ್ಕು ತಾಸು ದವಾಖಾನೆಯಲ್ಲಿರುತ್ತಿದ್ದೆ. ಅಷ್ಟೂ ಹೊತ್ತಿನಲ್ಲಿ ಚಿಕಿತ್ಸೆಗೆ ಬರುತ್ತಿದ್ದವರ ಸಂಖ್ಯೆ ಏಳೋ ಎಂಟೋ. ಅವರಲ್ಲೂ ಜಂತಿನ ಪುಡಿ ಕೊಡಿ ಡಾಕ್ಟರೇ! ಸ್ವಲ್ಪ ಐಯೋಡೀನ್ ಹಚ್ಚೀರಾ? ಇತ್ಯಾದಿ ಚುಟುಕಾ ವಿಷಯಗಳಿಗಾಗಿ ಬರುವವರೇ ಹೆಚ್ಚು. ಹಾಗಾಗಿ ಬೇಕಾದಷ್ಟು ವಿರಾಮವಿರುತ್ತಿತ್ತು. ಆಗ ಹಳೇ ಶೀಷೆಗಳನ್ನು ಸೀಗೆಕಾಯಿ ಪುಡಿಹಾಕಿ ಚೆನ್ನಾಗಿ ತೊಳೆದು ನಂತರ ಗಲಬರಿಸಿಡುತ್ತಿದ್ದೆ. ಏನಿಲ್ಲ ಅಂದರೂ ಕೊಬ್ಬರಿ ಎಣ್ಣೆ ಹಾಕಿಟ್ಟಿದ್ದ ಬಾಟಲನ್ನು ತೊಳೆಯುವುದಕ್ಕೆ ಸುಮಾರು ಮುಕ್ಕಾಲು ಗಂಟೆ ಹಿಡಿಯುತ್ತಿತ್ತು. ಎಂತಹ ಮಚಕಲು ಶೀಷೆಯನ್ನಾದರೂ ಬೆಳ್ಳಂಬೆಳ್ಳಗೆ ಹೊಳೆಯುವ ಹಾಗೆ ತೊಳೆದಿಡಲು ಕಲಿತಿದ್ದೆ.



ಯಾಕೆ ಹೇಳುಕ್ಕೆ ಬಂದೆ ಎಂದರೆ, ಕೆಲವು ವರ್ಷಗಳಾದನಂತರ ಖಾಲಿ ಶೀಷೇನ ತೊಳೆಯುಕ್ಕೆ ಕೂರುವ ಹಾಗಾಗಲಿಲ್ಲ. ಗುಂಪುಗಟ್ಟಿಕೊಂಡು ರೋಗಿಗಳು ಬರದೇ ಇದ್ದರೂ ಬಂದ ರೋಗಿಗಳ ಚಿಕಿತ್ಸೆಯನ್ನು ಸಾವಧಾನವಾಗಿ ಮಾಡುವುದರಲ್ಲಿ ನಿಖರಪಡಿಸಿದ್ದ ವೇಳೆಯು ಮೀರುತ್ತಿತ್ತು.

ಆದರೂ ದವಾಖಾನೆಗೆ ಬರುತ್ತಿದ್ದವರೆಂದರೆ, ಆಸ್ಪತ್ರೆಯಲ್ಲಿ ಕೆಲಸ ಮಾಡುತ್ತಿದ್ದಾಗ ಪರಿಚಯವಾದ ಕೆಲವರು, ಆಜೂಬಾಜು ಮನೆಗಳಲ್ಲಿರುವವರು ಮತ್ತು ಸಹಪಾಠಿಗಳಾಗಿದ್ದು ಈಗ ಬೇರೆ ಊರಿನಲ್ಲಿ ಡಾಕ್ಟರುಗಳಾಗಿರುವವರ ಬೆಂಗಳೂರಿನಲ್ಲಿರುವ ನೆಂಟರಿಷ್ಟರು ಇಷ್ಟೇ!

ಹೊಸ ಮುಖವೊಂದು ಒಂದು ಬೆಳಿಗ್ಗೆ ಕಾಣಿಸಿಕೊಂಡಿತು. ಸುಮಾರು ಇಪ್ಪತ್ತೈದು, ಇಪ್ಪತ್ತೆಂಟರ ಪ್ರಾಯದ ಹೆಣ್ಣು ಮಗಳು ಆಕೆ. ತುಸು ಕಪ್ಪಾಗಿದ್ದರೂ ಮುಖ ಕಳೆಯಾಗಿತ್ತು.

ಬಲು ವಿನಯವಂತೆ. ತಲೆ ಎತ್ತಿ ಮಾತನಾಡು ತ್ತಿರಲಿಲ್ಲ. ಮೆದು ದನಿಯಲ್ಲಿ ತನ್ನ ಬೇನೆಯ ವಿವರಗಳನ್ನು ಬೇಗ ತಿಳಿಸಿ, ಔಷಧಿಯನ್ನು ತೆಗೆದುಕೊಂಡು, ಹಣಕೊಟ್ಟು, ಹೊರಟು ಹೋದಳು. ಆ ಮೇಲಿನಿಂದ, ಜಡು ಬಿದ್ದಾಗ ಲೆಲ್ಲ ನನ್ನಲ್ಲಿಗೆ ಬಂದು ಚಿಕಿತ್ಸೆಪಡೆದು ಹೋಗು ತ್ತಿದ್ದಳು. ಅಲಮೇಲು ಅಂತ ಅವಳ ಹೆಸರು ಎಂದುಕೊಳ್ಳೋಣ. ಒಮ್ಮೊಮ್ಮೆ ತಾಯಿಯೊಂ-ದಿಗೆ ಬಂದು ಹೋಗುತ್ತಿದ್ದಳು. ಕೆಮ್ಮು, ನೆಗಡಿ, ಉಗುರುಸುತ್ತು, ಬಾಯಿಹುಣ್ಣು ಇಂತಹ ಸಣ್ಣ ಪುಟ್ಟ ಬೇನೆಗಳ ಚಿಕಿತ್ಸೆಗೇ ಆಕೆಯು ತಿಂಗ ಳಿಗೋ ಮೂರು ತಿಂಗಳಿಗೋ ಒಮ್ಮೆ ಬಂದು ನಾಲ್ಕೈದು ದಿನಗಳ ಚಿಕಿತ್ಸೆ ಪಡೆಯುತ್ತಿದ್ದಳು.

*

ಒಂದು ದಿನ ಕೋರೆ ರುಮಾಲಿನವನೊಬ್ಬ ದವಾಖಾನೆಗೆ ಬಂದ. ನಲವತ್ತರ ಪ್ರಾಯದ ಧಾರವಾಡದ ಆತನಿಗೆ ರಕ್ತದ ಒತ್ತಡವಿತ್ತು. ದೀರ್ಘಕಾಲದ ಚಿಕಿತ್ಸೆಯನ್ನು ಪಡೆಯಬೇಕು, ಪಥ್ಯವಾಗಿರಬೇಕು, ಎರಡು ಮೂರು ತಿಂಗಳು ಬೆಂಗಳೂರಿನಲ್ಲಿ ಚಿಕಿತ್ಸೆಮಾಡಿಸಿಕೊಳ್ಳಬೇಕಾದ ಪ್ರಮೇಯವೇನೂ ಇಲ್ಲ, ವಿವರಗಳನ್ನೆಲ್ಲಾ ಬರೆದುಕೊಡುತ್ತೇನೆ, ಧಾರವಾಡಕ್ಕೇ ಹಿಂದಿ ರುಗಿ ಚಿಕಿತ್ಸೆಮಾಡಿಸಿಕೊಳ್ಳಬಹುದು ಎಂದೆ.

"ಡಾಕ್ಟರ್‌ಸಾಹೇಬ್ರ, ಅಲ್ಲಿಂದ ಬಂದೀನಿ, ಇಲ್ಲೇ ಹೋಟಲಿನಾಗ ಇದ್ದು ಗುಣಮಾಡಿ ಕೊಂಡೇ ಹೋಗಾಂವನ್ರೀ" ಎಂದು ಆತ ಹೇಳಿದ.

ನನಗೆ ಆಶರ್ಯ. ದವಾಖಾನೆ ತೆಗೆದು ಇನ್ನೂ ಮೂರು ನಾಲ್ಕು ವರ್ಷಗಳೂ ಆಗಿಲ್ಲ. ಬೆಂಗಳೂರಿನಲ್ಲಿ ಕೂಡ ನನ್ನ ಹೆಸರು ಕೇವಲ ಕೆಲವು ಮಂದೀಗೆ ಮಾತ್ರ ತಿಳಿದಿರೋದು. ಅಂತಹುದರಲ್ಲಿ ಧಾರವಾಡದವ ನನ್ನ ಹತ್ತಿರ ದೀರ್ಘ ಚಿಕಿತ್ಸೆಗೆ ಬಂದ ಎಂದರೆ? ನನ್ನ ಕೀರ್ತಿ ಧಾರವಾಡದ ತನಕ ಹಬ್ಬಿಬಿಟ್ಟೇ? ಎಂದು ಆಶ್ಚರ್ಯವಾಯಿತು. ಇದರಲ್ಲಿ ಏನೋ ಮರ್ಮ ವಿದೆ. ನನ್ನ ಕೀರ್ತಿಯ ದೆಸೆಯಿಂದ ಇವ ನನ್ನ ಬಳಿಗೆ ಬಂದಿಲ್ಲ ಎಂದು ಮನಸ್ಸಿಗೆ ಅನ್ನಿಸಿದರೂ ಬಂದನಲ್ಲಾ ಎನ್ನುವುದು ನನ್ನನ್ನು ಭುಜ ಕುಣಿಸುವಂತೆ ಮಾಡಿತು, ಒಂದೆರಡು ದಿನ, ಯಾರೂ ನೋಡದೆ ಇದ್ದಾಗ.

ಆರೇಳು ತಿಂಗಳಾಗಿರಬಹುದು. ಮದ್ರಾಸ್ ಕಡೆಯಿಂದ ಬಂದಿದ್ದ ಚೆಟ್ಟಿಯಾರೊಬ್ಬ ದವಾ ಖಾನೆಗೆ ಬಂದು "ನೀವೇನಾ ಡಾಕ್ಟರು?" ಎಂದು ಕೇಳಿದ. ಪರಸ್ಪರ ಪರಿಚಯವಾದ ಮೇಲೆ ಆತ ನಿಗೆ ಹೊಟ್ಟೆನೋವು ಬರುತ್ತಿತ್ತೆಂದೂ ಮದ್ರಾ ಸಿನ ಡಾಕ್ಟರುಗಳು ಆಪರೇಷನ್ ಸಲಹೆ ಮಾಡಿದ್ದರೆಂದೂ ತಿಳಿಯಿತು. ಆತ ತಂಬಾಕು ವ್ಯಾಪಾರಸ್ಥ. ಲಕ್ಷಾಂತರ ರೂಪಾಯಿನ ವಹಿ ವಾಟು ನಡೆಸುತ್ತಿದ್ದ. ಎಂಟೂ ಬೆರಳುಗಳಿಗೆ ಹಾಕಿದ್ದ ಉಂಗುರಗಳೇ ಅವನು ಷೋಕಿ ಆಸಾಮಿ ಎಂದು ಬೆರಳುಮಾಡಿ ತೋರಿಸುತ್ತಿ-ದ್ದುವು.

ಮೂರು ವಾರ ನನ್ನ ಹತ್ತಿರ ಚಿಕಿತ್ಸೆಯನ್ನು ಪಡೆದು, ಆ ತಿಂಗಳ ನನ್ನ ಅಗತ್ಯವನ್ನೆಲ್ಲಾ ಪೂರೈಸಿದ.

ಮದ್ರಾಸಿನ ಚೆಟ್ಟಿಯಾರರ ತನಕ ನನ್ನ ಕೀರ್ತಿ ಹಬ್ಬಿತೇ? ದೇವರು ದಯಾಮಯ, ನನ್ನ ಯೋಗ್ಯತೆಯನ್ನು ಅವನಾದರೂ ಕಂಡು ಹಿಡಿದ ನಲ್ಲಾ! ಎಂದು ತುಸು ಹೆಮ್ಮೆಪಟ್ಟುಕೊಂಡೆ.

ಒಂದೆರಡು ವರ್ಷಗಳಾದ ಮೇಲೆ ಕಾವೇರಿ ಪಟ್ಟಣದಿಂದ ಗೌಂಡರೊಬ್ಬರು ಚಿಕಿತ್ಸೆಗೆ ಬಂದರು. ಸೇಂದಿ ಕಂಟ್ರಾಕ್ಟ್ ಮಾಡುತ್ತಿದ್ದ ಆ ಯುವಕ ಶ್ರೀಮಂತನಿಗೆ ಆಗಿಂದಾಗ್ಗೆ ತಲೆ ನೋವು ಬರುತ್ತಿತ್ತು, ಭೀಷ್ಮ ನೆಗಡಿ ಹಿಡಿದಿತ್ತು. ಶ್ರೀಮಂತನಿಗೆ ದೀರ್ಘಾವಧಿ ಬೇನೆ ಬಂದರೆ ಕೇಳಬೇಕೇ? ಮದ್ರಾಸು, ಬೊಂಬಾಯಿ, ಎಲ್ಲ ಕಡೆಗೂ ಹೋಗಿಬಂದಿದ್ದ. ದೇಶದಲ್ಲೆಲ್ಲಾ ಸುಪ್ರಸಿದ್ಧರಾಗಿದ್ದ ಡಾಕ್ಟರುಗಳು ಬರೆದು ಕೊಟ್ಟ ಸಲಹಾ ಚೀಟಿಗಳನ್ನು ತೆಕೆ ತೆಕ್ಕೆಯಾಗಿ ನನ್ನ ಮುಂದಿರಿಸಿದ.

ಕಿವಿ, ಮೂಗು, ಗಂಟಲುಗಳ ಚಿಕಿತ್ಸೆಯನ್ನು ನಾನು ಅಭ್ಯಾಸ ಮಾಡಿದ್ದೆನಾದರೂ ಕೇವಲ ಬೆಂಗಳೂರಿನಲ್ಲೇ ಕಲಿತುಕೊಂಡಿದ್ದು, ವಿಲಾಯಿತಿಗೆ ಹೋಗಿ ಕಲಿತಿರಲಿಲ್ಲ. ಅಂದ ಮೇಲೆ ಒಂದು ತರಹಾ ನೇಟಿವ್ ಡಾಕ್ಟರೇ ನಾನು!

ಅಂತಹವನ ಬಳಿಗೆ ಈ ಭಾರಿ ಶ್ರೀಮಂತ ಬರುವುದೆಂದರೆ? ದೇವರ ಕೃಪೆಯಿಲ್ಲದೆ ಮತ್ತೇನು?

ನನ್ನ ಕೈಲೇ ಅವ ಆಪರೇಷನ್ ಮಾಡಿಸಿಕೊಂಡ. ಕೊಟ್ಟ ಕಹಿ ಔಷಧಗಳನ್ನೆಲ್ಲಾ ಕಿಮುಕ್ ಕಮುಕ್ ಅನ್ನದೆ ಕುಡಿದ. ಬೆಂಗಳೂರಿನ ಬಡಾವಣೆಯೊಂದರಲ್ಲಿ ಪ್ರತ್ಯೇಕವಾಗಿ ಮನೆ ಮಾಡಿಕೊಂಡಿದ್ದ. ಊರಿನಿಂದ ಅಡಿಗೆಯವನನ್ನೂ ಜವಾನನನ್ನೂ ಕರೆಸಿಕೊಂಡಿದ್ದ.

ಮೂರು ತಿಂಗಳು ಬೇಸಿಗೆ ಕಾಲದಲ್ಲಿ ನಮ್ಮೂರಿನಲ್ಲೇ ಇದ್ದ. ಆ ವರ್ಷದ ನನ್ನ ಅಗತ್ಯಗಳೆಲ್ಲವನ್ನೂ ಆತ ತುಂಬಿಹೋದ.

ಇನ್ನೂ ೩೫-೩೬ ರ ಪ್ರಾಯ ನನಗೆ. ಧಾರವಾಡ ಆಯಿತು, ಮದ್ರಾಸಾಯಿತು, ಕಾವೇರಿ ಪಟ್ಟಣ ಆಯಿತು. ಎಲ್ಲೆಲ್ಲೆಲ್ಲಾ ನನ್ನ ಕೀರ್ತಿ ಹಬ್ಬಿದೆ ಎಂದು ಖುಷಿಯಾದರೂ ಬೆಂಗಳೂರಿನ ಜನ ಯಾಕೆ ಬೇನೆ ಬಿದ್ದಾಗ ನನ್ನ ಹತ್ತಿರ ಚಿಕಿತ್ಸೆಗೆ ಬರುವುದಿಲ್ಲ? ಇತರ ನುರಿತ ಡಾಕ್ಟರುಗಳ ಹತ್ತಿರ ಹೋಗಿಬಿಡ್ತಾರಲ್ಲ ಎಂದು ಖಿನ್ನನೂ ಆಗುತ್ತಿದ್ದೆ. ಹಿತ್ತಲ ಗಿಡ ಮದ್ದಲ್ಲ ಎಂದ ಹಾಗೆ ಊರ ಹುಡುಗ ಒಳ್ಳೆಯ ಮದ್ದನ್ನು ಹೇಗೆ ಕೊಡಬಲ್ಲ ಎಂದು ಊರಜನ ನನನ್ನು ಗಣಿಸಿಗೆ ತಂದುಕೊಂಡಿಲ್ಲ ಎಂದುಕೊಂಡೆ.

ಒಂದು ಚೈತ್ರ ಕಳೆದು, ಇನ್ನೊಂದು ಚೈತ್ರ ಬಂತು. ಅದರ ಹಿಂದೆಯೇ ಭರ್ಜರಿ ಗಡ್ಡ ಬೆಳೆಸಿದ್ದ ಮೂವತ್ತರ ಪ್ರಾಯದ ಲಟ್ಟು ಇಸ್ಲಾಮಿಯನೊಬ್ಬ ದವಾಖಾನೆಗೆ ಬಂದ.

ನನಗೆ ತಿಳಿದ ಉರ್ದುವಿನಲ್ಲಿ ಅವನನ್ನು ಸ್ವಾಗತಿಸಿದೆ.

ತಲೆ ತಲೆ ಅಲ್ಲಾಡಿಸಿ ಅವ ನಂತರ ಹೇಳಿದ. "ಎನಕ್ ಉರ್ದು ತೆರಿಯದು! ವುಂಗಳುಕ್ಕ್ ತಮಿಳ ತೆರಿಯುಮೋ?" ಎಂದು. ["ನನಗೆ ಉರ್ದು ಬಾರದು, ನಿಮಗೆ ತಮಿಳು ಬರುತ್ತೇ" ಎಂದು]

ಎಂತಹ ಕುಚೋದ್ಯದ ಪ್ರಶ್ನೆ. ನನಗೆ ತಮಿಳು ಬರುತ್ತೇ ಅಂತ ಕೇಳ್ತಾನಲ್ಲ! ಕನ್ನಡದ ರಾಜಧಾನಿಯಾದ ಬೆಂಗಳೂರಿನಲ್ಲಿ ಕನ್ನಡದವನೊಬ್ಬ ಬಾಳಬೇಕಾದರೆ, ಕನ್ನಡ ಒಂದು ಬಿಟ್ಟು ಮಿಕ್ಕೆಲ್ಲ ಭಾಷೆಗಳನ್ನೂ ಕಲಿತಿರಲೇಬೇಕು! ಅದೂ ಡಾಕ್ಟರಾಗಿ ಬಾಳಬೇಕಾದರೆ ಹರಕು ಮುರುಕಾದರೂ ಪರವಾಗಿಲ್ಲ ತಮಿಳು, ತೆಲುಗು, ಹಿಂದಿ ಕಲಿತಿರಲೇಬೇಕು. ಇಷ್ಟೂ ಗೊತ್ತಿಲ್ಲವಲ್ಲ ಈ ಗಡ್ಡದವನಿಗೆ ಎನ್ನಿಸಿತು.

ತಮಿಳಿನಲ್ಲೇ ಅವನ ಸುತ್ತ ಬಲೆ ಬೀಸಿದೆ. ಆಗಿಂದಾಗ್ಗೆ ಅವನಿಗೆ ಉಬ್ಬಸ ಬರುತ್ತಿತ್ತೆಂದೂ ಹವಾ ಬದಲಾವಣೆಗೆ ಬೆಂಗಳೂರಿಗೆ ವಾಣಿಯಂಬಾಡಿಯಿಂದ ಬಂದಿದ್ದನೆಂದೂ, ಅವನಿಲ್ಲಿರುವ ತನಕ ಅವನ ಯೋಗಕ್ಷೇಮವನ್ನು ನಾನು ನೋಡಿಕೊಳ್ಳಬೇಕೆಂದೂ ಅವ ಹೇಳಿದ.

ಆಗಲಿ ಎಂದು ನಾನು ಸಂತೋಷದಿಂದ ಸಮ್ಮತಿಸಿದಾಗ ನೂರು ರೂಪಾಯಿಯ ನೋಟೊಂದನ್ನು ನನ್ನ ಕೈಲಿಟ್ಟು. ನನ್ನ ಲೆಕ್ಕಕ್ಕೆ ಇದನ್ನು ಮುಂಗಡ ಎಂದು ಜಮಾ ಮಾಡಿಕೊಳ್ಳಿ ಎಂದ.

ಬೀಸಿದ ಮಾತಿನ ಬಲೆ ಬಲವಾಗಿ ಬಿಗಿದಿದೆ ಎಂದು ಅರ್ಥವಾಯಿತು.

ಬಡ ಶಾಲಾ ಮಾಸ್ತರ, ಚೆಲುವೆಯಾದ ಹೆಣ್ಣು ಮಗಳನ್ನು ತಾನಾಗಿ ಒಪ್ಪಿ, ಸ್ವಂತ ಖರ್ಚಿನಲ್ಲಿ ಮದುವೆಯಾದ ಲಕ್ಷಾಧೀಶ್ವರನ ಪುತ್ರನನ್ನು ಆ ಶಾಲಾ ಮಾಸ್ತರು ಯಾವ ರೀತಿಯಲ್ಲಿ ಉಪಚರಿಸುತ್ತಾನೆ, ಎಂತಹ ನಮ್ರತೆಯಿಂದ ಅಳಿಯನ ಬಳಿ ನಡೆದುಕೊಳ್ಳುತ್ತಾನೆ, ಅದಕ್ಕಿಂತಲೂ ಮಿಗಿಲಾಗಿ ನಾನು ಆ ಗಡ್ಡ

ದವನ ಸುತ್ತ ಮಾತಿನ ಬೆಣ್ಣೆಯನ್ನು ಬಿರಿ ಬಿರಿ ಹಚ್ಚಿದೆ. ಬಲೆ ಬೀಸಿದ್ದೆನಲ್ಲಾ! ಜಾರಿಕೊಂಡು ಹೋಗುವ ಹಾಗಿಲ್ಲವಲ್ಲ ಎಂಬ ಧೈರ್ಯದಿಂದ ಬೆಣ್ಣೆಯನ್ನು ಧಾರಾಳವಾಗಿ ಬಳಸಿದೆ.

ಶನಿವಾರ ಸಂಜೆ ಇರಬೇಕು. ಅಲಮೇಲು ದವಾಖಾನೆಗೆ ಬಂದಳು. "ಏನಮ್ಮಾ! ಬಹಳ ದಿನಗಳಿಂದ ಕಾಣಲೇ ಇಲ್ಲ. ಯಾವುದಾದರೂ ಊರಿಗೆ ಹೋಗಿದ್ದಿರಾಮ್ಮಾ! ಈಗೇನಾಗಿದೆ," ಎಂದು ಕುಶಲ ಪ್ರಶ್ನೆಗಳನ್ನು ಕೇಳಿದೆ.

ತಲೆಯನ್ನೆತ್ತದೆ, ಮೆದುದನಿಯಲ್ಲೇ ಆಕೆ ಹೇಳಿದಳು.

"ಬೆಂಗಳೂರಿನಲ್ಲೇ ಇದ್ದೆ. ಆರೋಗ್ಯ ವಾಗಿಯೇ ಇದೀನಿ. ಅದಕ್ಕೇ ಬರಲಿಲ್ಲ. ನಿಮ್ಮ ಹತ್ತಿರ ಒಂದು ಮಾತನ್ನು ಗುಟ್ಟಾಗಿ ಹೇಳಿ ಹೋಗೋಣ ಅಂತ ಬಂದೆ" ಎಂದಳು.

ಒಳ ಕೊಠಡಿಗೆ ಹೋದಾಗ ಆಕೆ ಹೇಳಿದಳು "ನಾಳೆ ಬೆಳಿಗ್ಗೆ ನನ್ನ ಯಜಮಾನರು ನಿಮ್ಮ ಬಳಿಗೆ ಬರುತ್ತಾರೆ. ನನ್ನ ಔಷಧಿ ಉಪಚಾರದ ಲೆಕ್ಕದಲ್ಲಿ ಬಾಕಿ ಎಷ್ಟಿದೆ ಎಂದು ಕೇಳುತ್ತಾರೆ. ಮುನ್ನೂರು ರೂಪಾಯಿ ಬಾಕಿ ಇದೆ ಅಂತ ಹೇಳಿ. ತಪಶೀಲನ್ನೇನು ಅವರು ಕೇಳುವುದಿಲ್ಲ. ಅವರು ಕೊಟ್ಟ ಹಣವನ್ನು ನನ್ನ ಲೆಕ್ಕಕ್ಕೆ ಜಮಾ ಮಾಡಿಕೊಳ್ಳಿ" ಎಂದಳು.

ನನಗೆ ಅತ್ಯಾಶ್ಚರ್ಯವಾಯಿತು. ಕಾಲು ಹಿಡಿದು ಬ್ಯಾಂಡೇಜ್ ಕಟ್ಟಿ ಕಾಸು ಕೊಡಪ್ಪ ಎಂದರೆ ಕಾಲಿನಲ್ಲಿ ಒದ್ದು ಲೆಕ್ಕ ಬರೆದುಕೊಳ್ಳಯ್ಯಾ ಎಂದೆನ್ನುವ ರೋಗಿಗಳೇ ಹೆಚ್ಚು. ಹೀಗಿರುವಾಗ ಮೇಲೆ ಬಿದ್ದು ಗೊಂಡು ಬಂದು ಮನಿ ಪರ್ಸ್ ತುಂಬಿ, ಮುಂದೇನಾದರೂ ಕಾಯಿಲೆ ಬಿದ್ದರೆ ಆ ಲೆಕ್ಕಕ್ಕೆ ಇದನ್ನು ಬಳಸಿ ಎಂದು ಹೇಳುವ ಜನ ಇದ್ದಾರಲ್ಲ! ಎಂದು ಆಶ್ಚರ್ಯವಾಯಿತು. ಇಂತಹ ಮಹತ್ವದ ಸುದ್ದಿಯನ್ನು ಪೇಪರಿನಲ್ಲಿ ಜಾಹೀರಾತು ಮಾಡಲೇ ಬೇಕೆಂದು ಕೂಡ ಅನ್ನಿಸಿತು

ಅಲಮೇಲು ಹೀಗೆ ಹೇಳಿ ಹೊರಟು ಹೋದಳು.

ಮಾರನೆಯ ದಿನ ಎಷ್ಟು ಹೊತ್ತಿಗೆ ಉದಯಿಸುತ್ತೋ? ಎಷ್ಟು ಬೇಗ ದವಾಖಾನೆಯನ್ನು ತೆಗೆದೇನೋ? ಎಂದು ಕಾತುರ ಪಟ್ಟೆ. ಕೂಡಲೆ ಅನ್ನಿಸಿತು — ನಾನು ಅವಸರ ಪಟ್ಟರೆ ಪ್ರಯೋಜನವೇನು? ಅಲಮೇಲುವಿನ ಗಂಡನಿಗೆ ಅವಸರ ಇಲ್ಲವಲ್ಲಾ! ಅವನು ಸಾವಧಾನವಾಗಿ ಬರಬಹುದು ಅಥವಾ ಮಾಡಿದ್ದು ಹೋದ ರಾಯಿತು ಎಂದು ನಾಳೆ ಬಾರದೇನೂ ಇರಬಹುದು, ಎಂದು.

ಆದರೂ ಮಾರನೆಯ ದಿನ ದವಾಖಾನೆಗೆ ಹೋದ ಮೇಲೆ, ಹೊರ ಬಾಗಿಲಿನ ಹತ್ತಿರ ಯಾರಾದರೂ ಬಂದರೆ ಇಣಿಕಿ ನೋಡುವ ಹಾಗಾಗಿತ್ತು, ನನ್ನ ಸ್ಥಿತಿ. ಮಾಮೂಲಾಗಿ ಬರುವವರು ಬಂದರು, ಹೋದರು. ಹೊಸಬರೊಂದಿಬ್ಬರು ಬಂದರು, ಸಲಹೆ ಪಡೆದು ನಾಳೆ ಔಷಧಕ್ಕೆ ಬರುತ್ತೀವಿ ಎಂದು ಆಸೆ ತೋರಿಸಿ ಹೋದರು.

ಭರ್ಜರಿ ಗಡ್ಡದ ವಾಣಿಯಂಬಾಡಿಯ ಶ್ರೀಮಂತ ಲಟ್ಟು ಬಂದ. ಆದರದಿಂದ ಅವನ ಯೋಗಕ್ಷೇಮವನ್ನು ವಿಚಾರಿಸಿದೆ. ನಿದ್ರೆ ಚೆನ್ನಾಗಿ ಬರುತ್ತಿದೆ. ಉಬ್ಬಸ ಬಾಧಿಸುತ್ತಿಲ್ಲ. ನಾನಿತ್ತ ಸಲಹೆಯ ಮೇರೆಗೆ ಗಡ್ಡಕ್ಕೆ ಹಚ್ಚುತ್ತಿದ್ದ ಸೀಗೆಕಾಯನ್ನು ತಪ್ಪಿಸಿ, ಷಾಂಪೂ ಉಪಯೋಗಿಸಲು ಶುರು ಮಾಡಿದ್ದ ಎಂದೆಲ್ಲಾ ಕ್ಷೇಮ ಸಮಾಚಾರವನ್ನೂ ಅಚ್ಚ ತಮಿಳಿನಲ್ಲಿ ಹೇಳಿದ.

ನಂತರ ಏನೋ ನೆನಪಿಕೊಂಡವನಂತೆ, ಮಾತನ್ನು ಹಠಾತ್ತಾಗಿ ನಿಲ್ಲಿಸಿ "ಅಂದ ಹಾಗೆ ಡಾಕ್ಟರೇ! ನಿಮ್ಮ ಹತ್ತಿರ ಅಲಮೇಲು ಲೆಕ್ಕಾ ಇಟ್ಟಿದ್ದಾಳಂತಲ್ಲ. ಅವಳ ಲೆಕ್ಕದಲ್ಲಿ ಎಷ್ಟು ಬಾಕಿ ಇದೆ" ಎಂದು ಕೇಳಿದ.

ಅಲಮೇಲು! ಅವಳ ಯಜಮಾನ್ರು! ಅವಳ ಲೆಕ್ಕ ಕೇಳಿ ಹಣ ಕೊಡಬಂದ ಅವಳ ಗಂಡ!! ಅದೆಲ್ಲಾ ಈ ಲಟ್ಟುವೇ ??

ತಲೆ ಕೊಡವಿಕೊಂಡು, ನನ್ನ ಆಶ್ಚರ್ಯವನ್ನು ತೋರಗೊಡದೆ, ಧರ್ಮರಾಯ ಅಂದು ಕುರುಕ್ಷೇತ್ರದಲ್ಲಿ ತಡ-ಬಡ ಇಲ್ಲದೆ ಅಶ್ವತ್ಥಾಮೋ ಹತಃ ಎಂದಂತೆ ಮುನ್ನೂರು ರೂಪಾಯಿ ಚಿಲ್ಲರೆ ಎಂದೆ.

ಎಷ್ಟು ತಿಂಗಳ ಬಾಕೀನೋ ಎಂದು ತನ್ನಲ್ಲಿ ತಾನೇ ಅಂದುಕೊಂಡು, ಲಟ್ಟು ತೆಗೆದಿಟ್ಟ, ಮೂರು ಹಸಿರು ನೋಟುಗಳನ್ನು. ರಶೀದಿಗೂ ಕಾಯದೆ"ಆದಾಬ್ ಅಂಗೋ" ಎಂದು ಹೊರಟು ಹೋದ.

ಮುಲುಮುಲುಗುಟ್ಟುತ್ತಾ ಇತ್ತು ಕೈ ಬೆರಳು. ಆ ನೋಟುಗಳನ್ನು ತಡಬರಿಸಿ, ತಡಬರಿಸಿ ಇನ್ನೇನು ತಾನೆ ಆದೀತು? ನನ್ನ ಯೋಗ್ಯತೆ ತಿಳಿದವರು ವರದಕ್ಷಿಣೆ ಕೊಡುಕ್ಕೆ ಬಂದರೂ ನೂರರ ಮೇಲಕ್ಕೆ ದಕ್ಷಿಣೆಯ ಮಾತನ್ನು ಏರಿಸಲಿಲ್ಲ. ಅಂತಹವನ ಕೈ ಬೆರಳುಗಳಿಗೆ ಗರಿಗರಿಯಾಗಿ ಮೂರು ನೋಟುಗಳು ಕರಪಲ ಮಾಡಹತ್ತಿದರೆ?

ಆ ಸಂಜೆ ದವಾಖಾನೆಗೆ ಅಲಮೇಲು ಪುನಃ ಬಂದಳು. ತಲೆ ತಗ್ಗಿಸಿಕೊಂಡೇ, ಮೆದುವಾಗಿ ಮಾತನಾಡಿದಳು

"ನಮ್ಮ ಯುಜಮಾನ್ರು ಬಂದಿದ್ದರೇ? ಮುನ್ನೂರು ರೂಪಾಯಿ ಕೊಟ್ಟರೇ?" ಎಂದು ಕೇಳಿದಳು.

ಘೋರ ತಪಸ್ಸನ್ನು ಮಾಡುತ್ತಿರುವ ಭಕ್ತನಿಗೆ ದೇವರು ಪ್ರತ್ಯಕ್ಷವಾಗುವ ಮುನ್ನ ಭೂಮಧ್ಯದಲ್ಲಿ ಒನಕೆ ಬಿದ್ದ ಹಾಗಾಗುತ್ತದಂತೆ. ಮಾಜಿ ಕೊರವಂಜಿಯೊಬ್ಬ ಹೀಗೆ ಹೇಳಿದ್ದಳು. ಹಾಗಾಯಿತು ಆಗ. ಸತ್ಯದರ್ಶನವಾಯ್ತು. ಅದನ್ನು ಸಮರ್ಥಿಸುವ ಎಂದುಕೊಂಡು,

"ನಿಮ್ಮ ಯಜಮಾನ್ರು ಬಂದಿದ್ದರು. ಮುನ್ನೂರು ಕೊಟ್ಟು ಹೋದರು. ಇಲ್ಲಿದೆಮ್ಮಾ! ನಿಮ್ಮ ಲೆಕ್ಕದಲ್ಲಿ ಎಂಟು ರೂಪಾಯಿ ಬಾಕಿ ಇದೆ. ಅದನ್ನು ಜಾತಾ ಹಾಕಿ ಮಿಕ್ಕ ಹಣ ಕೊಡಲೇ" ಎಂದೆ.

"ಛೇ! ಛೇ! ಡಾಕ್ಟರೆ! ಆ ಹಣ ನನಗೆ ಬೇಡ. ನನ್ನ ಲೆಕ್ಕದಲ್ಲಿರಲಿ ಮುಂದಾಗ ಬಹುದಾದ ಚಿಕಿತ್ಸೆಗೆ ಮುಂಗಡವಾಗಿರಲಿ" ಎಂದಳು.

ಇದ್ದೊಂದು ಸಣ್ಣ ಅನುಮಾನ ಪರಿಹಾರವಾಯ್ತು. ಈಗ ಸತ್ಯದರ್ಶನ ಮಾಡಿಕೊಳ್ಳೋಣ ಎನಿಸಿತು.

"ಅಲಮೇಲಮ್ಮ! ಕೆಲವು ವರ್ಷಗಳ ಹಿಂದೆ ಧಾರವಾಡದಿಂದ ಚಿಕಿತ್ಸೆಗೆ ಒಬ್ಬ ಬಂದಿದ್ದ. ಮದ್ರಾಸಿನಿಂದ ಚೆಟ್ಟಿಯಾರ್ ಒಬ್ಬ ಚಿಕಿತ್ಸೆಗೆ ಬಂದಿದ್ದ. ಕಾವೇರಿಪಟ್ಟಣದಿಂದ ಗೌಂಡರೊಬ್ಬರು ಬಂದಿದ್ದರು. ಇವರೆಲ್ಲರೂ ಕೂಡ ಅವರು ಇಲ್ಲಿಗೆ ಬಂದಿದ್ದ ಋತುವಿನಲ್ಲಿ ನಿಮ್ಮ ಯಜಮಾನರಾಗಿದ್ದರೇ? ನೀವೇ ಅವರನ್ನು ನನ್ನ ಬಳಿಗೆ ಕಳಿಸಿದಿರಾ? ವಾಣಿಯಂಬಾಡಿಯ ಈ ಲಟ್ಟುವನ್ನು ಕಳಿಸಿದಂತೆ?" ಎಂದು ಕೇಳಿದೆ.

"ಹ್ಞೂ" ಎಂದಳು ಆ ತಂಗಿ. ಹೊರಟು ಹೋದಳು.

ಯಾವ ಮರ್ಯಾದಸ್ಥ ಗೃಹಿಣಿಯೂ ಕೂಡ ಅಲಮೇಲುವಿನ ತರಹ ವಿನಯವಾಗಿ ನಡೆದುಕೊಂಡಿದ್ದನ್ನು ಕಾಣೆ ಆಕೆಯು ಈ ಕಾಯಕವನ್ನು ನಡೆಸುತ್ತಿದ್ದಾಳೆ ಎಂದು ಕನಸಿನಲ್ಲೂ ಅಂದುಕೊಂಡಿರಲಿಲ್ಲ.

ಹಾಗೂ ನನ್ನ ಕೀರ್ತಿಯು ಹರಡಿದ್ದೆಲ್ಲಾ ಅಲಮೇಲುವಿನ ಸೆರಗಿನ ಹಾರಾಟದಲ್ಲೆ ಎಂದು ತಿಳಿದಾಗ ದೈನ್ಯತೆಯೂ ಮೂಡಿತು.

*

* * * * * * * * * * * * * * * * *

ಸತ್ಯ ಪ್ರಭುವಿನ ಆತ್ಮ
ಪ್ರಕಾಶ ಅವನ ಶರೀರ

—ಪೈಥೋಗೋರಸ್



ಶಾಂತಿನಾಥ
ದೇಸಾಯಿ

ಶಂಕರ, ಸ್ವಲ್ಪ ಗಾಡಿ ನಿಲ್ಲಿಸು."

ಶಂಕರ ಬ್ರೆಕ್ ಹಚ್ಚುತ್ತಲೆ ಅಂಬ್ಯಾಸಡರ್ ಗಕ್ಕನೆ ನಿಂತಿತು.

"ಶಕೂ, ಗಾಡಿ ಯಾಕ ನಿಲ್ಲಿಸಿದಿ ? ಗುರ್ತಿನವರು ಯಾರಾದರೂ ಕಂಡರೇನು ?" ಮಾಧವ ರಾವ ಕೇಳಿದರು.

"ಹೌದು, ನನ್ನ ಹಳೇ ಕಲೀಗ್ ಒಬ್ಬರು ಕಂಡರು. ಅವರನ್ನು ಮಾತಾಡಿಸಬೇಕು." ಶಕುಂತಲೆ ಬಾಗಿಲಿನಿಂದ ಹೊರಗೆ ಹಣಿಕಿ ಹಾಕಿ ಹಿಂದೆ ನೋಡಿದಳು—

"ಹಲೊ ಪ್ರೊಫೆಸರ್ ಪ್ರಭೂ!" ಎಂದು ಕೈಮಾಡಿ ಕೂಗಿದಳು.

ಶಕುಂತಲೆ ತನ್ನ ದೇಹ ಹೊರಳಿಸಿ ಸೀಟಿನಲ್ಲಿ ತುದಿಗುಂಡಿಯ ಮೇಲೆ ಕುಳಿತು ಕಾರಿನ ಬಾಗಿಲಿನ ಹೊರಗೆ ಮುಖ ಚಾಚಿ ಕೈಮಾಡಿ ಕರೆಯುತ್ತಿರುವಾಗ ಅವಳ ದೇಹಕ್ಕೆ ಬಂದ ಆಕೃತಿ ಮಾಧವನಿಗೆ ಆಕರ್ಷಕವೆನಿಸಿತು. ಆ ಆಕೃತಿಯುಗುಂಟ ಮೃದುವಾಗಿ ತನ್ನ ಕೈಯಾಡಿಸಬೇಕು ಎಂದೆನಿಸಿತು. ಇದು ನನ್ನದು—ನನ್ನ ಮೂಲಕ ಇವಳ ಆಕೃತಿಗೆ ಸೌಂದರ್ಯ ಬಂದಿದೆ. ಇಲ್ಲದಿದ್ದರೆ, ನಾನಿವಳನ್ನು ಲಗ್ನವಾಗಿ ಇವಳ ಜೀವನ ತುಂಬಿರದಿದ್ದರೆ, ಇವಳು, ಒಣಗಿದ ಕಡ್ಡಿಯಾಗಿಯೇ ಈ ಊರಿನ ಕಾಲೇಜಿನಲ್ಲಿ ಕೊಳೆಯುತ್ತಿದ್ದಳು—ಎಂದು ಯೋಚಿಸುತ್ತ ಕಿಸೆಯಲ್ಲಿಯ ಸಿಗರೇಟು ತೆಗೆದು ಬಾಯಲ್ಲಿಟ್ಟು ಕಡ್ಡೀ ಕೊರೆದು ಜಂಕಿಹಚ್ಚಿದ. ತನ ಹಳೇ ಕಲೀಗನ ಮುಂದೆ ತನ್ನ ಗಂಡನ, ತನ್ನ (ಗಂಡನ) ಕಾರಿನ, ತನ್ನ ಅರಳಿದ (ಅರಳಿಸಿಕೊಂಡ) ದೇಹದ ಪ್ರದರ್ಶನವಾಗಬೇಕಿನ್ನು. ಅಲ್ಲಿಯ ತನಕ, ಸಿಗರೇಟು ಸೇದುವುದೊಂದೇ ಕೆಲಸ ನನಗೆ, ಎಂದು ಹೊಗೆಯನ್ನು ಅವಳ ಅರ್ಧ ನಗ್ನ ಬೆನ್ನಿನ ಮೇಲೆ ಉಫ್ ಎಂದು ಉಗುಳಿದ.

"ಶಂಕರ, ಗಾಡಿ ಸ್ವಲ್ಪ ಸೈಡಿಗೆ ತೆಗೆದುಕೊ."

ಶಂಕರ ಗಾಡಿಯನ್ನು ಎಡಕ್ಕೆ ನೆರಳಿನಲ್ಲಿ ನಿಲ್ಲಿಸಿದ. ನಂತರ ಕುತೂಹಲದಿಂದ ಬಾಯಿಯವರ ಕಲೀಗನನ್ನು ಬಾಗಿಲ ಹೊರಗೆ ತಲೆ ಹಾಕಿ ಹಿಂದೆ ಹೊರಳಿ ನಿರುಕಿಸಿ ನೋಡಿದ ಯಾರು, ಪ್ರಭು ಅಂತೆ! ವಾಹ್, ಬೆಳ್ಳಗೆ ಎತ್ತರ—ಒಳ್ಳೇ ಛಕಡಾ ಕಾಣಿಸ್ತಾನ! ಈತ ಬಾಯಿಯವರ ಗೆಳೆಯ—ಹುಂ, ಗೆಣೆಯನಿದ್ದ ಅಂತ ಕಾಣಿಸ್ತದ! ಅಂತೂ ಶೇಟರಿಗೆ ಒಳ್ಳೆಯ ಹೆಂಡತಿ ಸಿಕ್ಕಳು! ಅವರ ಮೊದಲನೇ ಹೆಂಡತಿ, ಪಾಪ, ಯಾವಾಗಲೂ ಕಾರಿನ ಮೂಲೆಯಲ್ಲಿ

ಮುದುರಿ ಕೂಡ್ರುತ್ತಿದ್ದರು. ಕೇಳಿದ ಪ್ರಶ್ನೆಗೆ ಉತ್ತರವೊಂದು ಬಿಟ್ಟು ಬೇರೆ ಏನಾದರೂ ತಾವಾಗಿಯೇ ಮಾತಾಡಿ ಗೊತ್ತೇ ಇದ್ದಿಲ್ಲ ಅವಳಿಗೆ. ಪಾಪ, ಅದೇನೋ ಕ್ಯಾನ್ಸರ್ ರೋಗದಿಂದ ಹಾಸ್ಪಿಟಲಿನಲ್ಲಿ ಸತ್ತು—ನಂತರ ಇದೇ ಕಾರಿನಲ್ಲಿ ಹಿಂದೆ ಅವಳ ಹೆಣ ಮಲಗಿಸಿ ಹೋಗುವಾಗ ತನ್ನ ಕಾಲು ತನಗೆ ಗೊತ್ತಿಲ್ಲದೆಯೇ ನಡುಗುತ್ತಿದ್ದುದರ ತೀವ್ರ ನೆನಪಾಯಿತು ಶಂಕರನಿಗೆ... ಹೋಗಲಿ—ಸತ್ತವರು ಸತ್ತರು. ಶೇಟರು ಆ ಟೈಪಿಸ್ಟ ಆಪಟೆ ಹುಡುಗಿಯನ್ನು ಯಾಕೆ ಲಗ್ನವಾಗಲಿಲ್ಲವೋ ಏನೋ? ಅವರಿಬ್ಬರ ಕಾರಿನಲ್ಲಿಯ ಚಲ್ಲಾಟ ನೋಡಿದರೆ, ಅಲ್ಲ ಕೇಳಿದರೆ—ಶೇಟರು ಲಗ್ನವಾದರೆ ಅವಳನ್ನೇ ಎಂದೆನಿಸಿತ್ತಲ್ಲ...

"ಓಹ್, ನಿನ್ನ ಗುರ್ತೇ ಹತ್ತಿಲ್ಲ ನೋಡು. ಎಷ್ಟು ಲಠ್ಠವಾಗಿ ಬಿಟ್ಟೀಯಲ್ಲ...." ಕಾರಿನ ಸಮೀಪ ಬಂದ ಪ್ರೊ. ಪ್ರಭು ನುಡಿದ. "ಇದು ನಿಮ್ಮದೇ ಕಾರಿರಬೇಕು?"

"ಹುಂ. ಅವರು ಒಳಗಿದ್ದಾರೆ. ತಡೀರಿ, ನಮ್ಮ ಮಿಸ್ಟರ್ ಅವರ ಪರಿಚಯ ಮಾಡಿ ಕೊಡ್ತೀನಿ." ಎಂದು ಶಕುಂತಲೆ ಬಾಗಿಲು ತೆರೆದು ಹೊರಗೆ ಬಂದಳು.

ಮಾಧವರಾಯರೂ ಹೊರಗೆ ಬಂದರು. ದೇಶಾವರಿ ನಗೆಯೊಂದನ್ನು ನಕ್ಕು ಕೈ ಮುಂದೆ ಮಾಡಿದರು.

"ಇವರು ಪ್ರೊ. ಪ್ರಭು—ನನ್ನ ಹಳೇ ಕಲೀಗ. ಫಿಲೋಸಫಿ ಕಲಿಸ್ತಾರ. ಇವರು ನಮ್ಮ—"

"ನಮಸ್ಕಾರ." ಪ್ರೊ. ಪ್ರಭು ಮಾಧವರಾಯರ ಕೈಹಿಡಿದರು.

"ನಮಸ್ಕಾರ." ಮಾಧವರಾಯರು ಪ್ರಭೂನ ಕೈಯೊತ್ತಿದರು.

"ಹೆಸರು? ಸ್ಸಾರಿ, ಹೆಸರು ಲಗ್ನಪತ್ರಿಕೆಯಲ್ಲಿತ್ತು ನಿಜ. ಆದರೆ ಈಗ ಮರೆತುಹೋಗಿದೆ, ಕ್ಷಮಿಸಬೇಕು" ಪ್ರಭು ನಕ್ಕ. ಮಾಧವರಾಯರ ಮಾಂಸಲವಾದ ಮುಷ್ಟಿಯಿಂದ ತನ್ನ ಸೀರಾದ ಬೆರಳುಗಳನ್ನು ಬಿಡಿಸಿಕೊಂಡ.



"ಮಾಧವರಾವ ಮೋಹಿತೆ!" ಮಾಧವರಾಯರ ತುಟಿ ನಕ್ಕರೂ ಅವರು ಮಾತ್ರ ನಗಲಿಲ್ಲ.

"ಮುಂಬೈಯಲ್ಲಿ ಏನು ಮಾಡ್ತೀರಿ? ಏನೋ ಬಿಜಿನೆಸ್ ಅಂತ ಶಕು-ಶಕುಂತಲಾ ಹೇಳಿದರು." ಪ್ರಭು ಶಕುಂತಲೆಯತ್ತ ನೋಡಿದ.

"ಎಕ್ಸ್‌ಪೋರ್ಟ್ - ಇಂಪೋರ್ಟ್......" ಶಕುಂತಲೆಯ ಶಬ್ದಗಳಲ್ಲಿ ಕಾವ್ಯ ಮೂಡಿತ್ತು.

"ವೆರಿ ಗುಡ್! ಶಕುಂತಲಾ, ಮುಂಬೈಯಲ್ಲಿ ನೀವು ಯಾವುದಾದರೂ ಕಾಲೇಜಿನಲ್ಲಿ ಟೀಚಿಂಗ್ ಮಾಡ್ತೀರೋ ಅಥವಾ ಎಲ್ಲಬಿಟ್ಟು.."

"ಸದ್ಯಕ್ಕಂತೂ ಮಾಡುವುದಿಲ್ಲ."

"ಯಾಕೆ ಮಾಡ್ಬೇಕು—ಬಿಡ್ರಿ."

"ಈಗ ಲೆಕ್ಚರಿಂಗ್ ಎಲ್ಲ ಮನೆಯಲ್ಲಿಯೇ, ಪ್ರೊ. ಪ್ರಭು!" ಎಂದು ಮಾಧವರಾವ ನಕ್ಕರು.

"ನಿಮ್ಮದೂ ಏನಾದರೊಂದು. ಹಾಂಗೇನಿಲ್ಲರಿ, ಪ್ರೊ. ಪ್ರಭು." ಶಕುಂತಲೆ ಗಂಡನನ್ನು ಎಡಗೈಯಿಂದ ತಿವಿದು ಮುದ್ದು ಮುದ್ದಾಗಿ ನುಡಿದಳು. "ಹಂ, ಇವರು ಮನೆಯಲ್ಲಿದರಲ್ಲವೇ, ಇವರಿಗೆ ಲೆಕ್ಚರ್ ಹೇಳೋದು—!" ಶಕುಂತಲೆ ನಕ್ಕಳು.

ಹಾ ಹಾ ಹಾ... ಹಾ ಹಾ ಹಾ... ಎಲ್ಲರೂ



ನಕ್ಕರು.

ನಗು, ನಗು, ನಗು...ಎಷ್ಟು ಚೆನ್ನಾಗಿ ನಗ್ತೀಯಾ, ಶಕುಂತಲಾ? ಅವನ ಕೂದಲು ಸಲ್ಪ ತೆಳ್ಳಗಿದ್ದರೇನು, ಹೊಟ್ಟೆ ದಪ್ಪಾಗಿದೆ-ಯಲ್ಲ; ಅವನ ತುಟಿಗಳ ತುದಿಗೆ ಗೆರೆಗಳು ಮೂಡಿದ್ದರೇನು, ಅವನ ಕಾರಿಗೆ ಗೆರೆಗಳು

ಬಿದ್ದಿಲ್ಲವಲ್ಲ; ಅವನಿಗೆ ವಯಸ್ಸಾದರೇನು—ಹಾ ಹಾ ಹಾ—ಅವನ ಡ್ರಾಯಿವ್ಹರ್ ತರುಣನಿದ್ದಾನಲ್ಲ— ಹೀಗಿದ್ದಾಗ ನಗಬಾರದೇಕೇ? ಸುಖದ ಮಹಾಬಳೇಶ್ವರವನ್ನೇರಿ ನಿಂತಾಗ ಆನಂದದಿಂದ ಹೆಮ್ಮೆಯಿಂದ ನಗಬಾರದೇಕೆ? ನಗು, ಎಲ್ಲ ಇತಿಹಾಸವನ್ನು ಪಾಟಿಯ ಮೇಲಿನ ಅಕ್ಷರಗಳನ್ನು ಅಳಿಸಿದಂತೆ ಅಳಿಸಿ ಚೊಕ್ಕಾಗಿ ಶುಭ್ರವಾಗಿ ಝುಳಝುಳವಾಗಿ ನಗು...ಹಾ ಹಾ-ಹಾ—ಧಬಧಬೆಯಂತೆ. ನಗು, ಶಕುಂತಲಾ, ಎಲ್ಲವನ್ನೂ ಮಹಾಪೂರದಲ್ಲಿ ಮುಳುಗಿಸಿ, ಮುಂದೆ ಕುಲುಕುಲು ಹರಿಯುವ ನದಿಯಂತೆ. ನಗು...ಅದೇ ಜೀವನ, ಅದೇ ಸುಖ—ಅದೇ ಮುಕ್ತಿ, ಅದೇ ಪ್ರಗತಿ!......ನೀನು ನಿನ್ನ ತೋಳ್ದೆರೆದು ನನ್ನನ್ನು ಆಲಿಂಗಿಸಲು ಬಂದಿ. ನೀನು ಬಾ ಎಂದು ಹೇಳುವುದೇ ತಡ ನಾ ಬಂದೇ ಬಿಡುವೆ ಎಂದು ತಿಳಿದಿ. ಯಾವುದೋ ಒಂದು ಮಳ್ಳ ಸಂಜೆಯಲ್ಲಿ ಮುದ್ದು ಕೊಟ್ಟ ಮಾತ್ರಕ್ಕೆ ನಾನು ನಿನ್ನವನಾದೆಯೆಂದು ತಿಳಿದಿ. ನಿನ್ನ ಬುದ್ಧಿಮತ್ತೆಯ ಪ್ರಭಾವಕ್ಕೆ ನನ್ನಂಥ ಮಳ್ಳ ತತ್ವಜ್ಞಾನದ ಪ್ರಾಧ್ಯಾಪಕ ಒಳಗಾಗದೆ ಮತ್ತಾರಾಗಬೇಕು ಎಂದು ಆತ್ಮವಿಶ್ವಾಸದಿಂದ ಮೆರೆದಿ. ಜನರಿಗೆಲ್ಲ ನಾನು ನಿನ್ನ ಪ್ರಿಯಕರ, ನಿನ್ನ ಭಾವೀ ಗಂಡ ಎಂಬ ಭಾವನೆ ಹುಟ್ಟುವಂತೆ ವರ್ತಿಸಿದಿ. ಕೊನೆಗೆ ನಾನೇ ಸ್ಪಷ್ಟವಾಗಿ, ನಿಷ್ಠುರವಾಗಿ, 'ದಯವಿಟ್ಟು ನಿನ್ನ ನಾಟಕ ಸಾಕುಮಾಡು, ಶಕುಂತಲಾ. ನೀನು ತಿಳಿದಂತೆ, ನೀನು ಬಯಸಿದಂತೆ—ನನ್ನ ಭಾವನೆಗಳಿಲ್ಲ,' ಎಂದು ಅವಳಿಗೆ ಹೇಳಬೇಕಾಯಿತು. ಆಗಲೂ ನೀನು ನಕ್ಕಿ. ನಿನ್ನ ಹೃದಯ ಒಡೆದು ಅತ್ತು-ಅತ್ತು ಒಂದು ನದಿಯನ್ನೇ ನೀನು ಹರಿಸಬಹುದು ಎಂದುಕೊಂಡಾಗ ನೀನು ಬರೇ ಕುಲುಕುಲು ನಕ್ಕಿ. ನಗು ಅಂದರೆ ನಿನ್ನ ಅಂಕ-ಪರದೆ ಇದ್ದಂತೆ! ಭೂತಕಾಲವಿರಲಿ, ವರ್ತಮಾನವಿರಲಿ, ಪ್ರೀತಿಯಿರಲಿ, ದುಃಖವಿರಲಿ, ಪ್ರಿಯಕರನಿರಲಿ, ಗಂಡನಿರಲಿ— ನಕ್ಕರೆ ತೀರಿತು — ಗಣಗಣ ಗಂಟೆಯಾಗಿ ಪರದೆ ಬಿತ್ತೇ! ನಗು, ಎಷ್ಟು ಚೆನ್ನಾಗಿ ನಗ್ತೀಯಾ?

"ಪ್ರೊಫೆಸರ್ ಪ್ರಭು, ನೀವು ಮುಂಬೈಗೆ ಬಂದಾಗ ನಮ್ಮಲ್ಲಿಗೆ ಬರಬೇಕು." ಶಕುಂತಲೆಯ ನಗೆಯಲ್ಲಿ ಆಗ್ರಹವಿತ್ತು.

"ಜರೂರ ಬರಬೇಕು, ಪ್ರೊಫೆಸರ್ ಪ್ರಭು, ಇದೋ, ಈ ಕಾರ್ಡು ತೆಗೆದುಕೊಳ್ಳಿರಿ. ಅದರ ಮೇಲೆ ಮನೆಯ ಪತ್ತೆ, ಫೋನ ನಂಬರ ಎಲ್ಲ ಇವೆ...ಬರೇ ಫೋನ ಮಾಡಿದರೂ ಸಾಕು. ನೀವು ಇದ್ದಲ್ಲಿಗೆ ಕಾರು ಕಳಿಸಿಕೊಡುವೆವು..." ಮಾಧವರಾವ ಶಕುಂತಲೆ ಮೀಟಿದ ತಂತಿಯನ್ನೇ ಇನ್ನಿಷ್ಟು ಜೋರಿನಿಂದ ಹೆಚ್ಚು ಕಲಾತ್ಮಕವಾಗಿ ಮೀಟಿದರು.

"ಅದಿರಲಿ, ನೀವಿಲ್ಲಿ ಎಷ್ಟು ದಿನವಿದ್ದೀರಿ?" ಪ್ರಭು ಕೇಳಿದ.

"ನಾಳೆ ಮುಂಜಾನೆ ಹೊರಡಬೇಕು." ಶಕುಂತಲೆಯ ಮಾತಿನಲ್ಲಿ ಗಾಂಭೀರ್ಯ ತುಳುಕಾಡಿತು.

"ಹಾಗಾದರೆ ಇಂದು ಸಂಜೆ ನಮ್ಮ ಮನೆಗೆ ಚಹಾಕ್ಕೆ ಬಂದುಬಿಡಿರಲ್ಲ..."

"ಚಹಾಕ್ಕೆ? ಏನರಿ, ಸಂಜೆಗೆ ಇವರ ಮನೆಗೆ ಹೋಗಲು ಸಾಧ್ಯವಾಗಬಹುದೇ?"

"ಅಲ್ಲ, ತೆಂಡುಲಕರ ಜಜ್ಜಸಾಹೇಬರ ಮನೆಗೆ ಹೋಗಬೇಕಲ್ಲ...?"

"ಹೌದ ಹೌದು, ಕಮಲಾಬಾಯಿಯವರೂ ಬಹಳ ಒತ್ತಾಯ ಮಾಡಿಹೇಳಿದ್ದಾರೆ...... ಆದರೆ—"

ಇದು ಒಳ್ಳೆಯ ಸಂಧಿ, ನಿಜ. ಇವರನ್ನು ಜಜ್ಜಸಾಹೇಬರ ಮನೆಗೆ ಕಳಿಸಿ, ನಂತರ ಪ್ರಭೂನ ಮನೆಗೆ ಹೋಗಿ, ಸ್ವಲ್ಪ ಹರಟೆ ಹೊಡೆದು, ಹಿಂದಿನ ಸುದ್ದಿ-ಪದ್ದಿ ಮಾತಾಡಿ, ನಕ್ಕು, ಒಂದು ತಾಸಿನ ಮೇಲೆ ಕಮಲಾಬಾಯಿಯವರನ್ನು ಭೆಟ್ಟಿಯಾದರಾಯಿತು. ನೋಡುವ, ಲಗ್ನವಾದ 'ಗೆಳತಿ'ಯೊಡನೆ ಈ ತತ್ವಜ್ಞಾನಿ ಹೇಗೆ ವರ್ತಿಸುವ ಎಂದು. ಹಳೆಯ ಇತಿಹಾಸ ತೆಗೆದು

ನೀನು ಹಾಗೆಂದಿ, ನಾನು ಹೀಗೆ ತಿಳಿದೆ, ಮುಂದೆ ಹೇಗೆ ಮಾಡುವದು ಎಂದು ಮೀನ-ಮೇಷ ಹಾಕಿ, ನಾನೊಬ್ಬಳೇ ಅವನ ಮನೆಗೆ ಹೋದದ್ದು ತಪ್ಪಾಯಿತೇ ? ತಪ್ಪಾದರೆ ಎಷ್ಟು ಪರ್ಸೆಂಟಾ-ಯಿತು, ಇಲ್ಲಧಿದ್ದರೆ ಯಾಕೆ ಒಳ್ಳೆಯದಾಯಿತು, ಯಾವ ಚರ್ಚೆಯನ್ನು ಕೂಲಂಕಷವಾಗಿ ಮಾಡಲು ಸುಂದರ ಅವಕಾಶ ದೊರೆಯಿತು. ಯಾವ ವೈಚಾರಿಕ ಕ್ಲಿಷ್ಟತೆ ಒಂದು ಅಂಶ ಕಡಿಮೆಯಾಯಿತು ಎಂದೆಲ್ಲ ಅವನ ಮಿದುಳಿನ ಸರ್ಕಸ್ಸನ್ನು ನೋಡಬಹುದು. ಹುಂ—ಆದರೆ ಅದರ ಉಪಯೋಗವೇನು ? ಹಿಂದೆ—ಆತನ ಇಂಥ ಸರ್ಕಸ್ಸುಗಳನ್ನು ನೋಡಿ ಆನಂದಿಸು ವುದರಲ್ಲಿಯೇ ಎರಡು ವರ್ಷ ಕಳೆದೆ. ಜೀವನ ವೆಂದರೆ ಬುದ್ಧಿಯ ಕತ್ತರಿಯಿಂದ ಕಟ ಕಟ ಕತ್ತರಿಸಿ ಒಗೆಯುವ ಕಾಗದದ ತುಂಡೆಂಬಂತೆ ಅವನ ಜೊತೆ ನಾನೂ ವರ್ತಿಸಿದೆ. ನಾನು ತನ್ನ ಬೆನ್ನು ಹತ್ತಿದ ಹುಡುಗಿಯೆಂದು ಆತನಿಗೆ ತುಂಬ ಹೆಮ್ಮೆ. ಕೊನೆಗೆ ಅವನ ಸ್ವಾಭಿಮಾನ ತೃಪ್ತಿ-ಗೊಂಡ ನಂತರ, ನನ್ನನ್ನು ಎಳೆದೆಳೆದು ಮೈಮೇಲೆ ಬೀಳುವಂತೆ ಮಾಡಿ ಕೊನೆಗೆ ಮಡಿ-ವಂತನಂತೆ, 'ಛೆ, ನೀನು ತಿಳಿದುಕೊಂಡಿದ್ದು ಬೇರೆ-ನಾನು ತಿಳಿದುಕೊಂಡದ್ದೇ ಬೇರೆ,' ಎಂದು ದೂಡಿಬಿಟ್ಟ, ಜವಾಬ್ದಾರಿಯ ಬಿಸಿಹತ್ತಿದೊಡನೆ ಕಾಲುಕಿತ್ತು ಪಲಾಯನಮಾಡಿದ... ಇವ ಓಡಿದ ಎಂದು ನಾನೇಕೆ ನಿರಾಶಳಾಗಬೇಕು ? ಇಂಥ ಪೆದ್ದನನ್ನು ನಾನಾದರೂ ಎಲ್ಲಿ ಲಗ್ನ ಮಾಡಿಕೊಳ್ಳುವವಳಿದ್ದೆ? ಮಾತಾಡಲಿಕ್ಕೆ, ಈ ವಿಷಯ ಆ ವಿಷಯ ಚರ್ಚಿಸಲಿಕ್ಕೆ, ಹಾಳು ಹರಟೆ ಕೊಚ್ಚಲಿಕ್ಕೆ ಒಳ್ಳೆಯ ಹುಡುಗ—ಆದರೆ ನನ್ನ ಗಂಡನೆಂದು?—ಛೆ, ನನ್ನ ಕನಸಿನಲ್ಲಿಯೂ ಎಣಿಸದ ಮಾತು... ನಾನೆಂದರೆ ಗಂಡಿಗಾಗಿ ಬಾಯ್ಬಿಡುವ ಹೆಣ್ಣೆಂದು ಜನರ ಎಣಿಕೆಯಾಗಿತ್ತು...ಹುಂ, ಈಗ ನಾನೊಬ್ಬಳೇ ಇವನ ಮನೆಗೆ ಹೋದರೆ ಆಯಿತು, ಜನರು ಅರ್ಥ ಹಚ್ಚುವವರೇ. ಲಗ್ನವಾದರೂ ಇವಳ ಮೊದಲಿನ ಪ್ರೇಮವ್ಯವಹಾರ ಮೊದಲಿನಂತೆಯೇ ಇದೆ ನೋಡಿರಿ—ಅಷ್ಟೇ ಅಲ್ಲದೆ ಈಗ ಅವಳಿಗೆ ಒಂದು ರೀತಿಯಿಂದ ಹೆಚ್ಚಿನ ಸ್ವಾತಂತ್ರ್ಯ—ಎಂದೆಲ್ಲ ಅನ್ನುವವರೆ... ಆದರೂ ಹೋಗಿ ನೋಡಲು ಅಡ್ಡಿಯಿಲ್ಲ.

"ಅಲ್ಲರಿ, ನೀವು ಜಜ್ಜಸಾಹೇಬರ ಮನೆಯಲ್ಲಿ ಕೂತಿರ್ರಿ, ನಾನೊಬ್ಬಳೇ ಇವರ ಮನೆಗೆ ಹೋಗಿ ಇವರ ಆತಿಥ್ಯ ಸ್ವೀಕರಿಸಿಬರುವೆ—ಆಗದೇ ?" ಶಕುಂತಲೆ ಕಾರಿನ ಬಾಗಿಲಿಗೆ ಒರಗಿ ಇನ್ನೊಂದು ಸಿಗರೇಟು ತೆಗೆದು ಬಾಯಿಯಲ್ಲಿಡುತ್ತಿದ್ದ ಮಾಧವರಾಯರಿಗೆಕೇಳಿದಳು.

"ಅಲ್ಲ, ಮುಂದಿನ ಸಲ ಬಂದಾಗ ಹೋಗೋಣಲ್ಲ ಪ್ರೊಫೆಸರರ ಮನೆಗೆ," ಮಾಧವರಾಯರು ಸಿಗರೇಟ ಮರಳಿ ಬಾಯಲ್ಲಿಟ್ಟು ಕಡ್ಡಿಪೆಟ್ಟಿಗೆಗೆ ಕಡ್ಡೀ ಗೀರಿ ಸಿಗರೇಟು ಹೊತ್ತಿಸಿದರು. ಇಷ್ಟೇಕೆ ಇವಳಿಗೆ ಪ್ರೊಫೆಸರನಲ್ಲಿ ಹೋಗಲು ಆತುರ? ಅಂಥದೇನಾದರೂ ಸಂಬಂಧವಿತ್ತೇ ಇವರದು ! ಇದ್ದಪಕ್ಷದಲ್ಲಿ ಅವಳು ಅವನನ್ನೇ ಲಗ್ನವಾಗಬಹುದಿತ್ತಲ್ಲ— ನನ್ನಂಥ ವಿಧುರರನ್ನು ಬಿಟ್ಟು. ಈತನನ್ನು ನೋಡಿದರೆ ಈತ ಇನ್ನೂ ಲಗ್ನವಾದಂತಿಲ್ಲ—

"ಅಲ್ಲರಿ, ಪ್ರೊಫೆಸರ ಪ್ರಭು, ನಿಮ್ಮ ಲಗ್ನವಾಗಿದೆಯೇ ?"

"ಇಲ್ಲ"

"ಯಾಕೆ ?—ಮುಂಬಯಿಗೆ ಬನ್ನಿ, ಎರಡು ದಿನಗಳಲ್ಲಿ ಒಬ್ಬ ಒಳ್ಳೆಯ ಹುಡುಗಿ ಹುಡುಕಿ ನಿಮ್ಮ ಲಗ್ನಮಾಡಿ ಬಿಡೋಣ .. ಶಕೂಗ ಹೇಳಿರಿ ಹುಡುಕಲಿಕ್ಕೆ—" ಮಾಧವರಾವ ನಕ್ಕರು

"ಹುಂ, ಹೇಳಿರಿ—ಎಂಥಾ ಹುಡುಗಿ ಬೇಕು-ಸಿಂಧಿ ? ಪಾರಸಿ ? ಗುಜರಾತಿ ? ಪಂಜಾಬಿ ?—" ಶಕುಂತಲೆಯ ಕಣ್ಣು ತುಟಿಗಳ ಮೇಲೆ ನಗೆಯೇ ನಗೆ.

"ಲಗ್ನವಾಗುವದಾದರೆ ಒಬ್ಬ ಒಳ್ಳೆಯ ನಿಗ್ರೋ—ಹಬಸಿ ಹುಡುಗಿಯನ್ನೇ ಮಾಡಿ

ಕೊಳ್ಳಬೇಕೆಂದಿರುವೆ. ನಿಮ್ಮ ಮುಂಬೈಯಲ್ಲಿ ಎಲ್ಲಿಯಾದರೂ ಇದ್ದರೆ ಹೇಳಿರಿ."

"ಗುಡ್, ಬಕಪ್! ನೀಗ್ರೋ ಜನ ಬಹಳ ವಂಡರ್‌ಫುಲ್! ಮುಂಬೈಯಲ್ಲಿ ಸಿಗದಿದ್ದರೆ ಆಫ್ರಿಕೆಯಿಂದ ಇಂಪೋರ್ಟ ಮಾಡಿ ತಂದು ಕೊಡುವೆ," ಮಾಧವರಾವ ಬಿದ್ದುಬಿದ್ದು ನಕ್ಕರು.

ಲಗ್ನವಾಗುವದಾದರೆ? ಹೂಂ, ಈತ ಲಗ್ನದ ಆಶೆಯನ್ನೇ ಬಿಟ್ಟಂತಿದೆ. ಇಷ್ಟು ವರ್ಷ



ಚಿಕ್ಕವರ ಸಾಮರ್ಥ್ಯ

ಹುಲಿಯ ತುಟಿಗಳ ನಡುವೆ ನೊಣ-
-ಕುಳಿತುಕೊಂಡು
ಊಟ ಮಾಡುವ ದೃಶ್ಯ ಕೋತಿಗಳು-
ಕಂಡು
ಹೇಳಿದವು: ಈ ಪರಾಕ್ರಮ ನರನಿಗಿಲ್ಲ.
ಚಿಕ್ಕವರ ಸಾಮರ್ಥ್ಯ ದೇವರೇ ಬಲ್ಲ.

— ದಿನಕರ ದೇಸಾಯಿ

ಕಾಲೇಜಿನಲ್ಲಿದ್ದು ಒಂದು ಹುಡುಗಿಯನ್ನು ಹಿಡಿಯಲಾಗಲಿಲ್ಲವೇ? ನಾನು ಕಾಲೇಜಿನಲ್ಲಿದ್ದಿದ್ದರೆ ಕೃಷ್ಣನಾಗುತ್ತಿದ್ದೆ ಕೃಷ್ಣ! ಬಾಯರನ್ ಆಗುತ್ತಿದ್ದೆ, ಕ್ಯಾಸನೋವಾ ಆಗುತ್ತಿದ್ದೆ... ಆದರೆ ಈತ ಏನಿದ್ದಾನೋ ಯಾರಿಗೆ ಗೊತ್ತು? ಈ ಬ್ರಹ್ಮಚಾರಿಯ ಮನೆಗೆ ಇವಳೊಬ್ಬಳೇ ಹೋಗುವ ಹೊಂಚು ಯಾಕೆ ನಡೆದಿದೆಯೋ? ಆದರೆ ನಾನೇಕೆ ಸುಳ್ಳೇ ಸಂಶಯಪಡಬೇಕು? ನಾನಂತೂ ಇವಳಿಗೇನೂ ಕಡಿಮೆ ಮಾಡಿಲ್ಲ. ಇವಳು ತನ್ನ ಕನಸಿನಲ್ಲಿ ಎಣಿಸದಷ್ಟು ನಾನಿವಳಿಗೆ ಸುಖವನ್ನುಣಿಸಿದ್ದೇನೆ, ಐಶ್ವರ್ಯವನ್ನುಣಿಸಿದ್ದೇನೆ—ನನ್ನ ಸ್ತ್ರೀ ಅನುಭವದ ಅರ್ಕವನ್ನೇ ಇವಳಿಗೆ ಎರೆದಿದ್ದೇನೆ. ಅವಳೂ ಎಂದೂ ಅಸಮಾಧಾನದ ಒಂದು ನಿಶ್ವಾಸ ಕೂಡ ಬಿಟ್ಟಿಲ್ಲ, ಅತೃಪ್ತಿಯ ಒಂದು ಕೊಂಕು ನುಡಿಯನ್ನೂ ಆಡಿಲ್ಲ. ಯಾವಾಗಲೂ ನಗು, ಯಾವಾಗಲೂ ತೃಪ್ತಿ. ಯಾವಾಗಲೂ ಉತ್ಸಾಹ. ಕೈಗೆ ಕೈ, ಎದೆಗೆ ಎದೆ, ಕಣ್ಣಿಗೆ ಕಣ್ಣು, ತುಟಿಗೆ ತುಟಿ— ಯಾವಾಗಲೂ ಸಹಕಾರ, ಸಹೃದಯತೆ! ಹೀಗಿದ್ದಾಗ ಅವಳಲ್ಲಿ ಕುಹಕತನ, ಹೊಂಚುಗಾರಿಕೆ, ನಾನೇಕೆ ಕಾಣಬೇಕು? ಬೇಕಾದರೆ ಹೋಗಲಿ—ನನಗೆ ಭೂತಕಾಲವಿದ್ದಂತೆ ಅವಳಿಗೂ ಭೂತಕಾಲವಿದೆ. ಅದರ ಕೂಡ ಈಗ ಅವಳು ಯಾವ ಒಪ್ಪಂದಕ್ಕೆ ಬರುವವಳಿದ್ದಾಳೆಂಬುದು ಅವಳ ಪ್ರಶ್ನೆ. ನಾನೇಕೆ ತಲೆಕೆಡಿಸಿಕೊಳ್ಳಬೇಕು ಸುಮ್ಮನೆ?

"ಶಕೂ, ಮುಂದೇನು ಮಾಡಬೇಕೆಂದಿ? ನೀನು ಮೊದಲು ಇವರ ಮನೆಗೆ ಹೋಗಿ ಆ ಮೇಲೆ ಜಜ್ಜ ಸಾಹೇಬರ ಮನೆಗೆ ಬರುವದು ಎಂದಾಯಿತಲ್ಲವೇ? ಅಚ್ಛಾ ಪ್ರೊಫೆಸರ್, ಹಾಗೇ ಮಾಡುವ. ಇವಳು ಮೊದಲು ನಿಮ್ಮಲ್ಲಿಗೆ ಬರ್‍ತಾಳೆ— ೪ ಗಂಟೆಗೆ. ನಂತರ ನಾನು ೫ ಗಂಟೆಗೆ ಕಾರು ಕಳಿಸುವೆ—ಅದರಲ್ಲಿ ಅವಳು ಜಜ ಸಾಹೇಬರ ಮನೆಗೆ ಬಂದುಬಿಡಲಿ."

ಮಾಧವರಾಯರ ಯೋಜನೆ ಸಂಪೂರ್ಣವಾಯಿತು.

"ಎಷ್ಟು ? ನಾಲ್ಕು ಗಂಟೆಗೇನೇ ?—ಆದರೆ ..."ಪ್ರಭು ಸ್ವಲ್ಪ ಗಡಬಡಿಸಿದ.

ಇವಳು ಬಂದು ಏನು ಮಾಡಲಿದ್ದಾಳೆ? ಮನೆಯಲ್ಲಿ ತಾಯಿಯಂತೂ ಇಲ್ಲ-ಊರಿಗೆ ಹೋಗಿದ್ದಾಳೆ. ಇವಳ ಕೂಡ ಒಂದು ತಾಸು ಹೇಗೆ ಕಳೆಯುವದು ? ಹೊಸ ದಿಟ್ಟತನದಿಂದ ಇವಳು ನನ್ನನ್ನು ಮೋಹದ ಬಲೆಯಲ್ಲಿ ಎಳೆಯಲು ಯತ್ನಿಸಿದರೆ? ಪಾಪ, ಇವಳ ಗಂಡ ಶುದ್ಧ ಪೆಚ್ಚನೆಂದು ಕಾಣಿಸುತ್ತದೆ, ಶುದ್ಧ ಹೆನ್-ಪೆಕ್ಡ್ ಇರಬೇಕು. (ಎರಡನೆಯ) ಹೆಂಡತಿಯ ಮನಸ್ಸನ್ನು ಎಳ್ಳಷ್ಟೂ ನೋಯಿಸಬಾರದೆಂದು ದಕ್ಷತೆ ವಹಿಸುತ್ತಿದ್ದಾನೆ ಪಾಪ ... ಏನಾದರೂ ಮಾಡಿ ಇವಳಿಂದ ತಪ್ಪಿಸಿಕೊಳ್ಳಬೇಕು ನಾನು. ಇಲ್ಲದಿದ್ದರೆ ಸುಮ್ಮನೆ ತೊಡಕು. ಯಾರಿಗೆ ಬೇಕಾಗಿದೆ ಲಗ್ನವಾದ ಹೆಣ್ಣಿನಜೊತೆ ಇಲ್ಲದ ತೊಡಕು. ಇವಳು ತನ್ನ ದಾರಿ ಹಿಡಿದು ಅಥವಾ ತನ್ನ ಕಾರು ಹೋದ ದಾರಿ ಹಿಡಿದು ಅದು ಒಯ್ದತ್ತ ಹೋಗಲಿ. ಸುಮ್ಮನೆ ನಮ್ಮ ಮನೆಗೆ ಬಂದು, ಅಸ್ತವ್ಯಸ್ತವಾದ ಖುರ್ಚಿ- ಕಾಟು- ಟೇಬಲ್ಲಗಳ ಮಧ್ಯದಲ್ಲಿ ಮಹಾರಾಣಿಯಂತೆ ಧಿಮಾಕಿನಿಂದ ಕೂತು ಎಲ್ಲವನ್ನೂ ತನ್ನ ಕೃಪಾದೃಷ್ಟಿಯಿಂದ ಸರಿಗೊಳಿಸಿ ಓರಣದಿಂದಿಟ್ಟು ನಗುತ್ತ- ಅಚ್ಚುಕಟ್ಟುತನವನ್ನು ನಿನಗೆ ಯಾರೂ ಕಲಿಸಿಲ್ಲವೇ ಈ ಜಗತ್ತಿನಲ್ಲಿ ಎಂದು ಕನಿಕರಪಟ್ಟು, ನಿನ್ನನ್ನು ಸಾಕಿ ಸಲುಹಲು, ನಿನ್ನ ನೆತ್ತಿ-ಹೊಟ್ಟೆ ನೋಡಲು ನಿನಗೊಬ್ಬ ಗಟ್ಟಿಮುಟ್ಟಾದ ಹೆಣ್ಣು ಬೇಕು ಎಂದು ಉಪದೇಶ ಮಾಡಿ, ಕೊನೆಗೆ ನಿನ್ನ ಕೂದಲು ಎಷ್ಟು ಅಸ್ತವ್ಯಸ್ತವಾಗಿವೆ ನೋಡು ಎಂದು ಅವುಗಳನ್ನು ಸರಿ ಮಾಡಲು ಮುಂದಾಗಿ, ನಿನ್ನ ತುಟಿ ಮೊದಲಿನಂತೆ ಮೃದುವಾಗಿಲ್ಲ ಎಂದು ನುಡಿದು, ನಾನೀಗ ಸಾಕಷ್ಟು ಲಠ್ಠಳಾಗಿದ್ದೇನಲ್ಲವೇ, ಮುಖ – ಹೋಗಲಿ ಮೈಯಾದರೂ ವೈಜಂತಿಮಾಲಾಳಂತೆ ಕಾಣುವದಿಲ್ಲವೇ ಎಂದು ನನ್ನನ್ನು ಕೂಲಂಕಷವಾಗಿ ಅಡಿಯಿಂದ ಮುಡಿಯವರೆಗೆ ಪರೀಕ್ಷಿಸಹಚ್ಚಿ, ನೋಡು, ಈಗಾದರೂ ನಾನು ಶಕುಂತಲೆಯನ್ನು ಸುಮ್ಮನೆ ಕಳೆದುಕೊಂಡೆನಲ್ಲ ಎಂದೆನಿಸುವದಿಲ್ಲವೇ ನಿನಗೆ ? ಎಂದು ಪ್ರಶ್ನಿಸದೆ ಇರಲಾರಳು.

"ಆದರೆ ? ಅಂದರೆ ಬೇರೆ ಏನಾದರೂ ಎಂಗೇಜಮೆಂಟ ಇದೆಯೇ ನಿಮಗೆ?" ಶಕುಂತಲೆಯ ಧ್ವನಿಯಲ್ಲಿ ಒಣ ಕುತೂಹಲವಿತ್ತು.

"ಹೌದು, ಎಮ್. ಎ. ವಿದ್ಯಾರ್ಥಿನಿಯೊಬ್ಬಳು ಪ್ಲೇಟೊ ಡಿಸ್ಕಸ್ ಮಾಡಲಿಕ್ಕೆ ಬರಲಿದ್ದಾಳೆ,"

"ಹೀಗೋ ? ಫಿಲೋಸಫಿಯಲ್ಲಿ ಇಷ್ಟು ಆಸ್ಥೆಯಿದ್ದ ವಿದುಷಿ ಯಾರು ?"

"ಮಿಸ್ ಉಷಾ ಜೋಶಿ. ಪುಣೆಯ ಫರ್ಗ್ಯೂಸನ್ ಕಾಲೇಜಿನಲ್ಲಿ ಬಿ. ಎ. ಮಾಡಿದಳಂತೆ. ಈ ವರ್ಷ ಇಲ್ಲಿ— ತಂದೆಯ ವರ್ಗವಾಗಿದ್ದರಿಂದಲೋ ಏನೋ— ನಮ್ಮ ಕಾಲೇಜಿಗೆ ಸೇರಿದ್ದಾಳೆ. ಬಹಳ ಹುಷಾರ ಹುಡುಗಿ—"

"ಕಾಣಿಸಲು ಚನ್ನಾಗಿದ್ದಾಳೆಯೇ ?" ಎಂದು ಕೇಳಿ ಶಕುಂತಲೆ ಜೋರಿನಿಂದ ನಕ್ಕಳು.

"ಚನ್ನಾಗಿದ್ದಾಳೆ. ಆದರೆ ಅದನ್ನು ತೆಗೆದುಕೊಂಡು ನಾನೇನು ಮಾಡಬೇಕಾಗಿದೆ ?"

"ಏನೆಂದರೆ— ಲಗ್ನ ?" ಶಕುಂತಲೆ ಇನ್ನಿಷ್ಟು ಜೋರಿನಿಂದ ನಕ್ಕಳು.

ಮಾಧವರಾವ ಹಾಗೂ ಪ್ರೊ. ಪ್ರಭು ಇಬ್ಬರೂ ನಕ್ಕರು.

"ಒಂದು ದೃಷ್ಟಿಯಿಂದ ನೀವನ್ನುವದು ನಿಜ.. ನಿಜವಾಗಿ ನೋಡಿದರೆ —ನಾನು ನಿಜಕ್ಕೂ ಅವಳನ್ನು ಲಗ್ನವಾಗಬೇಕೆಂದಿರುವೆ."

"ಕಂಗ್ರ್ಯಾಚುಲೇಶನ್ಸ !"

"ಕಂಗ್ರ್ಯಾಚುಲೇಶನ್ಸ, ಪ್ರೊಫೆಸರ ಪ್ರಭು! "

"ಥ್ಯಾಂಕ್ಸ ! ಆದರೆ— ಅವಳು ಒಪ್ಪಬೇಕಲ್ಲ." ಎಂದು ಪ್ರಭು ಜೋರಿನಿಂದ ನಕ್ಕ.

"ಹಾ ಹಾ ಹಾ— ಶೀ ವಿಲ್ ಶೀ ವಿಲ್—" ಮಾಧವರಾವ ನಕ್ಕರು.

"ಒಳ್ಳೇದು, ಮುಂದಿನ ಸಾರೆ ನಾವು ಬಂದಾಗ

ನಿಮ್ಮ ಕೈಗಳು ನಾಲ್ಕಾಗಿರಲಿ. ಪತ್ರಿಕೆ ಕಳಿಸುತ್ತೀರಿ ತಾನೇ?" ಶಕುಂತಲೆಯ ಪ್ರಶ್ನೆ "ಅಥವಾ ರಜಿಸ್ಟರ್ಡ ಗಂಧರ್ವ ವಿವಾಹವಾದರೆ?"ಒಂದು ಪ್ರಶ್ನೆಯ ಬೆನ್ನುಹತ್ತಿ ಮತ್ತೊಂದು ಪ್ರಶ್ನೆ.

"ಅದಕ್ಕಿಂತ ರಾಕ್ಷಸವಿವಾಹ ಮಾಡಿಕೊಂಡರೆ?" ಪ್ರಭುನ ಕಣ್ಣಲ್ಲಿ ಉನ್ಮಾದ ಮೂಡಿತು.

ಹಾ ಹಾ ಹಾ— ಹಾ ಹಾ ಹಾ......

"ಮತ್ತೆ ಭೆಟ್ಟಿಯಾಗೋಣ" ಮಾಧವರಾವ ಕೈ ಮುಂದೆ ಮಾಡಿದರು.

"ನಿಮ್ಮ ಗುರ್ತಾದದ್ದು ಚನ್ನಾಯಿತು."ಪ್ರಭು ಮುಂದೆ ಬಂದ ಕೈಯನ್ನು ಕುಲುಕಿದರು.

"ಮರೆಯಬೇಡಿರಿ ನಿಮ್ಮ ಹಳೇ ಕಲೀಗಳನ್ನು" ಶಕುಂತಲೆ ಕೈಜೋಡಿಸಿದಳು.

"ನೀವೂ ಮರೆಯಬಾರದು, ನಿಮ್ಮ ಹಳೇ ಕಲೀಗಸನ್ನು... ಮುಂದಿನ ಸಲ ಬಂದಾಗ ತಪ್ಪದೇ ಬರಬೇಕು... ಬಾಯ್ ಬಾಯ್." ಪ್ರಭು ಕೈ ಗಾಳಿಯಲ್ಲಿ ಅಲೆದಾಡಿಸಿದ.

ನಗು, ನಗು, ನಗು— ಕಾರಿನ ಒಳಗೆ, ಹೊರಗೆ ನಗು... ಕಾರು ಹೊರಟಿತು.

ಪ್ರೊ. ಪ್ರಭು ಕಾರಿನತ್ತ ನೋಡಿ ಮುಗುಳು ನಗೆ ನಕ್ಕು ತಾನು ಸುರಳೀತವಾಗಿ ಹೇಳಿದ ಸುಳ್ಳಿನ ಬಗ್ಗೆ ವಿಸ್ಮಯಬಡುತ್ತ ಮುಂದುವರೆದ.

"ಎಷ್ಟು ತಡವಾಯಿತಲ್ಲ, ಸಿನೇಮ ಸುರುವಾಗಿ ೧೦-೧೫ ಮಿನಿಟುಗಳಾಗಿರಬೇಕು." ಮಾಧವರಾವ ಗೊಣಗಿದ.

"ಏನು ಬರೇ ನ್ಯೂಜರೀಲ್ ಮುಗಿದಿರುತ್ತದೆ. ಮೇಲಾಗಿ ಅದು ಕಾಮೆಡಿ. ಯಾವಾಗ ಹೋದರೂ ಅಷ್ಟೆ! ಮಾರ್ನಿಂಗ್ ಶೋ ಎಂದ ಮೇಲೆ ಸೀಟು ಸಿಗುವ ತೊಂದರೆಯಿಲ್ಲ." ಎಂದು ಹೇಳಿ ತನ್ನ ಬದಿಗೆ ಬಿದ್ದ ಮಾಧವರಾಯರ ಕೈಯನ್ನು ತುಂಬ ದ್ವೇಷದಿಂದ ಮೆತ್ತಗೆ ಎತ್ತಿ, ತಿರಸ್ಕಾರದಿಂದ ಜೋರಾಗಿ ಒತ್ತಿದಳು.

"ಅದರಲ್ಲೇನು ಮಹಾ! ತಡವಾದರೆ ಆಯಿತು— ಸಿನೇಮಾ ನೋಡುವದೇ ಮುಖ್ಯವಲ್ಲವಲ್ಲ." ಎಂದು ತಮ್ಮ ಕೈಯಿಂದಲೇ ಅವಳ ಕೈಗೆ ಮಾಧವರಾವ ಕೇಳಿದರು—

"ಸ್ವಲ್ಪ ಸಾವಕಾಶ ಹೊಡಿಯಪ್ಪ ಗಾಡೀನ, ಶಂಕರ," ಎಂದು ಗಟ್ಟಿಯಾಗಿ ಆದೇಶಿಸಿದರು.

"ಹೂನರಿ," ಉತ್ತರ ಬಂತು.

ಪಾಪ, ಬಾಯಿಯವರ ಬಗ್ಗೆ ಸುಮ್ಮನೆ ಸಂಶಯ ಪಟ್ಟುಕೊಂಡೆ, ಹೋಗಲಿ— ನನ್ನ ಹೆಂಡತಿ ಒಬ್ಬಳೇ ಮನೆಯಲ್ಲಿ ಏನು ಮಾಡುತ್ತಿದ್ದಾಳೋ ಏನೋ? ತಿರುಗಿ ಹೋದೊಡನೆ ಅವಳಿಗೊಂದು ಸಿನೇಮಾ ತೋರಿಸಬೇಕು ಸಿನೇಮಾ... ಬದಿಯ ಖೋಲಿಯ ಪೋಸ್ಟಮನ್— ಅವನ ನಗೆಚಾಟಿಕೆಗೆ ಕೊನೆಯೇ ಇರುವದಿಲ್ಲ. ನಾನಿಲ್ಲದಾಗ ನಮ್ಮ ಖೋಲಿಯಲ್ಲಿ ಹಣಿಕಿ ಹಾಕಿ ತುಳಸೀ ಕೂಡ ನಗೆಚಾಟಿಕೀ ಮಾಡಿ, ಮಾಟ ಮಾಡಿ, ಅವಳನ್ನು ಡಬ್ಬಿಯಲ್ಲಿ ಹಾಕಿದರೆ— ಎಂದು ಸಂಶಯ ಬಂದುದೇ ತಡ, ಶಂಕರ ಎಕ್ಸಲರೇಟರ ಒತ್ತಿದ. ಅಂಬ್ಯಾಸಡರ್ ಸುಯ್ಯೆಂದು ಒಮ್ಮೆಲೆ ಮುಂದೆ ಹೋಯಿತು. ಮುಂದೆ ಒಂದು ಸಾಯಕಲ್ ಬಂತೆಂದು ಗಕ್ಕನೆ ಬ್ರೆಕ್ಕು ಒತ್ತಿ ಮತ್ತೆ ಬಿಟ್ಟ. ಕಾರು ಜಿಗಿ ಹೊಡೆದು ಮರಳಿ ಮುಂದೆ ಸಾಗಿತು.

ಶಕುಂತಲೆ ಮಾಧವರಾಯರ ಮೈ ಮೇಲೆ ಧಡಕ್ಕನೆ ಬಿದ್ದುಬಿಟ್ಟಳು. ಇಬ್ಬರೂ ಕುಕುಕು ನಕ್ಕರು. *





ಬೀchi

ಹೊಲಸು ಮಾತು, ಹಾಳು ಜೀವನ. ಹೌದು ಹೇಸಿ ಜನ ಅದು. ಆ ಬಾಳೇ ಹೀಗೆ. ತಿಪ್ಪೆಗುಂಡಿಗೆ ತಕ್ಕ ರಸ

ತಿಪ್ಪೆಗುಂಡಿಗೂ ಒಂದು ಸ್ಥಾನ ಇದೆ. ಬೀದಿಗೊಂದು ತಿಪ್ಪೆಗುಂಡಿ ಇದ್ದೀದಿದ್ದರೆ ಏನಾಗುತ್ತಿತ್ತು? ಬೇರಿನ್ನೇನು ಆಗಲು ಸಾಧ್ಯ? ಇಡೀ ಬೀದಿಯೇ ಒಂದು ತಿಪ್ಪೆ ಆಗುತ್ತಿತ್ತು. ಅವರಿವರೆರಚಿದ ಹೊಲಸನ್ನೆಲ್ಲ ಹೊಟ್ಟೆಯಲ್ಲಿಟ್ಟುಕೊಂಡು ಗಂಭೀರವಾಗಿ ಕೂಡುತ್ತದೆ ಪಾಪ! ಸ್ವಚ್ಛವಾಗಿರುವ ಪ್ರತಿಯೊಂದು ಬೀದಿಯೂ ಆಯಾ ತಿಪ್ಪೆಗುಂಡಿಗೆ ಚಿರಋಣಿಯಾಗಿರಬೇಕು. ಆ ನಿಯತ್ತು ಇಲ್ಲವಲ್ಲಾ!

ರಂಗನಾಯಕಿ ಗಲ್ಲಿಯಲ್ಲಿನ ಯುನಿವರ್ಸಲ್ ಬಾರ್ ಅಂತಹದೊಂದು ಮಾನವ ತಿಪ್ಪೆಗುಂಡಿ.

ಮಟನ್ ಮಾರ್ಕೆಟ್ ಹಿಂದಿದೆ ಈ ಗಲ್ಲಿ. ಮೂಗಿರುವವರಾರೂ ಗಲೀಜು ರಂಗನಾಯಕಿ ಗಲ್ಲಿಯಲ್ಲಿ—ಕ್ಷಮಿಸಬೇಕು, ರಂಗನಾಯಕಿ ಗಲೀಜು ಗಲ್ಲಿಯಲ್ಲಿ ಕಾಲಿಡಲು ಸಾಧ್ಯವೇ ಇಲ್ಲ. ಅಷ್ಟು ದೂರವಿರುವಾಗಲೇ 'ಎಚ್ಚರಿಕೆ ನಾನಿಲ್ಲಿದ್ದೇನೆ' ಎಂದು ಕೂಗಿ ಮೂಗಿಗೆ ಹೇಳುತ್ತದೆ ಈ ತುದಿಗಿರುವ ಮೂತ್ರಾಲಯ—ಹೌದು, ಇದು ಗಲ್ಲಿಯ ತಪ್ಪೇ? ಒಬ್ಬ ಮುನಿಸಿಪಲ್ ಕೌನ್ಸಿಲರ್ ಆದರೂ ಅಲ್ಲೊಂದು ಮನೆ ಮಾಡಿದ್ದಿದ್ದರೆ? ಗಲ್ಲಿಯ ದುರ್ದೈವ. ಪಾಪ!

ಮೂರನೆ ಮನೆ ಜನತಾ ಸಲೂನ—ಚಿನ್ನಮುನಿಸ್ವಾಮಿ ಅದರ ಮಾಲಕ. ಜನತಾ ಸಲೂನ್ ಇದಿರಿನಲ್ಲಿ ಟ್ಯೂಬ್‌ಲೈಟ್ ಪ್ರಕಾಶದಲ್ಲಿ ರಾರಾಜಿಸುವುದೇ ಯೂನಿವರ್ಸಲ್ ಬಾರ್. ಕತ್ತಲಾದ ನಂತರ ಸಲೂನಿಲ್ಲ, ಆಗದು ಬಾರ್ ಎಂಬ ಪಾಪಗೃಹಕೆ ಪಾಪಗೃಹ ಆಗುತ್ತದೆ. ಮೂಲೆಯಲ್ಲೊಂದು ಅಗ್ಗಿಷ್ಟಿಕೆ. ಪಿಂಜಾರಿ ರಮ್ಜಾನಿ ಕೆಂಡದಲ್ಲಿ ಮಾಂಸ ಸುಟ್ಟು ಚಾಕಣಾ ಮಾಡಿ ಕೊಡುತ್ತಾನೆ; ಅವನ ಆರೇಳು ವರ್ಷದ ಮಗ ಖಾದಿರ್‌ಲಿಂಗ ಬಾರ್ ಗಿರಾಕಿಗಳಿಗೆ ಸಪ್ಲೈ ಮಾಡುವುದು.

'ಯೂನಿವರ್ಸಲ್ ಬಾರ್' ಎಂದು ಹೊರಗಣ ಬೋರ್ಡ್ ಮೇಲಷ್ಟೇ ಇದೆ. ಎಲ್ಲರೂ ಅನ್ನುವುದು ಮಾಣಿಕ್ಯಂ ಬಾರ್ ಎಂದೇ. ಆ ಮಾಣಿಕ್ಯಂ ಸತ್ತು ಎಷ್ಟೋ ಕಾಲವಾಯಿತು; ಈಗದರ ಒಡೆಯ ಮಾಣಿಕ್ಯಂ ಮಡಗಿಕೊಂಡಿದ್ದ ಹೆಂಗಸಿನ ತಮ್ಮ. ಚಲಪತಿ ಅವನ ಹೆಸರು. ಚಲಪತಿ ಬಾರ್ ಎಂದು ಯಾರೂ ಅನ್ನಲಿಲ್ಲ, ಅಂದಿಗೂ ಇಂದಿಗೂ ಕೂಡ ಅದು ಮಾಣಿಕ್ಯಂ ಬಾರೇ

ನಡುರಾತ್ರಿ ದಾಟಬೇಕು ಹನ್ನೆರಡೂವರೆ, ಒಂದು ಘಂಟೆಯಿಂದ ವ್ಯಾಪಾರ ಸುರು ಇಲ್ಲಿ. ಬೆಳಗಿನ ಜಾವ ಮೂರು ಘಂಟೆಗೆ ಜನಜಾತ್ರೆ ಗಂಡು ಹೆಂಣು, ನಾಯಿ-ಮನುಷ್ಯ, ಮುದುಕ-ಹುಡುಗ, ಬಡವ-ಶ್ರೀಮಂತ ಎಂಬ ಯಾವ ಭೇದವೂ ಇಲ್ಲ ಎಲ್ಲರೂ ಮಾನವ ರಾಕ್ಷಸರೇ.

ಅಳು-ನಗು, ಚೀರಾಟ-ಕಿತ್ತಾಟ, ಚಾಕು-ದೊಣ್ಣೆ, ಮುತ್ತಿಡುವುದು-ಮುಖಕ್ಕೆ ಉಗಿಯುವುದು ಯಾವ ದೃಶ್ಯ ಬೇಕು ? ಸಾಕ್ಷಾತ್ ನರಕ. ಈ ನರಕದಲ್ಲಿ ಸ್ವರ್ಗವನ್ನು ಕಾಣುವ ಸುರರು ಇದರ ತುಂಬ.

ನರಕದೊಡೆಯ ಚಲಪತಿ ಕುರ್ಚಿಯ ತುಂಬ ಕೂಡುತ್ತಾನೆ. ನಿಗ್ರೋ ವೈ ಬಂಣ, ಡೊಳ್ಳು ಹೊಟ್ಟೆ ಮುಖವೆಲ್ಲ ಮೂಗು—ದ್ರಾವಿಡ ಮೂಗದು. ಅವನ ಮುಂದೊಂದು ಮೇಜು, ಅದರ ಮೇಲೆ ನೋಟುಗಳ ಕಂತೆ, ಹಣದ ರಾಶಿ. ಹಣವನ್ನು ಒಳಗಡೆ ಇಡುವ ಪರಿಪಾಠ ಚಲಪತಿಗಿಲ್ಲ. ಹಣ ಸದಾ ಕಾಣುತ್ತಿರಬೇಕು ಅವನ ಕಂಣಿಗೆ. ಅದೊಂದು ಬಗೆಯ ಕಂಣ್ರೋಗ ಅವನದು

ಬೇಯಿಸಿದ ಮಾಂಸದ ತುಂಡುಗಳನ್ನು ಬಿದಿರಿನ ಬುಟ್ಟಿಯಲ್ಲಿಟ್ಟು ಮಗನಿಗೆ ಒಪ್ಪಿಸಿ ರಮ್ಯಾನಿ ಬಾರ್‌ನಲ್ಲಿ ಬರುವುದು ಎರಡು ಗಂಟೆ ಮೀರಿದ ನಂತರ. ಅವನ ಕುರ್ಚಿ ಮಾಲಕರ ಕೋಣೆಯಲ್ಲಿ. ಅವನ ಕುಡಿತ ಮಾಲಕರೊಂದಿಗೆ. ಚಿನ್ನ ಮುನಿಸಾಮಿಗೆ ಕುರ್ಚಿ ಇಲ್ಲ, ಒಂದು ದೊಡ್ಡ ಕಟ್ಟಿಗೆ ಪೆಟ್ಟಿಗೆ ಇದೆ. ಅದವನ ಸ್ಥಾನ ರಾತ್ರಿ ಒಂದೂವರೆಗೆ ರೌಡಿ ರಾಜು ಬರುತ್ತಾನೆ. ಅವನಿದಿರಿನಲ್ಲಿ ಅವನಿಗಾರೂ ರೌಡೀ ರಾಜು ಎಂದಂದುದಿಲ್ಲ; ಅಂದು ಬದುಕುವುದು ಕಷ್ಟ. ಅಣ್ಣಾ ಅನ್ನಬೇಕವನನ್ನು. ಆ ಹೆಸರು ಅವನಿಗೆ ಬಹುಪ್ರಿಯ. ಮೂರು ಕಾಲಿನ ಮುರುಕು ಸೋಫಾ ಒಂದು ಗೋಡೆಗಾತು ಕುಳಿತಿದೆ. ಯಜಮಾನರ ಕುರ್ಚಿಯ ಪಕ್ಕದಲ್ಲಿ ಉಗ್ರ ನರಸಿಂಹ ಬಗೆದ ಹಿರಣ್ಯಕಶಿಪುವಿನ ಹೊಟ್ಟೆ ಅಂತಿದೆ ಅದು. ಆ ಸೋಫಾ ಅಂಣನ ಸಿಂಹಾಸನ. ಅದು ಅವನಿಗೇ ಮೀಸಲು, ಬೇರಾರೂ ಅದರಲ್ಲಿ ಕುಳಿತುದಿಲ್ಲ.

ಮಾಲಕ ಚಲಪತಿ ಅಪ್ಪಟ ವ್ಯವಹಾರಿಕ, ಸ್ನೇಹ ಬೇರೆ ವ್ಯವಹಾರ ಬೇರೆ ಅನ್ನುವ ಲೆಕ್ಕಾಚಾರದ ಮನುಷ್ಯ. ಮಾಣಿಕ್ಯಂ ಕಾಲದಿಂದ ಚಿನ್ನಮುನಿಸಾಮಿ, ರಮ್ಯಾನಿ ಆ ಬಾರ್ ಗಿರಾಕಿಗಳು. ಆದರೇನಂತೆ? ಕುಡಿದದ್ದಕ್ಕೆ ಕಾಸು ಅಲ್ಲಿಟ್ಟುಬಿಡಬೇಕು. ಸಾಲ ಹೇಳಿದರೆ ಮೈಮೇಲಿನ ಕೋಟು ಕಳಚು ಅನ್ನುವ ನಿಷ್ಠುರ ಸ್ವಭಾವ.

ಅಂಣನ ವಿಷಯ ಮಾತು ಬೇರೆ. ಮಾಣಿಕ್ಯಂ ಬಾರ್‌ನಲ್ಲಿ ಬಿಟ್ಟಿ ಕುಡಿತ ಮಾತ್ರ ಅಲ್ಲ, ಅವನು ಹೋಗುವಾಗ ಒಂದೆರಡು ರೂಪಾಯಿ ಕೇಳಿದರೆ, ಆ ತಕ್ಷಣ ಕೊಟ್ಟುಬಿಡಬೇಕು ಚಲಪತಿಯೇ ಈ ಪದ್ಧತಿ ಹಾಕಿದ್ದ. ಏಕೆ ? ಚಲಪತಿಗೆ ಅಂಣ ಬಾಡಿಗಾರ್ಡ್ ಮತ್ತು ಈ ಬಾರಿನ ಸೆಕ್ಯುರಿಟಿ ಆಫಿಸರ್ ಆತ.

ಕುದುರೆ ರೇಸ್ ಸೀಜನ್ನಿನಲ್ಲಿ ಕೊಯಂಬತ್ತೂರು ಕಡೆಯವರು ಮೂವರು ಮಾಣಿಕ್ಯಂ ಬಾರ್‌ನಲ್ಲಿ ನೆತ್ತಿಗೇರುವಷ್ಟು ಕುಡಿದು ಬಿಲ್ ಕೊಡಲು ತಕರಾರು ಮಾಡಿದರು ಒಮ್ಮೆ.



ಗ್ಲಾಸು ಒಡೆದು ಸಪ್ಲೈ ಹುಡುಗರನ್ನು ಹೊಡೆದು ರಂಪಾಟ ಹೂಡಿದರು. ಕಡೆಯಲ್ಲಿ ಪ್ರೊ॥ ಚಲಪತಿಗೆ (ಪ್ರೊ ಅಂದರೆ ಪ್ರೊಫೆಸರ್ ಅಲ್ಲ, ಪ್ರೊಪ್ರೈಟರ್) ಅದೇನೋ ಅಂದು ಬಿಟ್ಟರು ತಮ್ಮ ಮಾತಿನಲ್ಲಿ. ಪಂಚಾಯತಿ ಮಾಡಲು ಅಂಣ ಬಾಯಿಹಾಕಿದ. ಅವನನ್ನೇ ಬೈಯುವುದೇ ಅದೂ ಏನೆಂದು! ಒಬ್ಬ ಅಮ್ಮ ಅಂದುಬಿಟ್ಟ. ಇದೊಂದನ್ನು ಬಿಟ್ಟು ಬೇರೇನು ಅಂದಿದ್ದರೂ ಅಂಣ ಅಷ್ಟು ವ್ಯಗ್ರವಾಗುತ್ತಿರಲಿಲ್ಲ. ಅಂಣ ಮೇಲೆದ್ದ. ಕೆನ್ನೆಗೆ ಕೊಟ್ಟ, ಮೂರು ಹಲ್ಲು ನೆಲಕ್ಕೆ ಬಿದ್ದುವು. ಇನ್ನೊಬ್ಬನ ಮೂಗಿನಿಂದ ರಕ್ತ. ಮತ್ತೊಬ್ಬನ ಕೈ ಫ್ರಾಕ್ಚರ್. ರಿಸ್ಟ್‌ವಾಚ್, ಉಂಗುರ, ಫೌಂಟೆನ್ ಪೆನ್ ಎಲ್ಲವೂ ಅಲ್ಲಿದ್ದ ಗಿರಾಕಿಗಳಿಗೆ ಬಟವಾಡಿ ಆದುವು. ನೂರು ರೂಪಾಯಿ ನೋಟು ಚಲಪತಿ ಮೇಜಿಗೆ ಬಂತು. ತೊಯಂಬತ್ತೂರು ಭೂಜರು ಪೋಲಿಸ್ ಲಾಕಪ್ ಸೇರಿದರು.

ಅಂಣ ಮಾತ್ರ ಒಂದು ಕಾಸನ್ನೂ ಮುಟ್ಟಲಿಲ್ಲ; ಎರಡು ಪೆಗ್ ರಮ್ ಗಂಟಲಿಗೆ ಗಟಗಟ ಸುರಿವಿಕೆ ಬೀಸುತ್ತ ಮನೆಗೆ ನಡೆದ. ಖಾದರ್ ಲಿಂಗ ಓಡುತ್ತ ಬಂದು ಚಾಕಣಾದ ಕಾಗದ ಪೊಟ್ಟಣವನ್ನು ಅಂಣನ ಕೈಗಿತ್ತ, ನಿತ್ಯವೂ ಇದನ್ನು ಮನೆಗೊಯ್ಯುವ ವಾಡಿಕೆ ತಾಯಿಗೆ ಅದನ್ನು ತಿನಿಸಿ ಅಂಣ ಮಲಗಬೇಕು.

ಈ ಅಂಣನ ಬಳಿ ಚಲಪತಿ ಹಣ ತೆಗೆದುಕೊಳ್ಳುತ್ತಾನೆ? ಅಂಣನದು ದೈತ್ಯ ಶಕ್ತಿ, ಅದನ್ನವನು ಎಂದೂ ಉಪಯೋಗಿಸಿದುದಿಲ್ಲ. ಅಂದು ಮಾತ್ರವೇ ಹಾಗಾದುದು ವಿಷಘಳಿಗೆ. ಅದೂ ಒಂದು ದೃಷ್ಟಿಯಿಂದ ಒಳ್ಳೆಯದೇ ಆಯಿತು. ಬಾರ್‌ನಲ್ಲಿ ಅಂಣ ಇದ್ದಾನೆ ಅಂದರಾಯಿತು, ಹೇಮಾಹೇಮಿ ರೌಡಿ ಕೇಡಿಗಳು ಕೂಡ ತೆಪ್ಪಗಾಗುತ್ತಿದ್ದರು. ಒಂದಾನೊಂದು ಕಾಲದಲ್ಲಿ ವಿದ್ಯಾರ್ಥಿಗಳು ಹೆಡ್ಮಾಸ್ತರಿಗಂಜುತ್ತಿದ್ದಂತೆ ಅಂಜುತ್ತಿದ್ದರು.

ಅಂಣ ಚಿಕ್ಕಂದಿನಲ್ಲಿ ಗರಡಿ ಮಾಡಿದ್ದನೇ? ಬೇರಿನ್ನೇನು ಮಾಡಿದ್ದ ರಾಜು? ಜೀವನದಲ್ಲಿ ಅವನು ಮಾಡಿದ್ದುದು ಅದೊಂದೆ. ಒಳ್ಳೆಯ ಗರಡಿಯಾಳು. ಜಿದ್ದಾಜಿದ್ದಿ ಕುಸ್ತಿ ಹಿಡಿದು ಸೊಲ್ಲಾಪುರ ಪೈಲವಾನ ಖಾನ್‌ಗೆ ಮಂಣು ಮುಕ್ಕಿಸಿ, ಪೈಲವಾನಣ್ಣ ಎಂದು ಹೆಸರು ಪಡೆದ.

ಯಮುನವ್ವನ ಉಕ್ಕುವ ಪ್ರಾಯ ಎಂದೋ ಹಿಂದಾಗಿತ್ತು. ಆಕೆಗೆ ನಲವತ್ತು ವರ್ಷ ವಯಸ್ಸು, ರಾಜೀ ಹುಟ್ಟಿದಾಗ. ಇದೇ ಮೊದಲ ಮಗು, ಕಡೆಯದೂ ಇದೇ ಎಂದು ನಿಶಯಿಸಿಕೊಂಡಳು. ಕಂಣ ಬೊಂಬೆಯಂತೆ ಕಾಪಾಡಿಕೊಂಡಳು ಮಗನನ್ನು. ಅವರಿವರ ಮನೆಗಳಲ್ಲಿ ಮುಸುರೆ ತಿಕ್ಕಿದಳು. ಅಲ್ಲಲ್ಲಿ ಕೂಲಿ



ನಾಲಿ ಮಾಡಿದಳು, ಅಂಗಡಿಗಳಲ್ಲಿ ಕಸಗೂಡಿ ಸಿದಳು. ಒಂದೇ ಎರಡೇ ಪಾಪ! ಏನೆಲ್ಲ ಮಾಡಿದಳು ಈ ಮಗನ ಪಾಲನೆಗಾಗಿ. ರಾಜು ಶಾಲೆಗೆ ಹೋಗಿ ವಿದ್ಯೆ ಕಲಿಯಬೇಕು ಎಂಬ ಆಶೆ ಯಮುನವ್ವನಿಗೆ.

'ನೀನು ಡಾಕ್ಟರ್ ಆಗಬೇಕು ರಾಜಾ'

ಎಂದು ಮೆತ್ತಗೆ ಉಸಿರಿದಳು, ತೊಟ್ಟಿಲಲ್ಲಿ ಮಲಗಿ ನಿದ್ರೆ ಮಾಡುತ್ತಿದ್ದ ಆರು ತಿಂಗಳ ಮಗುವಿನ ಕಿವಿಯಲ್ಲಿ.

ಹೆತ್ತ ತಾಯಿಯ ಆಶೋತ್ತರಗಳು, ಮನ ದಲ್ಲಾಕೆ ಕಟ್ಟುವ ಗಾಳಿಗೋಪುರಗಳು ಏನೇನೋ, ಎಷ್ಟೆಷ್ಟೋ! ಫಲಿಸುವುದು? ಯಮುನವ್ವನ ಮಗ ಕಡೆಗೆ ರೌಡಿ ರಾಜು ಆಗಿ ಬಾರ್ ಪೈಲವಾನನಾದ.

ರಾಜೂನ ತಂದೆ ಯಾರು?

ಇದೇ ಪ್ರಶ್ನೆಯನ್ನು ರಾಜು ಚಿಕ್ಕವನಾಗಿ ದ್ದಾಗ ಕೇಳಿದ. ಯಮುನವ್ವ ಮಗನ ಬಾಯಿಯ ಮೇಲೆ ಬಲವಾಗಿ ಹೊಡೆದಿದ್ದಳು. ಮಗನೊಂದಿಗೆ ತಾನೂ ಅತ್ತು ಅತ್ತು ಸಾಕಾದ ನಂತರ ಮಗನ ಕೈಗೆ ತಿಂಡಿ ಇಕ್ಕಿ,

"ನಿನಪ್ಪ ದೇವರು ರಾಜೂ!"

ಎಂದು ಹೇಳಿದ್ದಳು. ತಿಂಡಿ ಸಿಕ್ಕ ಸಂತೋಷ ದಲ್ಲಿ ನಗುತ್ತ ರಾಜು ಆಟವಾಡಲು ಹೊರ ಗೋಡಿದ. ಯಮುನವ್ವ ಮುಸುಗಿಕ್ಕಿ ಮಲಗಿ ಹೋ ಎಂದತ್ತಳು, ಪಾಪ!

ಯಮುನವ್ವನಿಗೆ ಮಗು ಬೇಕಿತ್ತೆ? ಛೀ, ಪಾಪ ಪಾಪ!

ಹನ್ನೆರಡು ವಯಸ್ಸಿನಲ್ಲಿ ಮದುವೆ, ಹದಿಮೂ ರಕ್ಕೆ ವೈಧವ್ಯ.

ಹುಲಿಯ ಹಾಗಿದ್ದ ತಂದೆ ಕಾಪಾಡಿ ಕೊಂಡು ಬಂದರು

ಯಮುನವ್ವನ ತಂದೆ ಇನ್ನೆಷ್ಟುಕಾಲ ಬದುಕ ಬೇಕು? ತೊಂಭತ್ತು ತುಂಬಿದ ನಂತರ ತೀರಿ ಕೊಂಡರು. ಈ ಇಡೀ ಜಗತ್ತಿನಲ್ಲಿ ಯಮು ನವ ಒಬ್ಬಳೇ ಆದಳು. ಬಂಡೆ ಗುಂಡಿಗಳೂ, ಒಳಸುಳಿಗಳೂ, ಮೊಸಳೆ ತಿಮಿಂಗಲಗಳುಳ್ಳ ಸಾಗರದಲ್ಲಿ ತನ್ನ ಬಡ ಬಾಳದೋಣಿಯನ್ನು ತೇಲಿಬಿಟ್ಟಳು. ನವಯೌವನನಲ್ಲಿ ಭದ್ರವಾಗಿ ಕಾಯ್ದುಕೊಂಡು ಬಂದಿದ್ದ ಶೀಲ ನಲವತ್ತರ ನಂತರ ಅಪಹರಣವಾಗಬೇಕೆ? ಹೌದು, ದಡ ಸಮೀಪಿಸಿದಾಗಲೆ ಹಡಗು ಮುಳುಗುವುದು ಹೆಚ್ಚು.

"ಹುಳು ತೆಗೆಸಿ ಬಿಡು ಯಮುನೀ!"

ರಂಗಮ್ಮಜ್ಜಿ ಸಲಹೆ ಕೊಟ್ಟಳು. ಒಳೊಳಗೇ ಸಿಡಿಪಿಡಿ ಮಾಡಿದಳು ಯಮುನವ್ವ.

'ತಾನು ಎಷ್ಟು ಸಲ ಹುಳು ತೆಗೆಸ್ಯಾಳೋ ಈ ಚಾಂಡಾಲಜ್ಜಿ' ಎಂದು ಅಂದುಬಿಟಳು ಮನ ದಲ್ಲಿ.

ರಂಗಮ್ಮಜ್ಜಿ ಹೇಳಿದುದೇ ಸರಿ ಎಂದೆನಿಸಲು ಯಮುನವ್ವನಿಗೆ ಹೆಚ್ಚು ಕಾಲ ಬೇಕಾಗಲಿಲ್ಲ. ಅಕ್ಕಪಕ್ಕದವರ ಅರ್ಥಗರ್ಭಿತ ನಗು. ಏಟು ಪೋಟಿ ಮಾತು ಹೃದಯವನ್ನು ಚುಚ್ಚಿದವು. ಅದೇ ಅಜ್ಜಿಯ ಸಹಾಯ ಬಯಸಬೇಕಾ ಯಿತು.

ಯಮುನವನ ಎಲ್ಲ ಪ್ರಯತ್ನಗಳೂ ವ್ಯರ್ಥ ವಾಗಬೇಕೇ? ಬಹಳ ತಡವಾಗಿದೆ, ಇನ್ನು ಪ್ರಾಣಕ್ಕೇ ಅಪಾಯ ಎಂದಂದರು ಒಬ್ಬಿಬ್ಬರು.

"ಬ್ಯಾಡ ಬಿಡು. ಹೆಣ್ಣಾದರೆ ಒಳ್ಳೇದೆ ಆತು. ಮುಪ್ಪಿಗೆ ನಿನ್ನ ಜೋಪಾನ ಮಾಡ್ತಾಳೆ"

ಮೊದಲೇ ನೊಂದ ಜೀವ, ವಜ್ರಾಘಾತ ವಾದಂತಾಯಿತು ಯಮುನವ್ವನಿಗೆ.

"ನನ್ನ ಮಗಳೂ ಹೀಗೆ ಆಗಲಿ ಅಂತ ಆಶೀ ರ್ವಾದ ಏನಜ್ಜೀ ನಿಂದು?"

"ಇಲ್ಲ, ಗೌನರ್ ಆಗ್ತಾಳೆ ನಿನ್ನ ಮಗಳು. ಗರತಿ ಗಂಗಮ್ಮನ ಮಗಳನ್ನು ಕಂಡೂ ಕಂಡೂ ಯಾವನು ಮಾಡ್ಕೋತಾನೇ?"

ಇನ್ನು ಈ ಹಾಳಜ್ಜಿಯ ಮುಖವನ್ನೂ ನೋಡುವುದಿಲ್ಲೆಂದು ಶಪಥ ಮಾಡಿ ಎದ್ದು ನಡೆದಳು ಯಮುನವ್ವ.

ಗಂಡು ಮಗು ಎಂದು ಆಸ್ಪತ್ರೆಯಲ್ಲಿ ನರ್ಸ್

ಅಂದಾಗ ಯಮುನವ್ವ ಒಂದು ಕಂಣಿಂದ ಅತ್ತಳು ಇನ್ನೊಂದು ಕಂಣಿಂದ ನಕ್ಕಳು.

ಇದೆಲ್ಲ ಯಾವ ಕಾಲದ ಕತೆ? ಮುದುಕಿ ಯಮುನವ್ವ ನಾಲ್ಕು ದಿನ ಜ್ವರದಿಂದ ನರಳಿ ಇಂದು ಬೆಳಗಿನ ಜಾವ ಸತ್ತಳು. ಕಡೆ ಗಳಿಗೆ ಯವರೆಗೂ ಪ್ರಜ್ಞೆ ಇತು; ಬಾಯಿಯೂ ಇತ್ತು. ಮಗನೊಂದಿಗೆ ಬಹಳ ಹೊತ್ತು ಮಾತಾಡು ತ್ತಲೇ ಇದ್ದಳು. ಕಡೆ ಉಸಿರು ಬಿಟ್ಟು ಕಂಣು ಮುಚ್ಚಿದಳು. ಅದೇ ದಿನ ನಡುರಾತ್ರಿ ಯಾವಾ ಗಲೋ ಮೀರಿತ್ತು. ಘಂಟೆ ಸುಮಾರು ಮೂರು ಮೂರೂವರೆ ಇರಬೇಕು. ಮಾಣಿಕ್ಯಂ ಬಾರ್ ನಲ್ಲಿ ಜನಸಂದಣಿ ಕೊಂಚ ಕೊಂಚವಾಗಿ ಕಡಿಮೆಯಾಗುತ್ತ ಬಂದಿತ್ತು. ಬಾರ್‌ನಲ್ಲಿ ಜನ ಕಡಿಮೆಯಾದಂತೆಲ್ಲ ಬೀದಿ ತುಂಬ ಕುಡುಕರ ಓಡಾಟ. ಇಬ್ಬರು ತೂರಾಡುತ್ತ ಇದಿರು ಬರು ತ್ತಿದ್ದ ಕಾರ್‌ಗೇ ಅಡ್ಡಬಿದ್ದರು. ಕಾರು ನಡೆ ಸುತ್ತಿದ್ದವರೂ ಅಷ್ಟೇ ಚೆನ್ನಾಗಿ ಕುಡಿದಿದ್ದರು. ಆದಕಾರಣ ಯಾವ ಪ್ರಾಣಾಪಾಯವೂ ಆಗಲಿಲ್ಲ.

ಯಜಮಾನರ ಕೋಣೆಯಲ್ಲಿ ಮಾಮೂಲಿ ನಂತೆ ಇಂದ್ರಸಭೆ ಸಾಗಿತ್ತು. ರೂಪಾಯಿಗಳ ರಾಸಿ ಮುಂದು ಚಲಪತಿ ಕುಳಿತು ಅಗ್ಗದ ಓಡ ಗುಟುಕರಿಸುತ್ತಿದ್ದ. ರಮ್ಜಾನಿ, ಮುನಿಸಾಮಿ ಅವರವರ ಸ್ಥಾನಗಳಲ್ಲಿ, ಅಂಣ ತನ್ನ ಸಿಂಹಾಸನ ವನ್ನು ಅಲಂಕರಿಸಿದ್ದ. ಮುಂದಿದ್ದ ಗ್ಲಾಸು ಬಹು ಹೊತ್ತಿನಿಂದ ತುಂಬಿಯೇ ಇತ್ತು. ರಾಜು ಮುಟ್ಟಿರಲಿಲ್ಲ. ಸತ್ತ ತಾಯಿಯ ಬಗೆ ಮಾತಾ-ಡುತ್ತಲೇ ಇದ್ದ.

"ಇರಲಿ ತೆಕ್ಕೊ ರಾಜಣ್ಣಾ! ಪೂಜೆ ಮಾಡ್ತೀ ದೇನು ಗಿಳಾಸ್ನ?" ಎಂದಂದ ಚಲಪತಿ.

"ಬೇಡ ಬಿಡು ಚಲಪತಿ ಯಾಕೋ ಮುಜಗ ರಾಗ್ಯೆತೆ ಮನಸಿಗೆ. ನೀನೇ ತೆಕ್ಕೊ ಇದನ್ನೂ"

ರಾಜು ತನ್ನ ಮುಂದಿದ್ದ ಗ್ಲಾಸನ್ನು ಚಲ ಪತಿಯ ಮೇಜಿಗೆ ದಾಟಿಸಿದ.




'ಕೂಲಿಬೇಕೇ' ಅಂತ ಕೇಳ್ತಾ ಮನೇವರ್ಗೂ ಬಂದಿದಾನೆ... ಪಾಪ... ಹತ್ತು ಪೈಸೆ ಕೊಟ್ಟುಬಿಡಿ ಹೋಗ್ಲಿ...

"ರಾಜಣ್ಣ ಕುಡಿಯಾಕಿಲ್ಲೆ? ಯಾವೂರ ರಾಜಾನೋ ಸಾಯ್ತಾನಿವತ್ತು."

ಮುನಿಸಾಮಿ ನಿಡಿದು ನಕ್ಕು, ಕೈಲಿದ್ದ ತುಂಡು ಬೀಡಿ ಅಂಟಿಸಿದ. ರಹ್ಮಾನಿ, ಚಲಪತಿ ತಮ್ಮ ನಗೆಯನ್ನೂ ಸೇರಿಸಿದರು. ರಾಜು ಎರಡೂ ಕೈ ಮೇಲೆತ್ತಿ ಮೈಮುರಿದು ಬೆಕ್ಕಿನಂತೆ ಇಷ್ಟಗಲ ಬಾಯಿ ತೆರೆದು ಆಕಳಿಸಿದ.

ಕಾರ್ ಹಾರನ್ ಕೇಳಿಸಿತು.

"ಲಿಂಗಾ!"

ಎಂದು ಕೂಗಿದ ಚಲಪತಿ. ನಿದ್ರೆ ಕಂಣಿನಲ್ಲಿದ್ದ ಖಾದರ್‌ಲಿಂಗ್ ಕಾರ್‌ಬಳಿ ಓಡಿದ. ಮರುಗಳಿಗೆ ಮರಳಿ ಬಂದು ವರದಿ ಮಾಡಿದ.

"ಒಳ್ಳೆ ವಿಸ್ಕಿಬೇಕಂತೆ. ರೂಪ್ಯಾ ಇಲ್ಲಂತೆ. ಚೆಕ್ ಕೊಟ್ಟವ್ರೆ."

ಚೆಕ್ ಕೈಗೆತೆಗೆದುಕೊಂಡು ಚಲಪತಿ ಓದಿದ- "ರಂಗಾಚಾರಿ"

ಥಟ್ಟನೆ ಎದ್ದ ರಾಜಂಣ. ಅವನು ಹೊರ ಹೋದುದನ್ನು ಯಾರೂ ಗಮನಿಸಲೇ ಇಲ್ಲ.

ಮರುದಿನದ ಬೆಳಗಿನ ಪತ್ರಿಕೆ ದಪ್ಪಕ್ಷರಗಳಲ್ಲಿ ಸುದ್ದಿ ತಂದಿತು.

ಡಾಕ್ಟರ್ ರಂಗಾಚಾರಿಯವರ ಅಮಾನುಷ ಕೊಲೆ; ತಾನೇ ಕೊಲೆ ಮಾಡಿದವನೆಂದು ರೌಡಿ ರಾಜು ಪೋಲಿಸ್ ಸ್ಟೇಷನ್ನಿಗೆ ಹೋಗಿ ವರದಿ ಮಾಡಿದ್ದಾನೆ. ಡಾಕ್ಟರ ಅವರ ಸಹಿಉಳ್ಳ ಐದುನೂರು ರೂಪಾಯಿ ಚೆಕ್ ಒಂದು ಚೂರು ಚೂರಾಗಿ ಹೆಣದ ಮುಖದ ಮೇಲೆ ಎರಚಲ್ಪಟ್ಟಿದೆ.

ರಾಜ ಡಾಕ್ಟರನ್ನು ಏಕೆ ಕೊಂದ ?

ಸಾವು ಇನ್ನು ದೂರಿಲ್ಲ ಎಂಬರಿವಾಯ್ತು ಯಮುನವ್ವನಿಗೆ. ದಶಕಗಳಿಂದ ತನ್ನ ಎದೆಯಲ್ಲಿ ಬಚ್ಚಿಟ್ಟಿದ್ದ ಹಾಲಾಹಲವನ್ನು ಹೊರೆ ಹಾಕುವುದೇ ? ಬೇಡವೇ ? ಮನದಲ್ಲಿ ತುಮುಲ ವಿಪ್ಲವ. ಹಾಗೊಮ್ಮೆ ಹೀಗೊಮ್ಮೆ ಹೊಯ್ದಾಡಿತು ಯಮುನವ್ವನ ಅಂತರಾತ್ಮ. ಹೆತ್ತ ಮಗನಿಗೆ ದ್ರೋಹ ಮಾಡಲೇ ಎಂದು ತನ್ನನ್ನು ತಾನೇ ಪ್ರಶ್ನಿಸಿಕೊಂಡಳು. ಹೌದು ಹೇಳಲೇ ಬೇಕು. ಹೇಳಿಬಿಡು ಎಂದೆಂದಿತು ಒಳದನಿ

"ರಾಜಂಣಾ" ಎಂದಂದು ಮಗನ ಮುಖವನ್ನೊಮ್ಮೆ ದಿಟ್ಟಿಸಿ ನೋಡಿದಳು. ರಾಜೂನ ಕಂಣು ನೀರೂಡೆದಿತ್ತು. ಬೆನ್ನು ನೇವರಿಸಿ ಕ್ರಾಪಿನಲ್ಲೆಲ್ಲ ಕೈಯಾಡಿದಳು, ಮುಖವನ್ನು ಮುಟ್ಟಿದಳು. ಕ್ಷೀಣಸ್ವರದಲ್ಲಿ ಕತೆ ಉಸಿರಿದಳು.

ಯಮುನವ್ವನ ತಂದೆಗೆ ಕಾಯಿಲೆಯಾಗಿತ್ತು. ರೋಗಿಯನ್ನು ನೋಡಲು ಡಾಕ್ಟರು ಮನೆಗೆ ಬಂದರು. ಔಷಧಿ ಕೊಟ್ಟರು, ಮೇಲಿಂದ ಮೇಲೆ ಬಂದು ವಿಚಾರಿಸಿಕೊಳ್ಳುತ್ತಿದ್ದರು ಬಿಡಿ ಕಾಸನ್ನೂ ತೆಗೆದುಕೊಳ್ಳಲಿಲ್ಲ.

"ನನ್ನಪ್ಪ ಬದುಕಲಿಲ್ಲ. ಶನಿ ಮಾತ್ರ ಗಂಟು ಬಿತ್ತು."

ಎಂದಂದು ದೊಡ್ಡದಾಗಿ ಉಸಿರು ಹಾಕಿದಳು. ದಣಿವಾರಿಸಿಕೊಂಡು ಬಹು ಪ್ರಯಾಸದಿಂದ ಮುಂದುವರಿಸಿದಳು.

"ಅದೇ ಡಾಕ್ಟರೇ ನಿನ್ನ ಚಾಂಡಾಲ ತಂದೆ ರಾಜೂ!"

"ಹೆಸರೇನವ್ವಾ ?"

ಕಂಣು ಮುಚ್ಚಿ ಹೆಸರು ಉಸಿರಿದಳು. ಯಮುನವ್ವ ಮತ್ತೆ ಕಂಣು ತೆರೆಯಲಿಲ್ಲ.

ಪುತ್ರನಿಂದ ಮರಣ ಎಂದಿದ್ದಿತಂತೆ ಡಾಕ್ಟರ್ ರಂಗಾಚಾರಿಯ ಜಾತಕದಲ್ಲಿ. ಅದಕ್ಕಾಗಿ ಅವರು ಕಡೆವರೆಗೆ ಮದುವೆ ಆಗಲೇ ಇಲ್ಲ. *



**ಯಾವ ಕೆಲಸವನ್ನು ಶುದ್ಧ ಮನಸ್ಸಿನಿಂದ ಮಾಡಿರುತ್ತೇವೆಯೋ ಆ ಪರಿಣಾಮವೆಂದೂ ಅಶುಭವಾಗದು.**

**—ಗಾಂಧೀಜಿ**



# ನೆರಳು

"ಮಾಲತೀ..."

"ಓ",

"ಓ ಮಾಲತೀ..."

"ಬಂದೆ, ಸ್ವಲ್ಪ ತಡೀಯವ್ವಾ, ಹಾಲಿಟ್ಟೀನಿ ಸ್ಟೋ ಮ್ಯಾಲೆ."

"ಏ ಮಾಲತೀ..."

"ಬಂದೆ, ಒಂದು ಮಿನಿಟು."

"ಏ ಮಾಲತೀ, ಒಂದ್ಸಸವನ ಒದರಿಕೊಳ್ಳಿಕ್ಹತ್ತೀನಿ, ನಿನಗೇನರೆ ಖಬರದ ಏನು? ಒಂದ್ಸ ಮಿನಿಟು ಅಂತೀ, ಅಷ್ಟರಾಗ ನಾ ಸತ್ತರೂ ನಿನಗ ದರಕಾರ ಇಲ್ಲ. ನೀನೂ ನಿನ್ನ ಮಕ್ಕಳೂ ನಾ ಸಾಯೋ ಹಾದೀನೇ ಕಾಯ್ಲಿಕ್ಹತ್ತೀರಿ– ಈ ಮುದಕಿ ಎಂದ ಪ್ರಾಣಾ ಬಿಟ್ಟೀತೋ ಅಂತ–"

ಹಾಲು ಕಾಯದೇ ಇದ್ದರೂ ಸ್ಟವ್ ಆರಿಸಿ ಮಾಲತಿ ಅವಸರವಸರವಾಗಿ ತಾಯಿಯತ್ತ ನಡೆದಳು, "ಯಾಕ ಸುಮ್ನ ಅಭದ್ರ ಮಾತಾಡ್ತೀಯವಾ ಮುಂಜಾನೆದ್ದು? ಇಲ್ಲದ್ದ ವಿಚಾರ ಮಾಡಿ ತ್ರಾಸು ಮಾಡಿಕೋಬ್ಯಾಡಾ ಅಂತ ಡಾಕ್ಟರು ಹೇಳಿಲ್ಲೇನು?"

"ಆ ಡಾಕ್ಟರು ಸುಟ್ಟ ಬರ್ಲಿ. ಅವನಿಗೇನ ನನ್ನ ಜಡ್ಡು ಗುಣಾ ಮಾಡೂದು ಆಗೂದಿಲ್ಲ ಬಿಡು. ಮತ್ತ ನೀನೇ ಅವನಿಗೆ ಹೇಳಿಗೀಳಿಯೋ ಏನು ಲಗೂ ಸಾಯೋವಂತಾ ಔಷಧ ಕೊಟ್ಟ ಬಿಡೂ ಅಂತ."

---

ವೀಣಾ ಎಲಬುರ್ಗಿ

---

"ಹಿಂಗೆಲ್ಲಾ ಅನಬಾರದವ್ವಾ. ನನ್ನ ಯಾಕ ಕರದಿ ಹೇಳು ಲಗೂನ. ಇನ್ನೂ ಏನೂ ಕೆಲಸಾಗಿಲ್ಲ ನಂದು,"

"ನಿನ್ನ ಯಾಕ ಕರದೆ?"— ಮುದುಕಿ ಕ್ಷಣ ಹೊತ್ತು ವಿಚಾರಿಸಿದಳು. ಅವಳ ಮುಖ ಹುಚ್ಚಾ ಪಟ್ಟಾ ಆಗಿತ್ತು. ನಂತರ ಹಿಂದೆ ನೋಡುತ್ತ ಒಮ್ಮೆಲೆ ಬೆಚ್ಚಿ ಬಿದ್ದು ಅವಳೆಂದಳು, "ನೋಡು ಮಾಲತೀ, ಈ ಖೋಲಿಯೊಳಗ ಯಾರರೆ ಬಂದಿದ್ರೇನು?"

"ಇಲ್ಲಾ್ಯರು ಬರ್ತಾರವಾ? ನೀ ಒಬ್ಬಾಕೀನೇ ಇದ್ದೀಯಲ್ಲ."

"ನಿಮ್ಮಪ್ಪ ಸತ್ತಾಗಿನಿಂದ ನಾ ಒಬ್ಬಾಕೀನೇ ಇದ್ದೀನಿ ಅನ್ನೂದು ಗೊತ್ತದನs, ಆದರ ನೋಡು ನನ್ನ ಹಿಂದ ಏನೋ - ಯಾರೋ ಇದ್ದಾಂಗ ಅನಿಸ್ತು."

"ಹಿಂದೇನಿರ್ತದ? ನೆರಳು ಇದ್ದಿತು."

"ಹಾಂಗಂತೀಯಾ? ಆದರ ಕತ್ತಲಿದ್ದಾಗನೂ ನೆರಳು ಹ್ಯಾಂಗ ಕಾಣಸ್ತದ?"

"ಅವ್ವಾ, ಅದೆಲ್ಲಾ ನಿನ್ನ ಭ್ರಮಾ. ಇಷ್ಟಕ್ಕs ನನ್ನ ಕರದೇನು? ನಾ ಇನ್ನೂ ಅಡಗೀ ಮಾಡಬೇಕು. ಹುಡುಗ್ರು ಕಾಲೇಜಿಗೆ ಹೋಗೋ ಹೊತ್ತಾತು."

"ನಿನಗ ನಿನ್ನ ಗಂಡಾ - ನಿನ್ನ ಮಕ್ಕಳು ಇವರದು ಚಿಂತಿ. ಮುದಿಕಿ ತಾಯಿ ಹೆದರಿಕೊಂಡು ಪ್ರಾಣಾ ಬಿಟ್ರೂ ಅಡ್ಡಿಯಿಲ್ಲ. ಹೋಗು ಹೋಗು. ಮುಪ್ಪು ಬರೂ ತನಕಾ ಮನಷ್ಯಾ ಬದುಕಿರಬಾರದವಾ ಮಾಲತೀ, ಆದರ ಸಾವು ನನ್ನ ಕೈಯಾಗಿನ ಮಾತs .. ಹಿಂದಕೊಮ್ಮೆ ನಾ ಸಾಯಬೇಕಂತ ಮನಸು ಮಾಡಿದ್ದೆ. ಆಗ ಸತ್ತಿದ್ರ ಈ ಜಂಜಾಟ ತಪ್ಪಿತ್ತು. ಆವಾಗ ಏನಾತು ಗೊತ್ತದs ಏನು ನಿನಗ—"

ಮಗಳು ಆಗಲೇ ಅಡಿಗೆ ಮನೆ ಸೇರಿದ್ದು ನೋಡಿ ಮುದುಕಿಗೆ ಸಿಟ್ಟು ಮತ್ತಷ್ಟು ಹೆಚ್ಚಾಯಿತು. ಅವಳ ವಟವಟ ಮತ್ತೂ ಜೋರಾಯಿತು.

ಅವ ಸಿಟ್ಟಾದದ್ದು ಮಾಲತಿಗೆ ಗೊತ್ತಿದೆ. ಆದರೆ ಹಾಗೆಂದು ಅವಳು ಅವ್ವನ ಮುಂದೇ ಕೂತಿರಲು ಪುರಸೊತ್ತಿಲ್ಲ. ಇನ್ನೊಂದು ಗಂಟೆಗೆಲ್ಲಾ ಇವರು ಆಫೀಸಿಗೆ ಹೋಗುವ ಗಲಾಟೆ; 'ಅಮ್ಮಾ, ಇನ್ನು ಆಗಿಲ್ಲವೇ?' ಎಂದು ಕೂಗುವ ಮಗ ರಾಜ; 'ನಾನೂ ಹೊರಟೆ ಕಾಲೇಜಿಗೆ' ಎಂದು ಊಟ ಮಾಡದೆಯೇ ಹೊರಟು ಬಿಡುವ ಮಗಳು ಬೀನಾ ಅವಳಿಗಂತೂ ಸ್ವಲ್ಪವೂ ವಿವೇಕವಿಲ್ಲ. ಮದುವೆಯಾಗಿದ್ದರೆ ಅತ್ತೆ ಮನೆಯಲ್ಲಿ ಬಾಳಬೇಕಾಗಿದ್ದ ಹುಡುಗಿ. ಸಣ್ಣ ಮಗುವಿನಂತಾಡುತ್ತಾಳೆ. ಅಜ್ಜಿಯೊಂದಿಗಂತೂ ಮಕ್ಕಳಿಗೆ ಒಂದು ಕ್ಷಣ ಬಗೆಹರಿಯುವುದಿಲ್ಲ. ಇವರೆಲ್ಲರನ್ನು ಸಮಾಧಾನ ಮಾಡುವ ಹೊತ್ತಿಗೆ ಜೀವ ಬೇಸರವಾಗುತ್ತದೆ.

"ಏ ಮಾಲತೀ..."

ಮುದುಕಿಯ ಕರೆಗೆ ಓಗೊಡುವ ಮನಸ್ಸಾಗಲಿಲ್ಲ ಮಾಲತಿಗೆ. ಅವ್ವನ ಹಿಂದಿನ ಕತೆ ಕೇಳುವ ಇಚ್ಛೆಯೂ ಇಲ್ಲ, ಕೇಳುತ್ತ ಕೂಡಲು ಸಮಯವೂ ಇಲ್ಲ. ಕೇಳಿದ್ದೇ ಕತೆ. ಸಾವಿರ ಸಲ ಹೇಳಿದ್ದನ್ನೇ ಹೇಳುತ್ತ ಕೂಡುತ್ತಾಳೆ ಅವ್ವ. ಕೇಳುವವರು ನಿರುತ್ಸಾಹ ತೋರಿಸಿದರೆ ವಿಪರೀತ ಸಿಟ್ಟು ಬರುತ್ತದೆ ಆಕೆಗೆ. ಅದೇ ಕತೆ— ನಲವತ್ತು ವರ್ಷಗಳ ಹಿಂದೆ ಆಕೆ ಹೆಂಗಸ್ರ್ಯಾರೂ ಕಲಿಯದ ಕಾಲದಲ್ಲಿ ಕಲಿತು ಶಾಲೆಯಲ್ಲಿ ಮಾಸ್ತರಿಣಿಯಾದ ಸಾಹಸದ ಕತೆ; ಬಹಳ ದಿನ ಮದುವೆಯನ್ನು ನಿರಾಕರಿಸಿ ನಂತರ ಸೋದರ ಮಾವನನ್ನು ಮದುವೆಯಾದ ಕತೆ; ಮೊದಲ ಹೆರಿಗೆ ಬಹಳ ಕಷ್ಟವಾಗಿ ಮಾಲತಿ ಹುಟ್ಟಿದ ಕತೆ; ಮತ್ತು—

—ಮತ್ತು ಈ ಎಲ್ಲ ಕತೆಗಳ ನಡುನಡುವೆ ಅಲ್ಲಲ್ಲಿ ಹರಕು ಸೀರೆಗೆ ಹಚ್ಚಿ ಹೊಲಿದ ತೇಪೆಯಂತೆ ಬರುವ ಆ ಶೆಟ್ಟರ ಸದಾಶಿವರಾಯನ ಸುದ್ದಿ...ಕೇಳಿ ಕೇಳಿ ಮಾಲತಿಗೆ ಸಾಕಾಗಿದೆ. ಹಾಗೆಂದು ಹೇಳಿದರೆ, 'ನನ್ನ ಕಂಡರ ನಿಮಗ್ಯಾರಿಗೂ ಲಕ್ಷ ಇಲ್ಲ, ನಾ ಸಾಯೋ ಹಾದೀ

ಕಾಯ್ತೀರಿ ನೀವೆಲ್ಲಾ' ಎಂದು ಒದರಾಡಲು ಸುರು ಮಾಡುತ್ತಾಳೆ ಮುದುಕಿ.

ಯಾಕೆ ಹೀಗಾದಳು ತನ್ನ ಅವ್ವ ?

ಯಾಕೆ ? ಯೋಚಿಸಿ ಯೋಚಿಸಿ ಮಾಲತಿಗೆ ಸುಸ್ತಾಗಿದೆ. 'ಅರವತ್ತು ದಾಟಿದ ಮ್ಯಾಲ ಹೀಂಗ ಅಭ್ರುಮಶುಭ್ರುಮ ಆಗತದ ಕೆಲವರಿಗೆ. ಗಂಡ ಸತ್ತ ಮ್ಯಾಲ ಸ್ವಲ್ಪ ಜಾಸ್ತಿ ಆಗೇದ ನಿಮ್ಮ ಅವ್ವಗ. ನೀಯಾಕ ವಿಚಾರ ಮಾಡತೀ ಬಿಡು' ಎಂದು ಸಮಾಧಾನ ಮಾಡಿದ್ದ ಮಾಲತಿಯ ಗಂಡ. ಇದು ಹೀಂಗ ಹೆಚ್ಚಾಗಕ್ಕೋತ ಹೋದರ ಏನು ಮಾಡೋದು ಎಂದು ಅವಳಂದಾಗ ಹೆಚ್ಚಾದರೇನು ಅಂಥವರಿಗೆಲ್ಲಾ ಸ್ಪೇಶಲ್ ದವಾಖಾನೀನೇ ಅವ, ಅಲ್ಲ ಎಂದು ಹಗುರುವಾಗಿ ನಕ್ಕು ಬಿಟ್ಟಿದ್ದ ಆತ.

ನೆನಪಾದರೆ ಇನ್ನೂ ವ್ಯಸನದುಃಕ ಬರುತ್ತದೆ ಮಾಲತಿಗೆ. ಮಗಳು ತಾನು ಜೀವಿಸಿರುವಾಗ ಮುದುಕಿ ತಾಯಿಯನ್ನು ಹುಚ್ಚರಾಸ್ಪತ್ರೆಗೆ ಹಾಕುವುದೆ ? ತನ್ನ ಅವ್ವನಿಗೆ ನಿಜವಾಗಿಯೂ ಹುಚು ಹಿಡಿದಿದೆಯೆ ? ಏನೋ ! ಎಲ್ಲರೂ ಹಾಗೆ ಹೇಳುತ್ತಾರೆ. ತನಗೇಕೋ ಅದನ್ನೊಪ್ಪಲು ವಿಪರೀತ ಸಂಕಟ. ಆದರೆ ಅವನ ನಡವಳಿಕೆಯಂತೂ ಈಗೀಗ ವಿಚಿತ್ರವಾಗುತ್ತಿದೆ...ಅಪ್ಪ ಸತ್ತಾಗ ಅವ್ವ ಬಳೆ ತೆಗೆದಿರಲಿಲ್ಲ, ಕುಂಕುಮ ಅಳಿಸಿರಲಿಲ್ಲ. ಯಾರು ಹೇಳಿದರೂ ಅವಳ ಹಟವೇ ಹಟ. 'ನಾ ನನ್ನ ಜೀವನಾ ಎಲ್ಲ ಸಾಲೀ ಹುಡುಗರಿಗೆ ಪಾಠಾ ಕಲಸೂದರಾಗ ಕಳದೀನಿ. ನನಗೇನು ನೀವು ಕಲಿಸಬೇಕಾಗಿಲ್ಲರ್ಯೋ. ನನ್ನ ಗಂಡ ಸತ್ತೇ ಇಲ್ಲ ಅನಸತದ ನನಗ. ನಾ ಹ್ಯಾಂಗ ನನ್ನ ಕುಂಕಮಾ ಅಳಸಲಿ ?' ಎಂದೆಲ್ಲ ಬಡಬಡಿಸಿದ್ದಳು. ಅವಳೊಂದಿಗೆ ವಾದಿಸಿ ಫಲವಿಲ್ಲೆಂದು ತಿಳಿದಾಗ ಎಲ್ಲರೂ ಸುಮ್ಮನಾಗಿದ್ದರು.

ಆದರೆ ಅದೇ ಅವ್ವ ಇತ್ತೀಚೆ ಯಾರೂ ಹೇಳದೆಯೇ ಕುಂಕುಮ ಹಚ್ಚುವುದು, ತಲೆ ಬಾಚುವುದು ಎಲ್ಲ ಬಿಟ್ಟಿದ್ದಾಳೆ. ಅವಳ ಒದರಾಟ-ಬಡಬಡಿಸುವುದು ದಿನಾ-ದಿನಾ ಹೆಚ್ಚಾಗುತ್ತಿದೆ. ಈ ಮಧ್ಯೆ 'ಏನೋ ಬಂತು, ಯಾರೋ ಬಂಧಾಂಗಾತು' ಎಂದು ಬೇರೆ ಧಾಂಧಲೆ ಹಾಕತೊಡಗಿದ್ದಾಳೆ. ತನ್ನ ನೆರಳಿಗೆ ತಾನೇ ಹೆದರಿ ಕಂಗಾಲಾಗುತ್ತಾಳೆ. ಇತ್ತೀಚೆ...ತೀರ ಇತ್ತೀಚೆ ಆದದ್ದು ಅವಳಲ್ಲಿ ಈ ಪರಿಯ ಬದಲಾವಣೆ. ಒಮ್ಮೊಮ್ಮೆಯಂತೂ ಗಟ್ಟಿಯಾಗಿ ಧ್ವನಿ ತೆಗೆದು ಅತ್ತು ರಂಭಾಟ ಮಾಡಿ ಮಕ್ಕಳಿಗೆ ತುಂಬ ಬೇಸರವುಂಟುಮಾಡುತ್ತಾಳೆ.

—ಅಂದು ಹೀಗೇ ಆಯಿತಲ್ಲ! ರಾಜನ ಹುಟ್ಟಿದ ದಿನವೆಂದು ಅವನ ಸ್ನೇಹಿತರೆಲ್ಲ ಟೀಗೆ ಬಂದಿದ್ದರು. ಅವರೆಲ್ಲ ಡ್ರಾಯಿಂಗ್ ರೂಮಿನಲ್ಲಿ ಕೂತು ಅಂದಿನ ಪೇಪರಿನಲ್ಲಿ ಬಂದಿದ್ದ, ಅವ್ವನ ತವರೂರಿನಿಂದ ಅಸೆಂಬ್ಲಿಯ ಮೆಂಬರಾಗಿ ಆರಿಸಿ ಬಂದಿದ್ದ ಶೆಟ್ಟರ ಸದಾಶಿವರಾಯನ ಆಕಸ್ಮಿಕ ಮರಣದ ಬಗ್ಗೆ ವಿನೋದವಾಗಿ ಚರ್ಚಿಸುತ್ತಿದ್ದರು. 'ಇವನು ಪಕ್ಕಾ ಲಫಂಗ ಇದ್ದ ಬಿಡು' ಎಂದ ಒಬ್ಬ ಯಾವನೋ. ಕೂಡಲೇ ಒಳಗಿನ ಕೋಣೆಯಿಂದ ಚೀರಾಟ ಕೇಳಿಸಿತು. 'ಯಾವನೋ ಅವನು ಹಾಗಂದವನು ? ನಿನಗೇನು ಗೊತ್ತೋ ಹುಚ್ಚುಮುಂಡೇಗಂಡ ?'— ಎಂದು ಕೂಗಾಡುತ್ತ ಅವ್ವ ಹೊರಬಂದಳು. ರಾಜನ ಗೆಳೆಯರೆಲ್ಲ ಅವಳ ಅವತಾರ ಕಂಡು ಸ್ತಂಭಿತರಾಗಿದ್ದರು. ಅವಳ ಕೂದಲು ಕೆದರಿತ್ತು. ಬಳೆ ಒಡೆದುಕೊಂಡು ಕೈಗೆಲ್ಲ ರಕ್ತ ಬಂದಿತ್ತು. ಹಣೆಯ ಬೆವರಿನಿಂದ ಕುಂಕುಮವೆಲ್ಲ ಕರಗಿ ಹರಿದುಹೋಗಿತ್ತು. ಅವಳನ್ನು ಅಂದು ಸುಮ್ಮನಿರಿಸಬೇಕಾದರೆ ಸಾಕಾಗಿ ಹೋಗಿತ್ತು ಮಾಲತಿಗೆ.

ಗೆಳೆಯರನ್ನು ಬೀಳ್ಕೊಂಡು ಬಂದ ರಾಜ ಮಾಲತಿಯೆದುರು ಕೂಗಾಡಿದ್ದ: 'ನೀನೇ ನೋಡಿದೆಲ್ಲ ಮಮ್ಮಿ, ಗೆಳೆಯರ ಮುಂದ ನನಗಾದ ಅಪಮಾನ ? ಈ ಮುದುಕೀ ಸಲುವಾಗಿ ಮನೀಗೆ ಗೆಳೆಯಾರ್ನ ಕರಿಯೋದೂ ಕಠಿಣ ಆಗೇದ. ನಾ ನಿನಗ ಸಾವಿರ ಸರೆ ಹೇಳೀನಿ, ಆಕಿನ್ನ

ಮೆಂಟಲ್ ಹಾಸ್ಪಿಟಲಿಗೆ ಸೇರಿಸೋಣೂಂತ. ನೀ ಕೇಳೂದಿಲ್ಲ. ನಮಗೆಲ್ಲಾ ಆಕೀ ಕಾಲಾಗ ಪೂರಾ ತಲೀಕೆಟ್ಟು ನಾವೇ ಮೆಂಟಲ್ ಹಾಸ್ಪಿಟಲಿಗೆ ಹೋಗ್ತೀವಿ. ನೀವೂ- ನಿಮ್ಮಪ್ಪ ಆರಾಮಾಗಿರ್ರಿ."

ಒಣಗಿದ ಗಂಟಲಿನಿಂದ ಮಗನನ್ನು ಸಮಾಧಾನ ಮಾಡಲೆತ್ನಿಸಿದ್ದಳು, ಮಾಲತಿ; 'ಹಾಂಗನಬಾರದಪಾ ರಾಜೂ, ಆಕೀಗೆ ತಲಿಗೆ ತ್ರಾಸಾಗೇದಷ್ಟs ತಲೀ ಕೆಟ್ಟಿಲ್ಲ. ಇನ್ನಷ್ಟ ದಿವಸ ಸಹನ ಮಾಡಿಕೋಬೇಕು. ಆಕೀಗೂ ವಯಸ್ಸಾತು. ಇನ್ನೆಷ್ಟು ದಿವ್ಸ ಇರ್ತಾಳ?'

ಅವ್ವ ಹೇಳಿದಂತೆ ಅವ್ವನ ಸಾವಿನ ದಾರಿ ಕಾಯುತ್ತಿರುವೆನೇ ತಾನೂ ಸಹ? —ನಿಟ್ಟುಸಿರು ಬಿಟ್ಟು ಕೆಲಸ ಮುಂದುವರಿಸಿದಳು ಮಾಲತಿ.

ಅಂದೆಲ್ಲ ಅವ್ವ ಊಟ ಮಾಡಿರಲಿಲ್ಲ. ಮಾಲತಿ ಸೋತು ಸುಮ್ಮನಾಗಿದ್ದಳು. ರಾತ್ರಿ ಮಕ್ಕಳು ಮಲಗಿದ ನಂತರ ಅವ್ವನನ್ನು ಸಮಾಧಾನ ಮಾಡಲೆಂದು ಅವಳ ರೂಮಿಗೆ ಹೋಗಿದ್ದಳು-- ಹಗಲಿಡೀ ಒದರಾಡಿದ್ದ ಅವ್ವ ರಾತ್ರಿ ಹಾಸಿಗೆಯ ಮೇಲೆ ಮಲಗಿ ಕಣ್ಣೀರಿಡುತ್ತಿದ್ದಳು. ಮಾಲತಿಯ ಕರುಳು ಚುರ್ರೆಂದಿತು. "ಏನಾತವಾ? ಹೇಳು. ನನಗ, ನಿನ್ನ ಮಾಲತಿಗೆ, ಹೇಳೂದಿಲ್ಲೇನು?' ಎಂದು ಬಹಳ ಹೊತ್ತು ಒತ್ತಾಯಿಸಿದಾಗ, 'ಮಾಲೀ, ನಾ ಇವತ್ತ ವಿಧವಾ ಆದೆ.' ಎಂದು ಅತ್ತಿದ್ದಳು ಅವ್ವ.

ಎಂಥ ಮಾತು! ಬೆಚ್ಚಿದ ಮಾಲತಿ ಮೊದಲು ಸುತ್ತಲೂ ನೋಡಿದ್ದಳು— ರಾಜ ಬೀಸಾ ಯಾರಾದರೂ ಕೇಳಿಸಿಕೊಂಡರೇನೋ ಎಂದು. ಯಾರೂ ಇಲ್ಲದ್ದು ಕಂಡು ಸಮಾಧಾನವಾಗಿತ್ತು ಅವಳಿಗೆ. ಅಳುತ್ತಿದ್ದ ಅವ್ವನನ್ನು ರಮಿಸುವ ಮನಸ್ಸಿದ್ದರೂ ಇನ್ನೂ ಅಲ್ಲೇ ಕುಳಿತಿದ್ದರೆ ಏನೇನು ಕೇಳಬೇಕಾಗುವುದೋ ಎಂಬ ಭಯದಿಂದ ಮಾಲತಿ ಎದ್ದು ಬಂದಿದ್ದಳು.

ಹೌದು, ಅವ್ವ ಶೆಟ್ಟರ ಸದಾಶಿವರಾಯನನ್ನು ಚಿಕ್ಕಂದಿನಲ್ಲಿ ಪ್ರೀತಿಸಿದ್ದು ತನಗೆ ಗೊತ್ತಿದ್ದ ವಿಷಯವೇ. ಆ ಬಗ್ಗೆ ಅವ್ವ ತನ್ನೊಂದಿಗೆ ಮಾತ್ರ ಮನಬಿಚ್ಚಿ ಮಾತಾಡಿದ್ದಳು. ಬಹುಶಃ ಅಪ್ಪನಿಗೂ ಈ ವಿಷಯ ಪೂರಾ ಗೊತ್ತಿರಲಾರದು. ಅಕ್ಕನ ಮಗಳೆಂದು ಅವ್ವನನ್ನು ಮದುವೆಯಾಗಿದ್ದ ಅಪ್ಪ. ಅವರಿಬ್ಬರ ದಾಂಪತ್ಯದಲ್ಲಿ ತೊಡಕುಗಳೇನೂ ಇರಲಿಲ್ಲ. ಒಬ್ಬಳೇ ಮಗಳಾದ ತನ್ನನ್ನು ಅವರಿಬ್ಬರೂ ಬಹಳ ಪ್ರೀತಿಯಿಂದ ಬೆಳೆಸಿದ್ದರು. ಮದುವೆ ಮಾಡಿದ್ದರು. ಪೆನ್‌ಶನ್ ಆಗುವ ಹೊತ್ತಿಗೆ ಅವ್ವ ಗರ್ಲ್ಸ್ ಸ್ಕೂಲಿನ ಹೆಡ್‌ಮಿಸ್ಟ್ರೆಸ್ ಆಗಿದ್ದಳು. ಅವಳಿಗೆ ಎಲ್ಲರೂ- ಸ್ವತಃ ಏ. ಓ. ಸಾಹೇಬರೂ ಅಂಜುತ್ತಿದ್ದರು. ಅಂಥ ದರ್ಪದ ಹೆಂಗಸು ತನ್ನ ಅವ್ವ. ಮನೆಯಲ್ಲಿಯೂ ಹಾಗೇ. ಎಲ್ಲ ಅವಳು ಹೇಳಿದ ಹಾಗೇ ನಡೆಯುತ್ತಿತ್ತು. ವಿಧಿಯನ್ನೇ ತನ್ನ ಮನಬಂದ ಹಾಗೆ ತಿರುಗಿಸಿ ನಡೆಯಿಸುವ ಶಕ್ತಿಯುಳ್ಳ ಹೆಣ್ಣು ಆಕೆ ಗಂಡ-ಮಗಳು-ಅಳಿಯ-ಮೊಮ್ಮಕ್ಕಳು ಎಲ್ಲರ ಮಧ್ಯೆ ನಗುತ್ತ ತುಂಬು ಜೀವನಸಾಗಿಸಿದ್ದಾಕೆ... ಅಂಥವಳಿಗೆ ಈಚೀಚೆ ಹೀಗೆ ಆಗಿದೆ.

'ನಿಮ್ಮವ್ವಗ ದೆವ್ವ ಬಡಿದಿರಬೇಕ್ರೀ ಮಾಲತೀಬಾಯಿ, ಗುಡೀ ಮುಂದಿನ ಗಂಗಪ್ಪಶಾಸ್ತ್ರೀ ಕಡೆ ಕರಕೊಂಡು ಹೋಗ್ರಿ'— ಎಂದು ನೆರೆಮನೆಯಾಕೆ ಹೇಳಿದಾಗ ವಿಪರೀತ ಸಿಟ್ಟು ಬಂದಿತ್ತು ತನಗೆ. ದೆವ್ವವಂತೆ! ಛೆ, ತನಗಂತೂ ಅಂಥದರಲ್ಲೆಲ್ಲ ನಂಬಿಕೆಯಿಲ್ಲ. ಅಂತೂ ಒಟ್ಟು ಅವ್ವ ಪಡು ತ್ರಾಸನ್ನು ಈಗೀಗ ನೋಡಲಾಗುತ್ತಿಲ್ಲ ತನಗೆ. ಅವ್ವ ಇಷ್ಟು ವರ್ಷಗಳ ಆಯುಷ್ಯದಲ್ಲೆಲ್ಲಾ ತೋರಿಸಿದ್ದ ದರ್ಪ, ಗಂಡನೊಂದಿಗಿದ್ದಾಗ ಜಗತ್ತಿನಲ್ಲಿ ತನ್ನಷ್ಟು ಸುಖಿಗಳೇ ಇಲ್ಲವೆಂಬ ಧಾಟಿಯಲ್ಲಿ ನಗುತ್ತಿದ್ದ ಬಗೆ, ಮಗಳ ಬಗೆಗಿನ ಅವಳ ಉತ್ಸಾಹ, ಮಾಲತಿ ಗ್ರ್ಯಾಜುಯೇಟ್ ಆದಾಗ ಸ್ಕೂಲಿನ ಮಾಸ್ತರಿಣಿಯರಿಗೆಲ್ಲ ಅವ್ವ ಪಾರ್ಟಿ ಕೊಟ್ಟದ್ದು, ವಿಜೃಂಭಣೆಯೊಂದಿಗೆ ಎಂಜಿನಿಯರನೊಬ್ಬನೊಂದಿಗೆ ಮಾಲತಿಯ

ಮದುವೆ ಮಾಡಿದ್ದು, ನಂತರ ಮೊಮ್ಮಕ್ಕಳೊಂದಿಗೆ ಅಪ್ಪ ತಾನೂ ಮಗುವಾಗಿ ಕುಣಿದದ್ದು— ಎಲ್ಲವೂ, ಈ ಎಲ್ಲವೂ ಅಪ್ಪನ ಸಹಜ ಪ್ರವೃತ್ತಿಯಾಗಿರದೆ ಅವಳೊಳಗಿನ ಯಾವುದೋ ಅಸಹಜವಾದ ಏನೋ ಒಂದನ್ನು ಹತ್ತಿಕ್ಕಿಡುವ ಪ್ರಯತ್ನವಾಗಿತ್ತೇ— ಎಂದನಿಸುವದು ತನಗೆ ಈಗೀಗ ಒಮ್ಮೊಮ್ಮೆ.

ಹ್ಞ. ತನ್ನ ಅಪ್ಪ ಅವನನ್ನೇಕೆ ಮದುವೆಯಾಗಲಿಲ್ಲ ?

—'ಮಾಲೀ, ನಿನಗ ಗೊತ್ತದs ಏನು ? ನಾ ಸ್ಕೂಲಿನ್ಯಾಗ ಕಲಿಯೋವಾಗ ಸದಾಶಿವ ನನಗ ಇಂಗ್ಲೀಷು ಹೇಳಿಕೊಡತಿದ್ದ. ಅವನ ಲಗ್ನ ಆದದ್ದು ಗೊತ್ತಿದ್ರೂ ನಾ ಅವನನ್ನ ಪ್ರೀತಿ ಮಾಡತಿದ್ದೆ. ಪ್ರೀತಿಗೆ— ಲಗ್ನಕ್ಕ ಏನೂ ಸಂಬಂಧ ಇಲ್ಲಂತ ಅವನs ಹೇಳಿದ್ದ. ಆದರ---

ಮುಂದಿನ ಕತೆ ಗೊತ್ತಿದೆ ಮಾಲತಿಗೆ. ಅಪ್ಪನಂತೆಯೇ ಇನ್ನೂ ಬಹಳ ಹುಡುಗಿಯರಿಗೆ ಅವನು ಇಂಗ್ಲೀಷು ಹೇಳಿಕೊಡುತ್ತಿದ್ದುದು, ಅವರೆಲ್ಲರಿಗೂ ಅವನು ಪ್ರೀತಿಗೂ— ಲಗ್ನಕ್ಕೂ ಸಂಬಂಧವಿಲ್ಲವೆಂದು ಹೇಳುತ್ತಿದು ದು... ಅಪ್ಪನಿಗೆ ಈ ವಿಷಯ ಗೊತ್ತಾದಾಗ ಅವಳಿಗೆ ಬಹಳ ಶಾಕ್ ಆದದ್ದು, ಮುಂದೆ ಅವನು ಲಾ ಓದಲಿಕ್ಕೆ ಬೇರೆ ಊರಿಗೆ ಹೋದದ್ದು, ಎಲಿಕ್ಶನ್ನು ಸುಡುಗಾಡು ಅಂತ ರಾಜಕಾರಣ ಸೇರಿದ್ದು, ಮದುವೆ ಬೇಡವೆಂದು ಅಪ್ಪ ಕೆಲಸಕ್ಕೆ ಸೇರಿದ್ದು ಅನೇಕ ವರ್ಷಗಳ ನಂತರ ಬೇಸರವಾಗಿ ಅಪ್ಪನನ್ನು ಮದುವೆಯಾಗಲು ಒಪ್ಪಿದ್ದು, ಸದಾಶಿವರಾಯನನ್ನು ಮರೆತುಬಿಟ್ಟದ್ದು ...

ಹಳೆಯ ಕತೆ. ಅಪ್ಪನ ಹೃದಯದ ತೀರ ಒಳಗಿನ ಪದರಿನ ಕೆಳಗಿನ ಪಾತಾಳಗವಿಯೊಳಗುಳಿದಿರಬೇಕು ಅದು. ಮೇಲೆ ಮಾತ್ರ ಅಪ್ಪ ಗಂಭೀರ ಸ್ಥಿರ. ಎಲ್ಲ ಗೊತ್ತಿದ್ದೂ ಎಲ್ಲವನ್ನೂ ಸಹನೆಯಿಂದ ಎದುರಿಸಿ ಜೀವಿಸಿದ್ದೂ, ಮುಪ್ಪಿನ ದಿನಗಳಲ್ಲೇಕೆ ಹೀಗಾಗತೊಡಗಿದ್ದಾಳೆ ಅಪ್ಪ ?

"ಏ ಮಾಲತೀ..."

"ಏನವ್ವಾ ?"

"ಯಾರೋ ಬಂದಾರ ನೋಡs"

ಯಾರೇ ಬಂದಿದ್ದರೂ ಬಂದವರ ಹೆಸರು— ಕುಲಗೋತ್ರ ಎಲ್ಲವನ್ನೂ ಒಳಗಡೆ ಕೂತಿರುವ ಅಪ್ಪನಿಗೆ ಒಯ್ದು ತಿಳಿಸಬೇಕು. ಇಲ್ಲವಾದರೆ ಕೂಗಾಡಲು ಸುರು. ಈಗೀಗ ಅಪ್ಪ ಎಲ್ಲದರಲ್ಲೂ ಬಾಯಿಹಾಕಿ ಬೇಸರವುಂಟುಮಾಡುತ್ತಿದ್ದಾಳೆ. ಅವಳಿಗೆ ಎಲ್ಲರ ಬಗೆಗೆ ವಿಪರೀತ ಕುತೂಹಲ.

"ಏ ಮಾಲತೀ,"

"ಯಾರೂ ಇಲ್ಲವ್ವಾ, ಸುಮ್ಮಿರು."

"ಯಾರೋ ಮಾತಾಡ್ತಾರಲ್ಲs, ಸುಳ್ಳ ಯಾಕ ಹೇಳತೀ ? ನನ್ನ ಮಾತು ಅಂದ್ರ ಎಷ್ಟ ಅಲಕ್ಷ ನಿನಗ—"

ಮುಂದೆ ಕೇಳಲಾಗದೆ ಮಾಲತಿ ಎದ್ದು ಅಪ್ಪನ ಕೋಣೆಗೆ ಹೋಗಿ ಪಿಸುಧ್ವನಿಯಲ್ಲಿ ಹೇಳಿದಳು, "ಅವ್ವಾ' ದಯಮಾಡಿ ಬಾಯಿ ಮಾಡಬೇಡ. ಬೀನಾನ ಕ್ಲಾಸ್‌ಮೇಟು—ಆ ಹುಡುಗ ಚಂದು ಬಂದಾನ."

'ಚಂದೂನs ? ಅವನಿಗೆ ಒಳಗ ಬಂದು ನನ್ನ ಭೆಟ್ಟ್ಯಾಗಂತ ಹೇಳು. ನಾನs ಕೇಳತೀನಿ ಎಂದ ಲಗ್ನಾ ಮಾಡಿಕೋತಾನಂತ. ನೀ ಬೀನಾನ್ನ ಅವನ ಜೋಡಿ ಪಿನೇಮಾಕ್ಕ—ತಿರ‍ಗ್ಯಾಡ್ಲಿಕ್ಕೆ ಕಳಿಸಿ ಥಣ್ಣಗ ಕೂಡತೀ. ನಾಳೆ ಅವಾ ಎಲ್ಲೆರs ಹೋದರ ಏನ ಮಾಡತಿ? ಗಂಡಸರನ್ನ ನಂಬಬಾರದ, ಖೋಡೀ ಬೀನಾಗ ಏನೂ ತಿಳಿಯೂದಿಲ್ಲ. ಕರೀ ಇಬ್ರನ್ನೂ ಇಲ್ಲೆ ..?'

"ಅವ್ವಾ, ಪ್ಲೀಜ್, ಸ್ವಲ್ಪ ಸುಮ್ಮಿರು. ನಾ ಎಲ್ಲಾ ಹೇಳತೀನಿ."

ಮಾಲತಿಗೆ ಜೀವದ ಸುತ್ತು ಬಂದಿತ್ತು. ಚಂದುವಿಗೆಲ್ಲಿ ಕೇಳಿಸುವುದೋ ಎಂಬ ಭಯ ಅವಳಿಗೆ.

ಬೀನಾ ಬೆಳೆದ ಹುಡುಗಿ. ಚಂದುವನ್ನು ತಾನು ಪ್ರೀತಿಸುವುದಾಗಿಯೂ ಬಿ. ಎ. ಆದ ನಂತರ ತಾವಿಬ್ಬರೂ ಮದುವೆಯಾಗಲು

ನಿರ್ಧರಿಸಿರುವುದಾಗಿಯೂ ಹೇಳಿದ್ದಾಳೆ. ಬೇಡವೆಂದರೆ ಅವಳು ಕೇಳಲಿಕ್ಕೂ ಇಲ್ಲ. ಸುಮ್ಮನೆ ಇಲ್ಲದ ಹಗರಣ ಮಾಡುವುದರಲ್ಲಿ ಏನರ್ಥವಿತ್ತು? ಅವಳು ಚಂದುವಿನೊಂದಿಗೆ ಹೊರಗೆ ಹೋದಾಗಲೆಲ್ಲಾ ತಿರುಗಿ ಬರುವವರೆಗೂ ತನ್ನ ಹೃದಯ ಧಡಧಡಿಸುತ್ತಿರುತ್ತದೆ. ತಾನು ನಿಷ್ಕಾಳಜಿಯಿಂದಿರುವೆನೆಂದು ಅವ್ವನ ಆಕ್ಷೇಪಣೆ. ಯಾರಿಗೆ ಏನೆಂದು ತಿಳಿಸಿ ಹೇಳುವುದು?

—ಚಂದು ಹೋದೊಡನೆ ಬಿರುಗಾಳಿಯಂತೆ ಒಳನುಗ್ಗಿದಳು ಬೀನಾ, "ಓಹ್ ಮಮ್ಮಿ. ಇದು ಮನೀನೇ ಅಲ್ಲ. This is hell..hell, ಅಜಿಗೆ ಸುಮ್ನ ಒತ್ತಟ್ಟಿಗೆ ಕೂಡಲಿಕ್ಕಾಗೂದಿಲ್ಲೇನು? ಯಾಕ ಹಿಂಗ ತ್ರಾಸ ಕೊಡ್ತಾಳ ಎಲ್ಲಾರಿಗೂ? ಆಕೀಗೆ ಖರೇನs ತಲೀ ಪೂರಾ ಕೆಟ್ಟು ಹೋಗೇದ. ನಾ ಎಂದಿನಿಂದ ನೋಡಲಿಕ್ಹತ್ತೀನಿ, ನನ್ನ ಮ್ಯಾಲಂತೂ ಭಾಳ ಕಣ್ಣು ಈ ಮುದಕಿಗೆ. ನಾನು ಚಂದು ಇಬ್ಬರೇ ಇದ್ದಾಗೆಲ್ಲಾ ಆಕಿ ಖೋಲೀ ಸುತ್ತುಮುತ್ತ ಸುಳದಾಡತಿರತಾಳ. ಕಿಡಕಿಯೊಳಗಿನಿಂದ, ಬಾಗಿಲ ಸಂದಿಯೊಳಗಿನಿಂದ ಹಣಿಕಿ ಹಾಕತಾಳ. ಚಂದೂಗ ಇವತ್ತ ಅದರ ಸಂಶಯ ಬಂತು. And he got so wild, ಇನ್ನೊಮ್ಮೆ ಮನೀಗೆ ಬರೂದಿಲ್ಲಂತ ಹೇಳೀ ಹೋಗ್ಯಾನ ಆತ. ಮಮ್ಮಿ, ನಾ ಏನ್ಮಾಡ್ಲಿ ಹೇಳು? ಈ ಹುಚ್ಚಿನ್ನ ಮನ್ಯಾಗ ನೀ ಇಟಗೊಂಡಿರೋ ತನಕಾ ನಮಗ್ಯಾರಿಗೂ ಶಾಂತಿ ಇಲ್ಲ. ಆಕಿನ್ನ ಹಾಸ್ಪಿಟಲಿಗೆ ಅಥವಾ ಮುದಕರ ಸಲುವಾಗಿ ಬ್ಯಾರೆ ಆಶ್ರಮ ಇರತಾವಲ್ಲ ಅಲ್ಲೆ ಕಳಿಸಲಿಕ್ಕೆ ನೀ ಅಂತೂ ಒಪ್ಪೂದಿಲ್ಲ. ನಾನs ಈ ಮನೀ ಬಿಟ್ಟು ಹೋಗಿಬಿಡ್ತೀನಿ. This is too much..."

"ಸಹನ ಮಾಡಿಕೋಬೇಕು ಬೀನಾ, ಅವ್ವಗ ನಮ್ಮನ್ನ ಬಿಟ್ಟರ ಯಾರಿದ್ದಾರ ಹೇಳು? ಆಕೀಗೆ ವೊದಲ ತ್ರಾಸಾಗೇದ. ಇನ್ನ ಅಂಥಾ ಹೋಮ್ಸ್‌ಗೆ ಅಥವಾ ಹಾಸ್ಪಿಟಲಿಗೆ ಕಳಿಸಿದರಂತೂ ಆಕಿ-ಎದಿ ಒಡಕೊಂಡು ಪ್ರಾಣಾನೇ ಬಿಡತಾಳ."

"ಹಾಂಗಾದರ ಛಲೋನೇ ಆತು—"

"ಶಟಪ್ ಬೀನಾ, ಇನ್ನೊಂದು ಹತ್ತು ವರ್ಷಕ್ಕೆ ನಾನೂ ಮುದುಕಿ ಆಗ್ತೀನಿ. ಆವಾಗ ನನ್ನನ್ನೂ ನೀ ಒಯ್ದು ಅಲ್ಲೆ ಹಾಕುವಾಕೆ ಹೌದಲ್ಲೋ" —ಮಾಲತಿಯ ದನಿ ಅಸಹನೆಯಿಂದ ಕಂಪಿಸುತ್ತಿತ್ತು.

"Oh God! ನಿನ್ನ ಜೋಡೀ ವಾದಾ ಹಾಕೋದು ಕಠಿಣ ಮಮ್ಮಿ. ಆದರ ಒಟ್ಟ ಇಷ್ಟ ಕೇಳು—ನಿನಗ ಇವತ್ತೋ ನಾಳೆಯೋ ಸಾಯುವ ಮುದಕಿ ಬೇಕೋ ಅಥವಾ ಬಾಳಿ ಬದುಕುವ ನಿನ್ನ ಮಕ್ಕಳು ಗಂಡ ಬೇಕೋ ಅನ್ನೂದನ್ನ ನೀ ಈಗ ನಿರ್ಧಾರ ಮಾಡ್ಲಿಕ್ಕೇ



"...ನೀವು ಶಿಫಾರಸ್ಸು ಮಾಡಿ, ನನ್ನ ಮಗನಿಗೆ ಕಾಲೇಜಿನಲ್ಲಿ 'ಸೀಟ್' ಕೊಡಿಸಿದಿರಿ. ಈಗ ಫೇಲಾಗಿದ್ದಾನೆ. 'ಶಿಫಾರಸ್ಸು' ಮಾಡಿ 'ಪಾಸ್' ಮಾಡಿಸಬೇಕು ಸಾರ್..."

ಬೇಕು."—ಬೀನಾ ಹೆಜ್ಜೆ ಅಪ್ಪಳಿಸುತ್ತ ರೂಮಿಗೆ ಹೋದ ಸದ್ದಿನೊಂದಿಗೆ ಅವಳ 'ಹೆಲ್-ಹೆಲ್' ಕರಗಿಹೋಗುತ್ತಿತ್ತು ..

—ಬೀನಾ ಹೇಳಿದಂತೆ ಮನೆ ನಿಜವಾಗಿಯೂ ನರಕವಾಗುತ್ತಿದೆ ಇಂದೋ ನಾಳೆಯೋ ಸಾಯುವ ಮುದುಕಿ ತನ್ನ ಅವ್ವ ನಿಜ; ಆದರೆ ಇವರೆಲ್ಲ ಹೇಳುವಂತೆ ಆಕೆ ಖಂಡಿತ ಹುಚ್ಚಿಯಲ್ಲ. ತನ್ನ ಅವ್ವ, ಇಷ್ಟು ವರ್ಷ ಇಷ್ಟೊಂದು ಮೆರೆದಾಡಿದ್ದ ಅವ್ವ, ಹುಚ್ಚಿಯಾಗಲು ಸಾಧ್ಯವೇ ಇಲ್ಲ. ಅವ್ವನ ಕಣ್ಣೊಳಗೆ ಸದಾ ಜ್ವಲಿಸುತ್ತಿರುವ ಆ ಏನೋ ಒಂದು——ಹುಚ್ಚಲ್ಲ ಅದು, ಎಂಥದೋ ವೇದನೆ, ಎಂಥದರಿಂದಲೋ ಪಾರಾಗಬೇಕೆನ್ನುವ ಉತ್ಕಟ ಹವಣಿಕೆ—ತನ್ನ ಗಂಡ, ಬೀನಾ, ರಾಜ ಯಾರಿಗೂ ಅದು ತಿಳಿಯಲಾರದು.

ತನ್ನ ಗಂಡನ ಬಾಸ್‌ಗೆ ವರ್ಗವಾಗಿದ್ದರಿಂದ ಅಂದು ಆಫೀಸಿನ ಜನರೆಲ್ಲ ತಮ್ಮ ಮನೆಗೆ ಡಿನರ್‌ಗೆ ಆಮಂತ್ರಿತರಾಗಿ ಬಂದಿದ್ದರು. ಊಟದ ನಂತರ ಅವರೆಲ್ಲ ಕೋಕಾ-ಕೋಲಾ ಕುಡಿಯುತ್ತ, ಸಿಗರೇಟು ಸೇದುತ್ತ, ಗಟ್ಟಿಯಾಗಿ ನಗುತ್ತ, ಹಾಲ್‌ನಲ್ಲಿ ಯಾವುದೋ ಇಂಗ್ಲಿಷ್ ರಿಕಾರ್ಡ್ಸ್ ಕೇಳುತ್ತ ಕೂತಿದ್ದರು; ವರ್ಗವಾಗಿ ಹೋಗಲಿದ್ದ ಬಾಸ್ ಬೀನಾಳನ್ನು ಹಾಡು ಹೇಳಲು ಒತ್ತಾಯಿಸುತ್ತಿದ್ದ; ಫಿಲ್ಮ್ ಸ್ಟಾರ್ ಹಾಗೆ ಮೇಕಪ್ ಮಾಡಿಕೊಂಡಿದ ಅವಳು ಯಾವುದೋ ಹಿಂದಿ ಪಿಕ್ಚರಿನ ವಿರಹಗೀತೆ ಹಾಡಿದಾಗ 'ವಂಡರಫುಲ್' ಎಂದು ಅವಳ ಬೆನ್ನು ಚಪ್ಪರಿಸುತ್ತಿದ್ದ. ಅಡಿಗೆ ಮನೆಯಲ್ಲಿದ್ದರೂ ಹೊರಗೆ ನಡೆದದ್ದೆಲ್ಲ ತಿಳಿಯುತ್ತಿತ್ತು ಮಾಲತಿಗೆ. ಕೆಲಸದ ಗಡಿಬಿಡಿಯಲ್ಲಿ ಅವ್ವನನ್ನು ಮರೆತಿದ್ದಳು ಆಕೆ.

"ಮಮ್ಮೀ, ಮಮ್ಮೀ..." ಹೊರಗಿನಿಂದ ಬೀನಾ ಗಟ್ಟಿಯಾಗಿ ಕೂಗಿದಾಗ ಕೈಯಲ್ಲಿಯ ಕೆಲಸಬಿಟ್ಟು ಓಡಿಬಂದಳು ಮಾಲತಿ. "ಏನು? ಏನಾತು ಬೀನಾ?"

ಉತ್ತರದ ಅವಶ್ಯಕತೆಯಿರಲಿಲ್ಲ. ಕೆದರಿದ ಕೂದಲಿನ, ಮಾಸಿದ ಸೀರೆಯ ಅವ್ವ ತನ್ನ ಕೋಲು ಸಹಿತವಾಗಿ ಹೊರಗೆ ಬಂದು ಸೋಫಾದ ಮೇಲೆ ಆಫೀಸರುಗಳ ಮಧ್ಯದಲ್ಲಿ ಕೂತುಬಿಟ್ಟಿದ್ದಳು. ತನ್ನ ಗಂಡನ ಕೆಂಗಣ್ಣಿನ ದೃಷ್ಟಿಯನ್ನೆದುರಿಸುವ ಧೈರ್ಯವಾಗದೆ ಮಾಲತಿ ತಾಯಿಯ ಸಮೀಪ ಬಂದು ರಮಿಸುವ ಧ್ವನಿಯಲ್ಲಿ ಹೇಳಿದಳು, "ಒಳಗೆ ನಡೀ ಅವ್ವಾ."

"ನಾ ಒಲ್ಲೆವಾ ಒಲ್ಲೆ. ನನಗ ಅಂಜಿಕಿ ಬರ್ತದ, ಯಾರೋ ನನ್ನ ಹಿಂದಿಂದೇ ಇದ್ದಾಂಗ ಅನಸತದ"

ಅವ್ವ ನಿಜವಾಗಿಯೂ ಹೆದರಿದ್ದಳು. ಏನು ಮಾಡಲೂ ತೋಚದೆ ಇಲ್ಲದ ನಗೆ ತಂದು-ಕೊಂಡು ಎಲ್ಲರನ್ನೂ ನೋಡುತ್ತಾ ಪೆಚ್ಚುಧ್ವನಿಯಲ್ಲಿ ಹೇಳಿದಳು ಮಾಲತಿ, "ನನ್ನ ಮದರ್ ಬಹಳ ಸೋಶಿಯಲ್. ಇಷ್ಟು ವಯಸ್ಸಾದ್ರೂ ಬಹಳ ಹುರುಪು."

"ಹೆ ಹ್ಹೆ ಹ್ಹೆ" ಎಂದರು ಕೆಲವರು.

ನಂತರ ಬಹಳ ಹೊತ್ತುನಿಲ್ಲದೆ ಬಂದ ಅತಿಥಿಗಳೆಲ್ಲ ಒಬ್ಬೊಬ್ಬರಾಗಿ ಗುಡ್‌ನೈಟ್ ಹೇಳಿ ಹೊರಟುಹೋದರು.

—"ನಾ ಇಷ್ಟದಿವಸ ನಿನ್ನ ಸಲುವಾಗಿ ತಡ-ಕೊಂಡಿದ್ದೆ ಮಾಲತಿ, ಈಗ ನನಗ ಸಾಧ್ಯಿಲ್ಲ. ನಿನಗೆ ನಾ ಬೇಕಾಗಿದ್ರ ನಿನ್ನ ಅವ್ವನ್ನ ಬಿಡ-ಬೇಕಾಗತದ ನೀ. ತಿಳೀತಿಲ್ಲೊ? ಇಲ್ಲೆ ಹಾಸ್ಪಿ-ಟಲಿನ ಡಾಕ್ಟರು ನನಗ ಗುರುತಿದ್ದಾರ. ಅವರು ಹೊಸದಾಗಿ ಮುದುಕರ ಸಲುವಾಗಿ ಒಂದು ಹೋಮ್ ತೆಗದಾರ. ಅಲ್ಲೆ ಸೇರಸೂಣಂತ ನಿಮ್ಮವ್ವನ್ನ."— ದೃಢವಾದ ಧ್ವನಿಯಲ್ಲಿ ಹೇಳಿದ್ದ ಅವಳ ಗಂಡ...

ಮಾಲತಿಯಲ್ಲಿ ಉತ್ತರಿಸುವ ಶಕ್ತಿ ಇರಲೇ ಇಲ್ಲ.

*

ಎಲ್ಲರ ಒತ್ತಾಯದಂತೆ ಮುದುಕಿಯನ್ನು ಕಳಿಸಿ ಒಂದು ವಾರವಾಯಿತು. ಅವನ ರೂಮಿ-

ನ ಕಡೆ ಹಣಿಕಿಹಾಕಲೂ ಸಾಧ್ಯವಾಗಿರಲಿಲ್ಲ ಮಾಲತಿಗೆ. ಅವಳ ಮನಸ್ಸು ಶೂನ್ಯವಾಗಿದೆ. ಆವ್ವಾ, ನಿಮ್ಮೂರಿಗೆ ಹೋಗೋಣ ನಡಿ ಬರ್ತೀಯೇನು ?' ಎಂದು ಕೇಳಿದಾಗ ಮುದುಕಿಯ ಕಣ್ಣಲ್ಲಿ ಎಂಥದೋ ಬೆಳಕು ಮಿಂಚಿತ್ತು. ಆ ಬೆಳಕಿನಲ್ಲಿ ನೂರು ಕತೆಗಳ—ಸಾವಿರ ನೆನಪುಗಳ ಜೀವಂತ ದರ್ಶನವಾಗಿತ್ತು ಮಾಲತಿಗೆ. ಏನೂ ತಕರಾರು ಮಾಡದೆ, ಕೂಗಾಡದೆ, ವಿರೋಧಿಸದೆ ಹೊರಡಲು ತಯಾರಾಗಿದ್ದಳು ಅವ್ವ. ತಲೆಬಾಚಿ ಒಳ್ಳೆಯ ಸೀರೆ ಉಟ್ಟು 'ನಾನು ರೆಡಿ' ಅಂದಿದ್ದಳು ಅಳಿಯನೊಂದಿಗೆ ಟ್ಯಾಕ್ಸಿಯಲ್ಲಿ ಕೂತು ಬಾಗಿಲಲ್ಲಿ ನಿಂತ ಮಗಳ ಕಡೆ ತಿರುಗಿ 'ಟಾಟಾ' ಹೇಳಿದಾಗ ಮಾಲತಿಯ ಕಣ್ಣಿಗೆ ಕತ್ತಲು ಬಂದಂತಾಗಿತ್ತು. ಇನ್ನು ಮುಗಿಯಿತು ಅವ್ವನೊಂದಿಗಿನ ಸಂಬಂಧ. ಇನ್ನು ತಾವೆಲ್ಲ ಸುಖವಾಗಿರಬಹುದು. ಹೌದು.

ಆದರ ಅವ್ವ...?

ರಾಜ ದಿನಾ ಸಂಜೆ ಹೋಗಿ ಅಜ್ಜಿಯನ್ನು ನೋಡಿಕೊಂಡು ಬರುತ್ತಿದ್ದ. 'ಆಕಿ ಆರಾಮಿದ್ದಾಳ. ನೀ ಚಿಂತೀ ಮಾಡಬ್ಯಾಡ ಮಮ್ಮೀ' ಎಂದು ಹೇಳುತ್ತಿದ್ದ. 'ಆಕೀಗೇನು ಬೇಕಾದರೂ ಒಯ್ದುಕೊಡು ರಾಜೂ' ಎನ್ನುತ್ತಿದ್ದಳು ಮಾಲತಿ. ಅವ್ವನಿಗೆ ಪ್ರಿಯವಾದ ತಿನಿಸು ಕಳಿಸಿದಾಗ ಆಕೆ ಅದನ್ನು ತಿಂದಿರಲಿಲ್ಲವೆಂದು ಕೇಳಿ ರಾತ್ರಿಯಿಡೀ ಅತ್ತಿದ್ದಳು...

ಅಂದು ಸಂಜೆ ಬಂದ ರಾಜ ಹೇಳಿದ್ದ "ಅಜ್ಜಿ ತನ್ನ ಖೋಲಿಯೊಳಗೆ ತಲೆದಿಂಬಿನ ಕೆಳಗೆ ಡೈರಿ ಇಟ್ಟಾಳಂತ ಮಮ್ಮೀ, ಅದನ್ನ ತಂದು ಕೊಡೂಂತ ನಾಲ್ಕು ದಿವಸದಿಂದ ಹೇಳ್ಲಿಕ್ಹತ್ಯಾಳ. ನನಗೆ ನೆನಪ ಆಗಿರ್ಲಿಲ್ಲ."

ಅವನಿಗೇಕೆ ನೆನಪಾಗಬೇಕು ? ಅವನು ಹಾಸ್ಪಿಟಲಿಗೆ ಹೋಗುತ್ತಿದುದೂ ಮಮ್ಮಿಯ ಸಲುವಾಗಿ. ಅಜ್ಜಿಯ ಬೇಕುಬೇಡಗಳೊಂದಿಗೆ ಅವನದೇನು ಸಂಬಂಧ?—ತುಂಬ ಕಸಿವಿಸಿಯಾಯಿತು ಮಾಲತಿಗೆ; "ನಾ ಈಗ ಸಧ್ಯಾ ಹುಡಿಕಿ ಕೊಡ್ತೀನಿ ರಾಜೂ, ಈಗಿಂದೀಗ ಹೋಗಿ ಅದನ್ನ ಅವ್ವಗ ಕೊಟ್ಟ ಬಾ. ಆಮ್ಯಾಲೆ ಚಹಾ ಕುಡದೀಯಂತ. ಏನು ? ಶ್ಯಾಣ್ಯಾ ನನ್ನ ಮರಿ."

—ಅವ್ವನ ರೂಮಿನ ತುಂಬ ಕತ್ತಲು. ತಡವರಿಸುತ್ತ ಒಳಬಂದಳು ಮಾಲತಿ. ತಲೆದಿಂಬಿನ ಕೆಳಗೆ ಹರಿದ ರೇಶಿಮೆ ಸೀರೆಯ ತುಕಡಿಯಲ್ಲಿ ಸುತ್ತಿದ್ದ ಪುಟ್ಟ ಡೈರಿ. ನಡುವೆ ಸವೆದು ಹೋಗಿದ್ದ ಪೆನ್ಸಿಲಿನದೊಂದು ತುಣುಕು. ಏನು ಬರೆಯುತ್ತಿದ್ದಳು ಅವ್ವ ಈ ಡೈರಿಯಲ್ಲಿ ?

ಕಣ್ಣು ಕಿರಿದುಗೊಳಿಸಿ ಮಾಲತಿ ಕೊನೆಯ ಪೇಜಿನಲ್ಲಿ ಗೀಟುಗಳ ಹಾಗೆ ಕಾಣುತ್ತಿದ್ದ ಪೆನ್ಸಿಲಿನ ಗುರುತುಗಳ ಮೇಲೆ ದೃಷ್ಟಿಯೋಡಿಸಿದಳು:

ಒಣಗಿದ ಗಿಡದ ಹಾಗೆ ಕಾಣುತ್ತಿದ್ದ ಒಂದು ಚಿತ್ರ ಎಲೆ, ಹೂ—ಎಲ್ಲ ಮಕ್ಕಳು ಬರೆದ ಹಾಗೆ. ಕೊನೆಯಲ್ಲಿ ಸೊಟ್ಟ ಅಕ್ಷರಗಳಲ್ಲಿ ಎರಡು ಸಾಲು; 'ಸದಾಶಿವ, ನನ್ನ ಇಡೀ ಜೀವನ ನಿನ್ನ ಮರೀಲಿಕ್ಕೆ ಪ್ರಯತ್ನ ಮಾಡೋದ್ರಾಗ ವ್ಯರ್ಥ ಕಳೆದೆ. ನೀ ನನ್ನ ನೆರಳಾಗಿ ನನಗ ಬೆನ್ನುಹತ್ತಿರುವಿ. ನಿನ್ನ ನೆನಪಿನಿಂದ ನನಗ ಬಿಡುಗಡೀನೇ ಇಲ್ಲ. ಇಗಾ, ನಾನೂ ಬಂದೆ ತಡಿ, ಸದೂ...ಸದ್ಯಾ...?

—ಇನ್ನೇನು ಮಾಲತಿಯ ಕಣ್ಣೀರು ಕೆನ್ನೆಯ ಮೇಲೆ ಉರುಳಬೇಕು. ಬಾಗಿಲಲ್ಲಿ ರಾಜನ ಹೆಜ್ಜೆಯ ಸದ್ದು. ತಟ್ಟನೆ ಕಣ್ಣೊರೆಸಿಕೊಂಡು ಎದ್ದು ನಿಂತಳು ಆಕೆ, "ಇದನ್ನ ತಗೋ ರಾಜೂ, ಅವ್ವಗ ಕೊಟ್ಟ ಬಾ ಹೋಗು.'

*



# ಪುಣ್ಯಕ್ಷೇತ್ರಕ್ಕೆ ಹಾಕಿದ ಚಿನ್ನ

ರಾವಬಹಾದ್ದೂರ

ಅದೆಷ್ಟೋ ವರ್ಷಗಳಿಂದ ತಾನು ಎದುರು ನೋಡುತ್ತಿದ್ದ ದಿನವು ಇಂದು ಒದಗಿ ಬಂದಿತ್ತು. ತನ್ನ ಜನ್ಮಸಾಫಲ್ಯವಾದ ಸಂತೃಪ್ತಿಯ ಕಾಲ ಸನ್ನಿಹಿತವಾಗಿತ್ತು. ಗಂಗಾ ಸ್ನಾನದ ಕನಸು ನನಸಾಗುವ ಸಮಯ ತನ್ನ ಅಳವಿನಲ್ಲಿ ಬಂದ ಸಮಾಧಾನ ತಲೆದೋರಿತ್ತು. ತನ್ನ ಜೀವನದ ಅರವತ್ತು ವರ್ಷಗಳ ಸುದೀರ್ಘ ಕಾಲವು ಸಫಲವೆನಿಸುವ ಹೊತ್ತು ಇನ್ನು ಬಹಳ ದೂರವಿಲ್ಲವೆಂಬ ಭಾವನೆಯಿಂದ ಗಂಗಾಬಾಯಿಯು ಉತ್ಸಾಹಿತಳಾಗಿದ್ದಳು.

ಕಾಶಿ ಪಟ್ಟಣವು ಭೂಕೈಲಾಸ. ಸಾಕ್ಷಾತ್ ವಿಶ್ವೇಶ್ವರನು ನೆಲೆಸಿದ ಪುಣ್ಯ ಭೂಮಿ. ಸರ್ವ ಪಾಪ ಪರಿಹಾರ ಮಾಡುವ ಗಂಗಾಮಾತೆಯಿಂದ ಪುನೀತವಾದ ಪುಣ್ಯ ಕ್ಷೇತ್ರ. ಈ ಕ್ಷೇತ್ರದರ್ಶನದಿಂದಲೇ ಮನಸ್ಸಿಗೆ ಒಂದು ಬಗೆಯ ನೆಮ್ಮದಿ ಅನ್ನಿಸುವದು. ಗಂಗಾ ಸ್ನಾನದಿಂದ ಜನ್ಮಸಾರ್ಥಕ ಮಾಡಿಕೊಳ್ಳುವ ಹುಮ್ಮಸ್ಸಿನಿಂದ ಗಂಗಾಬಾಯಿ ಕ್ಷೇತ್ರ ಪುರೋಹಿತರನ್ನು ಕರೆದುಕೊಂಡು ಗಂಗಾ ಸ್ನಾನಕ್ಕೆಂದು ಹನುಮಾನ್ ಘಾಟದ ದಾರಿ ಹಿಡಿದಿದ್ದಳು.

"ನೋಡ್ರಿ, ಕೃಷ್ಣಾಚಾರ್ಯರೇ, ಗಂಗಾ ಸ್ನಾನ ಮಾಡಿದವರ ಪಾಪಗಳು ತೊಲಗಿ ಹೋಗುವವೆಂದು ಕೇಳಿದ್ದೇನೆ. ಪುಣ್ಯ ಸಂಚಯವಾಗುವದೆಂದು ನಿಮ್ಮಂಥವರು ಹೇಳಿದ್ದನ್ನು ನಂಬಿದ್ದೇನೆ. ಇಲ್ಲಿ ದೇಹವಿಟ್ಟವರಿಗೆ ಪುನರ್ಜನ್ಮವಿಲ್ಲ ಯಾವ ಭಯವಿಲ್ಲ. ಮೋಕ್ಷದ ಹೊರತು ಬೇರೆ ಗತಿ ಇಲ್ಲ. ಕೊಳಕು ಬಟ್ಟೆಯನ್ನು ಒಗೆದರೆಂದರೆ ಕೊಳೆಯು ಹೋಗಿ ಅದು ಶುಭ್ರವಾಗುವಂತೆ ಇಲ್ಲಿಗೆ ಬಂದು ಗಂಗಾ ಸ್ನಾನ ಮಾಡಿದವರ ಪಾಪವೆಲ್ಲ ತೊಳೆದುಹೋಗುವದು. ಇದು ನಿಜವೇ?" ಎಂದು ಕೇಳಿದಳು.

"ಸರ್ವಪಾಪ ಪರಿಹಾರಿಣೀ ಮೋಕ್ಷಪ್ರದಾಯಿಣಿ, ಇವು ಗಂಗಾಮಾತೆಯ ಮಹಿಮಾತಿಶಯಗಳಲ್ಲಿ ಮುಖ್ಯವಾಗಿರುವ ಒಂದೆರಡು ಅಂಶಗಳನ್ನು ವರ್ಣಿಸುವ ಪದಗಳು. ಪೂರ್ವ ಜನ್ಮದ ಪುಣ್ಯಫಲ ಒದಗಿ ಬಂದವರಿಗೆ ಈ ಗಂಗಾಮಾತೆಯ ದರ್ಶನ ಲಾಭ ಸಾಧ್ಯ. ದರ್ಶನದಿಂದಲೇ ಮನುಷ್ಯನು ಪುನೀತನಾಗುವನೆಂದು ಶಾಸ್ತ್ರಗಳಲ್ಲಿ ಹೇಳಿದ ಮಾತು. ಇನ್ನು ಸ್ನಾನ ಮಾಡಿದರೆ, ಗಂಗಾಜಲ ಪಾನ ಮಾಡಿದರೆ ಅವರ ಪುಣ್ಯ ಫಲ ಕೇಳಬೇಕೆ? ನೀವು ಪುಣ್ಯಾತ್ಮರು. ಮೋಕ್ಷ ಪ್ರಾಪ್ತಿಗೆ ಅಧಿಕಾರ ಸಂಪನ್ನರು. ಅಂತೆಯೇ ಈ ಗಂಗಾದರ್ಶನ, ಸ್ಪರ್ಶನ, ಸ್ನಾನ ಪಾನದ ಸದವಕಾಶ ಹೊಂದಿರುವುದು" ಎಂದು ಕೃಷ್ಣಾಚಾರ್ಯರು ಗಂಗಾಮಾತೆಯ ಮಹಿಮೆಯನ್ನು ಬಣ್ಣಿಸಿದರು.

"ಇಲ್ಲಿಯೇ ಹುಟ್ಟಿ ಇಲ್ಲಿಯೇ ಈ ತಾಯಿಯ ದಡದಲ್ಲಿ ಬೆಳೆದ ನಿಮ್ಮ ಪುಣ್ಯವೇ ಪುಣ್ಯ" ಎಂದು ಗಂಗಾಬಾಯಿ ಉದ್ಗಾರ ತೆಗೆದು ನರಳುತ್ತ ಹೆಜ್ಜೆ ಹಾಕಿದಳು.

ಅವಳ ಹಿಂದಿನಿಂದಲೇ ಹೆಜ್ಜೆ ಹಾಕುತ್ತಿದ್ದ ಕೃಷ್ಣಾಚಾರ್ಯರಿಗೆ ಈ ಮುದುಕಿಯ ಧಾರ್ಮಿಕ ಭಾವನೆಯನ್ನು ಇನ್ನಷ್ಟು ಜಾಗ್ರತಗೊಳಿಸಿ ಕೈಸಡಿಲು ಬಿಟ್ಟು ದಾನ ಧರ್ಮ ಮಾಡಿ

ಹೆಚ್ಚುವ ಆಸೆ ಪ್ರಬಲವಾಯಿತು. ಅಂತೆಯೇ ಅವನು "ಅಮ್ಮಾ ಅವರೇ, ಗಂಗಾ ಮಹಾತ್ಮೆ ಸಾಮಾನ್ಯವಿಲ್ಲ. ಲೋಕ ಪಾವನೆ ಈ ಮಹಾ ತಾಯಿ. ವಿಷ್ಣು ಪರಮಾತ್ಮನ ಪಾದದಿಂದ ಜನಿಸಿ, ಪರಶಿವನ ಜಡೆಯಲ್ಲಿ ತಂಗಿ, ಲೋಕ ಕಲ್ಯಾಣಕ್ಕಾಗಿ ಧರೆಗೆ ಇಳಿದು ಬಂದ ಲೋಕ ಪಾವನೆ. ಗಂಗಾಮಾಯಿ ಹರಿದ ನೆಲವೆಲ್ಲ ಹಸಿರು ಮುರಿಯುವದು. ಜನರಿಗೆ ಅನ್ನವನ್ನು ಧಾರಾಳವಾಗಿ ಕೊಟ್ಟು ರಕ್ಷಿಸುವವಳು. ಪಾಪಿಗಳ ಉದ್ಧಾರಕಳು ಯೋಗಿಗಳಿಗೆ ಆಶ್ರಯದಾತಳು. ಈ ಮಾತೆಯಿಂದ ನಮ್ಮ ದೇಶದ ನೆಲ ಧನ್ಯವಾಗಿದೆ. ನಮ್ಮ ದೇಶದ ಜನ ಪುನೀತರಾಗಿದ್ದಾರೆ. ಈ ತಾಯಿಯ ಸಾನ್ನಿಧ್ಯವಿರುವೆಡೆಗಳಲ್ಲಿ ಜನರು ಜನ್ಮಜನ್ಮಾಂತರದ ಪಾಪ ಲೋಪ ಹೊಂದಿ ಪುಣ್ಯಶಾಲಿಗಳಾಗಿರುವರು ಪುಣ್ಯವಿಶೇಷದಿಂದ ನಿಮಗೆ ಗಂಗಾ ಸ್ನಾನದ ಯೋಗ ಲಭಿಸಿದೆ."

"ನನಗೂ ಹಾಗೇ ಅನಿಸುವದು ಆಚಾರ್ಯರೇ" ಎಂದು ಗಂಗಾಬಾಯಿ ಹೇಳುವ ಹೊತ್ತಿಗೆ ಹನುಮಾನ್ ಘಾಟದ ಮೇಲೆ ಅವಳು ಬಂದು ತಲುಪಿದಳು.

"ಸ್ನಾನ ಮಾಡಿದ ಮೇಲೆ ಹೊಸ ವಸ್ತ್ರ ಧರಿಸಬೇಕು. ಸ್ನಾನದ ಕಾಲಕ್ಕೆ ಧರಿಸಿದ ವಸ್ತ್ರವನ್ನು ಇಲ್ಲಿಯೇ ಬಿಟ್ಟು ಬಿಡಬೇಕು" ಎಂದು



ಆಚಾರ್ಯರು ಸ್ನಾನದ 'ಮೊದಲೇ ಸೂಚನೆ ಕೊಡಲು ಮರೆಯಲಿಲ್ಲ.

"ಹಾಗಿದ್ದರೆ ಒಂದು ಪಂಚೆಯನ್ನುಟ್ಟುಕೊಂಡೇ ನೀರಿಗಿಳಿಯುವೆ" ಎಂದು ಗಂಗಾಬಾಯಿ ತಾವುಟ್ಟ ಸೀರೆಯನ್ನು ತೋಯಿಸದಿ

ರುವ ನಿರ್ಧಾರವನ್ನು ವ್ಯಕ್ತಪಡಿಸಿದರು.

"ತಮ್ಮ ಇಷ್ಟ. ಹಳೇ ವಸ್ತ್ರವನ್ನೂ ಹಿಂದಿನ ಪಾಪಗಳನ್ನೂ ಇಲ್ಲಿ ಸ್ನಾನ ಮಾಡಿ ತೊರೆಯುವಂತೆ ತೊರೆಯಬೇಕಾದುದು ಯಾತ್ರಾ ಪುಣ್ಯ ಪಡೆಯ ಬಯಸುವ ಯಾತ್ರಾರ್ಥಿಗಳ ಕರ್ತವ್ಯ. ಇದನ್ನು ತಿಳಿಸಿಹೇಳುವುದು ನನ್ನ ಧರ್ಮ. ನಮ್ಮ ಹಳೇ ವಸ್ತ್ರವನ್ನು ಬಿಡಲಾರೆ ಅನ್ನುವದು ಪಾಪದ ಹೊರೆಯನ್ನು ತೊರೆಯಲಾರೆ ಎಂದಂತೆ. ಯಾತ್ರೆಯ ಉದ್ದೇಶವನ್ನೇ ನಿರರ್ಥಕಗೊಳಿಸುವಂಥ ಮಾತು" ಎಂದು ಕೃಷ್ಣಾಚಾರ್ಯರು ವಿವರಣೆ ಕೊಟ್ಟು ಸಂಕಲ್ಪ ಹೇಳಲು ಪ್ರಾರಂಭಿಸಿದರು.

ನಡುಮಟ್ಟ ನೀರಿನಲ್ಲಿ ಪಂಜೆಯನ್ನುಟ್ಟು ಗಂಗಾಬಾಯಿಯವರು ನಿಂತುಕೊಂಡಿದ್ದರು. ಆಚಾರ್ಯರು ಘಾಟಿನ ಪಾವಟಿಗೆಯ ಮೇಲೆ ಶಾಲು ಹೊದ್ದುಕೊಂಡು ನಿಂತು ಕೇಶವಾಯ ಸ್ವಾಹಾ...ಎಂದು ಸಂಕಲ್ಪ ಪ್ರಾರಂಭಿಸಿ ಅಂದಿನ ತಿಥಿ, ವಾರ, ನಕ್ಷತ್ರ, ಯೋಗ, ಕರಣಗಳನ್ನೂ ಋತು, ಮಾಸ, ಪಕ್ಷಗಳನ್ನೂ ಉಚ್ಚರಿಸಿ, ಸರ್ವಪಾಪ ಹರೋಂ ಹಃ ಎಂದು ಗಂಭೀರವಾಗಿ ಸಂಕಲ್ಪವನ್ನು ಸಂಸ್ಕೃತದಲ್ಲಿ ಪಠಿಸಿ, "ನನ್ನ ಎಲ್ಲ ಪಾಪಗಳನ್ನೂ ಲೋಕಪಾವನೆ ಗಂಗಾಮಾತೆಯು ತೊಡೆದು ಹಾಕಲಿ. ಎಂದು ಗಂಗಾ ಮಾತೆಯಲ್ಲಿ ಪ್ರಾರ್ಥಿಸಿಕೊಂಡು ಮೂರು ಸಲ ಮುಳುಗು ಹಾಕಿರಿ" ಎಂದು ಕನ್ನಡದಲ್ಲಿ ಸಂಕಲ್ಪವನ್ನು ವಿವರಿಸಿ ಹೇಳಿದರು.

ಗಂಗಾಬಾಯಿ ನದಿಯ ನೀರಿನಲ್ಲಿ ಮೂರು ಸಲವೇ ಏಕೆ ಮೂವತ್ತು ಸಲ ಮುಳುಗು ಹಾಕಿದರು. ಪ್ರತಿ ಸಲವೂ ಅವರು ತಮ್ಮ ಆಯುಷ್ಯದಲ್ಲಿ ಮಾಡಿದ ಒಂದೊಂದೇ ಪಾಪಕೃತ್ಯಗಳನ್ನು ಸ್ಮರಿಸಿಕೊಂಡು ಅವುಗಳಿಂದ ಒದಗಬಹುದಾದ ಪಾಪವನ್ನು ತೊಡೆದುಹಾಕಲು ಗಂಗಾಮಾತೆಗೆ ಪ್ರಾರ್ಥಿಸಿಕೊಳ್ಳಲು ಮರೆಯಲಿಲ್ಲ

"ಚಳಿ ಹಿಡದೀತು. ಮೂರು ಸಲ ಮುಳುಗು ಹಾಕಿ ಬಿಟ್ಟರೆ ಸಾಕು. ಮೇಲೆ ಬನ್ನಿ" ಎಂದು ಆಚಾರ್ಯರು ಎಚ್ಚರಿಸಿದರು.

ಗಂಗಾಬಾಯಿ ನೀರಿನಲ್ಲಿದ್ದಾಗ ಚಳಿ ಹಿಡಿದಿರಲಿಲ್ಲ. ಮೇಲೆ ಬಂದ ಕೂಡಲೇ ಅವಳಿಗೆ ವಿಪರೀತ ಚಳಿ ಎನಿಸಿತು. ಮೈಗುಗ್ಗರಿಗಟ್ಟಿತು. ಒಣಗಿದ ಬಟ್ಟೆಯನ್ನು ಉಡುವಹೊತ್ತಿಗೆ ಅವಳು ಗಡಗಡ ನಡುಗಹತ್ತಿದಳು.

"ಐ ಸುಡ್ಲಿ. ಇದೆಲ್ಲಿಯ ಚಳಿ ಸೇರಿತs ತಾಯಿ. ನೀರಿನಲ್ಲಿಯೇ ಕುಳಿತಿದ್ದರೆ ನೆಟ್ಟಗಿತ್ತು ಅನಿಸತsದ, ಅಯ್ಯಯ್ಯ ಇದೇನು, ಮೈ ಎಲ್ಲಾ ತಿಂಡಿ. ಹೊಟ್ಟೆಯ ಮೇಲೆ, ಮೈ ಕೈ ಮೇಲೆ ಇವೇನು? ಗಾದರಿಗಳೇಕೆ ಏಳಹತ್ತಿದವು? ಪಿತ್ತ ಹೆಚ್ಚಾಗಿ ಪಿತ್ತ ಗಾದರಿ ಏಳುವವೋ ಏನೋ?" ಎಂದು ಗಂಗಾಬಾಯಿ ಒಟಗುಟ್ಟುತ್ತಲೇ ಪ್ರಯಾಸದಿಂದ ಒಣ ಬಟಿ ಉಟ್ಟಳು.

ಕ್ಷಣದಿಂದ ಕ್ಷಣಕ್ಕೆ ಅವಳ ಮೈ ತಿಂಡಿ ಬಿಡುವದು ಹೆಚ್ಚುತ್ತಲೇ ಇತ್ತು

"ಆಚಾರ್ಯರೇ, ಪಾಪ ಪರಿಹಾರವಾಗದವರಿಗೆ ಹೀಂಗೆಲ್ಲಾ ಮೈ ತುಂಬಾ ಗಾದರಿ ಏಳತಾವೇನ್ರೀ?" ಎಂದು ಗಂಗಾಬಾಯಿ ಕಾತರ ಸ್ವರದಲ್ಲಿ ಕೇಳಿದಳು

"ಗಂಗಾ ಸ್ನಾನ ಮಾಡಿದ ಮ್ಯಾಲೆ ಎಲ್ಲೀ ಪಾಪ ಬರಬೇಕರೀ. ನಿಮ್ಮ ಮೈಮನ ಎಲ್ಲಾ ನಿರ್ಮಲವಾಗಿ ನಿಮ್ಮ ಜನ್ಮಸಾರ್ಥಕವಾಗಿ ಹೋಗುವದು. ಗಂಗಾ ಸ್ನಾನ ಮಾಡಿದ ಮ್ಯಾಲೆ ಪಾಪ ಉಳಿಯುವುದೇ ಸಾಧ್ಯವಿಲ್ಲ" ಎಂದು ಕೃಷ್ಣಾಚಾರ್ಯರು ಅವಳಿಗೆ ಸಮಾಧಾನ ಹೇಳಿ ದಕ್ಷಿಣೆಗಾಗಿ ಕೈ ಮುಂದೆ ಚಾಚಿದರು.

"ಏನೋರೆಪ್ಪಾ, ನನಗೊಂದು ಥರಾನೇ ಆಗಲಿಕ್ಕೆ ಹತ್ತೇದ. ನೆಟ್ಟಗೆ ಮನಿಗೇ ನಡೀರಿ. ಅಲ್ಲಿಯೇ ನಿಮ್ಮ ದಕ್ಷಿಣೆ ಕೊಡತೀನಂತ. ಬರೂ ಮುಂದ ದುಡ್ಡು ತರಲಿಲ್ಲ. ಇಲ್ಲಿ ಕಳ್ಳರು ನಮ್ಮಂಥವರ ಬಟ್ಟೆಯನ್ನು ಸಹ ಕದೀತಾರಂತ ಕೇಳಿ ಹೆದರಿ ಹಣ ತರಲಿಲ್ಲ."

ಇಷ್ಟು ಹೇಳಿ ಗಂಗಾಬಾಯಿ ನಡಗುತ್ತಲೇ

ಮನೆಯ ದಾರಿ ಹಿಡಿದಳು. ಕ್ಷಣದಿಂದ ಕ್ಷಣಕ್ಕೆ ಅವಳ ಮೈ ಮೇಲೆ ಗಾದರಿಗಳು ಹೆಚ್ಚುತ್ತಲಿದ್ದವು. ಮೈ ತಿಂಡಿ ಬಿಡುವುದೂ ಹೆಚ್ಚಾಗುತ್ತಲಿತ್ತು.

ಮನೆ ಮುಟ್ಟುವುದೇ ತಡ, ಗಂಗಾಬಾಯಿ ಹಾಸಿಗೆಯ ಮೇಲೆ ಬಿದ್ದುಕೊಂಡು ದೊಡ್ಡ ಕಂಬಳಿ ಹೊತ್ತುಕೊಂಡಳು. ಆದರೂ ಚಳಿ ಕಡಿಮೆಯಾಗಲಿಲ್ಲ. ಅವಳು ಹಾಸಿಗೆಯಲ್ಲಿ ಪುಟಿದು ಪುಟಿದು ಬೀಳಹತ್ತಿದಳು.

"ಅಯ್ಯೊ, ನನ್ನ ಮೈ ತಿಂಡಿಗೆ ಔಷಧ ಹಚ್ಚಿರಿ" ಎಂದು ಅವಳು ಕೂಗಿಕೊಂಡಳು. ಮೆಣಸಿನ ಕಾಳನ್ನು ಕುಟ್ಟಿ ಪುಡಿ ಮಾಡಿ ತುಪ್ಪದಲ್ಲಿ ಕೂಡಿಸಿ ಅದನ್ನು ಮೈಗೆ ಸವರಿದ್ದಾಯಿತು. ಆದರೂ ಮೈ ತಿಂಡಿ ಕಡಿಮೆಯಾಗಲಿಲ್ಲ.

ಕೆಲವೇ ತಾಸುಗಳಲ್ಲಿ ಗಂಗಾಬಾಯಿಯ ಮೈಯಲ್ಲಿ ಜ್ವರ ಏರಿತು. ಮುಖ ಕೆಂಜಗ ಕಡಿದವರಂತೆ ರಕ್ತರಂಜಿತವಾಯಿತು. ಅವಳು ಹಾಸಿಗೆಯಲ್ಲಿ ಬಿದ್ದುಕೊಂಡೇ ಬಡಬಡಿಸಹತ್ತಿದಳು.

ಅವಳ ಸ್ಥಿತಿ ನೋಡಿ ಕೃಷ್ಣಾಚಾರ್ಯರಿಗೆ ಗಾಬರಿಯಾಯಿತು. ವೈದ್ಯರನ್ನು ಕರೆಸಿದರು. ಮಾಮೂಲಿ ಶೀತ - ಪಿತ್ತ ಜ್ವರವೆಂದು ಅವರು ಗುಳಿಗೆ ಕೊಟ್ಟು ಹೊರಟು ಹೋದರು.

ಗಂಗಾಬಾಯಿ ಜೊತೆಯಲ್ಲಿ ಬಂದ ಅಚ್ಯುತನೆಂಬ ಹುಡುಗನ ಹೊರತು ಅವಳ ಆರೈಕೆಗೆ ಬೇರಾರೂ ಇರಲಿಲ್ಲ. ಅಟ್ಟದ ಮೇಲಿನ ಕೋಣೆಯಲ್ಲಿ ಅವಳೇ ಅವಳು. ಅವಳ ಹಾಸಿಗೆಯ ಬಳಿ ಅಚ್ಯುತನೊಬ್ಬನೇ ನಿರ್ವಾಹವಿಲ್ಲದ್ದಕ್ಕೆ ಕೂಡ್ರಬೇಕಾಗಿತ್ತು.

ರಾತ್ರಿಯಾದಂತೆ ಗಂಗಾಬಾಯಿಯು ಬಡಬಡಿಸುವುದು ಹೆಚ್ಚಾಯಿತು. ಅವಳು ಆಡುವ ಮಾತುಗಳು ಅವನಿಗೊಂದೂ ಅರ್ಥವಾಗುತ್ತಿರಲಿಲ್ಲ.

"ಅಚ್ಯುತಾ, ನಿಮ್ಮ ಅಣ್ಣನಿಗೆ ಒಂದು ತಾರು ಕಳಿಸು. ನಾನು ಬದುಕುವ ಆಶೆ ಉಳಿದಿಲ್ಲ. ನನ್ನ ಅಂತ್ಯಸಂಸ್ಕಾರಕ್ಕೆ ಅವನು ಬರಲಿ" ಎಂದು ಗಂಗಾಬಾಯಿ ಹೇಳಿದವಳೇ, ಜ್ವರದ ಮಬ್ಬಿನಲ್ಲಿ—

"ನನ್ನ ಅಂತ್ಯ ಸಂಸ್ಕಾರ ಮಾಡಲು ಅವನಾರು? ಅಯ್ಯೋ ಅವನೊಬ್ಬ ನನ್ನ ದತ್ತಕ ಮಗನೇ! ಆಸ್ತಿ ನುಂಗಲು ಅವನು ನನ್ನ ದತ್ತಕ ಮಗನೆಂದು ಕೋರ್ಟಿನಲ್ಲಿ ನಾನು ಹೇಳಿದೆ. ಆದರೆ ಅವನು ದತ್ತಕ ಪುತ್ರನಾದದ್ದು ದೇಶಪಾಂಡೆ ರಾಮರಾಯನ ಆಸ್ತಿಯನ್ನು ಎತ್ತಿಹಾಕುವುದಕ್ಕೆ. ದೇಶಪಾಂಡೆ ರಾಮರಾಯನಾರೋ. ಕನಸಿನಲ್ಲಿಯೂ ಆ ಹೆಸರು ನಾನು ಕೇಳಿದವಳಲ್ಲ. ಆದರೂ ನಾನು ಅವನ ಧರ್ಮಪತ್ನಿ. ಅವನ ವಂಶವೃಕ್ಷ ಬೆಳೆಸಲು ಅನಂತನನ್ನು ದತ್ತಕ ತೆಗೆದುಕೊಂಡೆ ಎಂದು ಹಸಿ ಸುಳ್ಳು, ದೇವರ ಆಣೆ ಮಾಡಿ ಕೋರ್ಟಿನಲ್ಲಿ ಹೇಳಿದೆ. ರಾಮರಾಯ ದೇಶಪಾಂಡೇನ ಅಣ್ಣನ ಮಗ, ನಾನು, ರಾಮರಾಯನ ಹೆಂಡತಿಯೇ ಅಲ್ಲ ಎಂದು ವಾದ ಹೂಡಿದ. ನಾನು ಒಂದು ಸುಳ್ಳು ಹೇಳಿದ್ದು ನಿಜ ಅಂತ ತೋರಿಸಿಕೊಡಲು ನೂರು ಸುಳ್ಳು ಹೇಳಿದೆ, ಐವತ್ತು ವರ್ಷಗಳ ಹಿಂದೆ ನಾನು ರಾಮರಾಯನನ್ನು ಲಗ್ನವಾದದ್ದು. ನನಗೆ ಆಗ ಎಂಟು ಹತ್ತು ವರ್ಷ. ಅವರ ಮುಖ ಪರಿಚಯದ ನೆನಪು ಇರುವುದು ಶಕ್ಯವಿಲ್ಲ. ಕೊಲ್ಹಾಪುರದಲ್ಲಿ ನನ್ನದು ಅವರೊಡನೆ ಲಗ್ನವಾದದ್ದು ಮಾತ್ರ ನೆನಪಿದೆ. ಲಗ್ನವಾದ ಒಂದು ವರ್ಷದೊಳಗೆ ಅವರು ಪ್ಲೇಗಿನಿಂದ ತೀರಿಕೊಂಡರು ಅಂತ ನನ್ನ ತಾಯಿ ಗೋಳಾಡಿ ಅತ್ತಳು. ನಾನು ವಿಧವೆಯಾದೆ. ಈಗಿನ ಕೆಂಪು ಸೀರೆಯು ಬಾಲ್ಯದಲ್ಲಿಯೇ ನನಗೆ ರಾಮರಾಯನ ಹೆಂಡತಿಯಾದ ಕುರುಹಾಗಿ ಬಂದಿದೆ. ನನ್ನ ತಾಯಿ ತಂದೆ ಇರುವವರೆಗೆ ಹೊಟ್ಟೆ ಬಟ್ಟೆ ಚಿಂತೆ ನನಗಿರಲಿಲ್ಲ. ನನ್ನ ತಮ್ಮನು ಒಮ್ಮೆ ನನ್ನ ಗಂಡನಿದ್ದ ಊರಿಗೆ ಹೋಗಿ ನನಗೆ ಪೋಟಗಿ ಕೊಡಲು ಕೇಳಿದ. ಆಗ ರಾಮರಾಯರ ಅಣ್ಣಂದಿರೂ ತೀರಿ, ನಾರಾಯಣರಾಯರೂ ತೀರಿಕೊಂಡಿದ್ದರು. ಅವರ ಮಕ್ಕಳು ಅಜ್ಞಾನವಿದ್ದುದರಿಂದ,

ಅವರ ಇಬ್ಬರೂ ಹೆಂಡಂದಿರಲ್ಲಿ ಜಗಳವಿದ್ದುದರಿಂದ, ಎಲ್ಲಾ ಆಸ್ತಿ ಕೋರ್ಟ ಆಫ್ ವಾರ್ಡ್ಸ ದವರ ಕಡೆಗೆ ಇತ್ತು. ಫೋಟಗಿ ದಾವೆ ಮಾಡಿ ಕೋರ್ಟಗೆ ಎಡತಾಕಲು ನನ್ನ ತಮ್ಮನಿಗೆ ಸಾಧ್ಯವಿರಲಿಲ್ಲ. ಅವನು ಜೀವಂತ ಇರುವವರೆಗೆ ಅವನೊಡನೆ ಅವನ ಮನೆಯಲ್ಲಿಯೇ ಇದ್ದು ಉಪಜೀವನ ಸಾಗಿಸಿದೆ. ಅವನೂ ತೀರಿಕೊಂಡ. ಆಗ ನಾನು ನಿಜವಾಗಿಯೂ ಅನಾಥೆಯಾದೆ. ಬಿಕ್ಕೆ ಬೇಡಿ ಉಪಜೀವನ ಸಾಗಿಸುವ ಪ್ರಸಂಗ ಬಂತು. ಬಿಕ್ಕೆ ಬೇಡುತ್ತ ಅನಂತರ ತಂದೆಯ ಮನೆಗೆ ಬಂದೆ. ಕಾಶೀಯಾತ್ರೆಗೆ ಹೋಗಲು ಏನಾದರೂ ಕೊಡಿರಿ ಎಂದು ನಾನು ಭಿಕ್ಷೆ ಬೇಡುವ ಕಾರಣ ಹೇಳತಿದೆ. ಅವರ ಹೆಂಡತಿ ಬಾಣಂತಿಯಾಗಲಿದ್ದರು. ತಮ್ಮಲ್ಲಿಯೇ ಕೆಲ ತಿಂಗಳು ಇದ್ದು ಹೋದರೆ ಉಪಕಾರವಾಗುವುದು. ಕಾಶೀಯಾತ್ರೆಗೆ ನೆರವಾಗುವುದಾಗಿ ಅನಂತರ ತಂದೆ ನರಸಿಂಗರಾಯ ಹೇಳಿದರು. ನಾನು ಒಪ್ಪಿಕೊಂಡೆ. ಅವರಲ್ಲಿದ್ದಾಗ ನನ್ನ ಪೂರ್ವಾಪರ ವಿಚಾರಗಳನ್ನು ಅವರಿಗೆ ತಿಳಿಸಿದೆ. ಅವರು ನನ್ನ ಗಂಡನ ಆಸ್ತಿಯಿದ್ದ ಊರಿಗೆ ಹೋಗಿ ಫೋಟಗಿ ಕೊಡಲು ಕೇಳಿದರು. ಅವರು ನನ್ನ ಪರಿಚಯವೇ ಇಲ್ಲವೆಂದು ಹೊಣೆ ಹಾರಿಸಿಕೊಂಡರು. ನನ್ನ ಗಂಡನಿಗೆ ಸದ್ಗತಿಯಾಗಲು ದತ್ತಕ ತೆಗೆದುಕೊಳ್ಳಲು ನಾನು ನಿರ್ಧರಿಸಿ, ಆ ರೀತಿ ನನ್ನ ಭಾವ ನಾರಾಯಣರಾಯನ ಮಕ್ಕಳಿಗೆ ನೋಟೀಸು ಕೊಟ್ಟು ತಿಳಿಸಿದೆ. ಅವರು ಅದಕ್ಕೆ ಏನೂ ಉತ್ತರಕೊಡಲಿಲ್ಲ. ಅನಂತನನ್ನು ನಾನು ಹಿಂದೂ ಕಾಯದೆಯಂತೆ ದತ್ತಕ ತೆಗೆದುಕೊಂಡಿದ್ದೇನೆ. ಇದೆಲ್ಲಾ ನರಸಿಂಗರಾಯರೂ ಅವರ ವಕೀಲರೂ ಹೇಳಿಕೊಟ್ಟಂತೆ ನಾನು ಕೋರ್ಟನಲ್ಲಿ ಜವಾಬು ಕೊಟ್ಟೆ. ಆದರೆ ನಾನು ಮದುವೆಯಾದ ಗಂಡ ಗೋವಿಂದರಾಯ ನಾಯಿಕ. ಇದು ನನಗೂ, ನಾನು ನನ್ನ ಗಂಡ ಗೋವಿಂದರಾಯನ ವಂಶ ನಡೆಸಲು ದತ್ತಕ ತೆಗೆದುಕೊಂಡ ಭಗವಂತನಿಗೂ ಗೊತ್ತು.

ನಾನು ರಾಮರಾಯ ದೇಶಪಾಂಡೆಯವರ ಹೆಂಡತಿ ಎಂದು ಸುಳ್ಳು ಹೇಳಿದ್ದು ಅನಂತನಿಗೆ ರಾಮರಾಯನ ಪಾಲಿನ ಆಸ್ತಿಯನ್ನು ಕೊಡಿಸುವುದಕ್ಕಾಗಿ. ಇದು ಪಾಪವೆಂದು ನನಗೆ ಅನಿಸುತ್ತಿತ್ತು. ಆದರೆ ಇದೊಂದು ಮಹಾಪುಣ್ಯ ಕಾರ್ಯ. ನಿಪುತ್ರಿಕನಾಗಿ ಸತ್ತ ರಾಮರಾಯ ದೇಶಪಾಂಡೆಯವರಿಗೆ ಮೋಕ್ಷ ಕೊಡಿಸುವ ಪುಣ್ಯ, ಬಡ ಅನಂತನಿಗೆ ನೂರು ಎಕರೆ ಭೂಮಿಯನ್ನು ಕೊಡಿಸಿದ ಮಹಾಪುಣ್ಯ, ಕಾಶೀಯಾತ್ರೆಯನ್ನು ಮಾಡಲು ಅವಶ್ಯವಿದ್ದ ಹಣ ದೊರಕಿಸುವ ಏಕಮೇವ ಮಾರ್ಗ ಎಂದು ನರಸಿಂಗರಾಯ ಏನೇನೋ ಹೇಳಿದ. ಇದು ಪಾಪವಲ್ಲ ಪುಣ್ಯ ಕೆಲಸ ಎಂದು ನಾನು ಅವನು ಹೇಳಿದಂತೆ ರಾಮರಾಯನ ಹೆಂಡತಿ ಜಾನಕೀಬಾಯಿ ಎಂದು ಎಲ್ಲರಿಗೂ ಹೇಳಿದೆ.

ಹಿಂದೂ ಸ್ತ್ರೀಯರು ತಮ್ಮ ಗಂಡ ದೇವರೆಂದು ನಂಬುವರು. ಅವನ ಹೆಸರು ಉಳಿಸಲು ತಮ್ಮ ಜೀವನವನ್ನೇ ಮುಡಿಪಾಗಿಡುವರು. ಜಾನಕಿಬಾಯಿ ರಾಮರಾಯನ ವಿವಾಹಿತ ಪತ್ನಿಯಾಗಿರದಿದ್ದರೆ ಅವಳು ಬಾಲವಿಧವೆಯಾಗಿ ನೆಲೆಸುತ್ತಿರಲಿಲ್ಲ. ಅವಳು ರಾಮರಾಯನ ಪತ್ನಿಯಾಗಿರದೆ ಬೇರೊಬ್ಬರ ಪತ್ನಿಯಾಗಿ ವಿಧವೆಯಾಗಿದ್ದರೆ ತನ್ನ ಸತ್ತ ಗಂಡನ ಹೆಸರನ್ನು ಬಿಟ್ಟು ರಾಮರಾಯನು ತನ್ನ ಪತಿ ಎಂದು ಹೇಳುವುದೇ ಶಕ್ಯವಿರಲಿಲ್ಲ. ಜಾನಕೀಬಾಯಿ ರಾಮರಾಯನ ಪತ್ನಿ ಇದ್ದುದೇ ನಿಜ. ಅದರಿಂದ ಅವಳ ದತ್ತಕ ತೆಗೆದುಕೊಂಡ ಅನಂತನಿಗೇ ರಾಮರಾಯರ ಪಾಲಿಗೆ ಸಲ್ಲಬಹುದಾದ ಆಸ್ತಿ ಅವರ ದತ್ತಕ ಮಗನೆಂದು ಸಲ್ಲಬೇಕು ಎಂದು ಕೋರ್ಟು ತೀರ್ಪು ಕೊಟ್ಟ ದಿನ ನರಸಿಂಗರಾಯ ನನಗೆ, ನೀವು ಮನುಷ್ಯರಲ್ಲ ಸಾಕ್ಷಾತ್ ದೇವತೆ ಎಂದು ಎಷ್ಟು ಪರಿ ನನ್ನನ್ನು ಹೊಗಳಿದರು. ಅದನ್ನು ಸ್ಮರಿಸಿಕೊಂಡರೆ ನನ್ನ ಜನ್ಮದಲ್ಲಿ ಹಿಂದೆ ಮಾಡಿದ ಅನಂತ ಪಾಪಗಳೆಲ್ಲ ಈ ಒಂದು ಪುಣ್ಯದ ಕೆಲಸದಿಂದ ತೊಲಗಿ ಹೋದವು ಎಂದೆನಿಸಿತ್ತು.

ಪಾಪಿಗೆ ಕಾಶಿಯ ದರ್ಶನವೇ ಅಶಕ್ಯ. ನನ್ನ ಪಾಪಗಳು ತೊಲಗಿಹೋದ ಕಾರಣದಿಂದಲೇ ಈಗ ಕಾಶೀಯಾತ್ರೆಗೆ ಹೊರಡುವದೂ ಇಲ್ಲಿಗೆ ಬಂದು ಗಂಗಾ ಸ್ನಾನಮಾಡುವದೂ ಶಕ್ಯವಾಗಿದೆ ಎಂದು ನಂಬಿದ್ದೆ.

ನನ್ನ ನಂಬಿಗೆ ಸುಳ್ಳು ಎಂದು ಈಗ ಅನಿಸ ತೊಡಗಿದೆ. ಗಂಗಾಮಾತೆ ಪ್ರಸನ್ನಳಾಗಲಿಲ್ಲ. ನನ್ನ ಪಾಪಿ ರಕ್ತದಿಂದ ಮೈತುಂಬ ಈ ಗಾದರಿಗಳೇಳುವುದು ಪಾಪವು ಮೈಮೇಲೆ ಎದ್ದು ಕಾಣುವ ಲಕ್ಷಣವಲ್ಲವೆ?

ನಾನು ಮಾಡಿದ ಪಾಪಗಳು ಅನಂತ. ಅವುಗಳನ್ನು ನೆನೆದುಕೊಂಡರೋ ಮೈಗೆ ಮುಳ್ಳು ಬರುವುದು. ಬದಿಯಲ್ಲಿ ಸ್ನಾನ ಮಾಡುವಾಗ ಒಂದೊಂದೇ ಪಾಪಕೃತ್ಯವನ್ನು ನೆನಪಿಗೆ ತಂದುಕೊಂಡು ಮುಳುಗು ಹಾಕಿದಾಗ ಮೈಗೆ ಮುಳ್ಳು ಬಂತು ಚಳಿಕಟ್ಟಿ ನಡಕು ಹುಟ್ಟಿತು. ನನ್ನಂಥ ಪಾಪಿಯನ್ನು ಗಂಗಾಮಾತೆ ಮುಟ್ಟಿಸಿಕೊಂಡದ್ದೇ ಆಶ್ಚರ್ಯ,

ವಯಸ್ಸಾದಂತೆ ನನಗೆ ನಾನೋರ್ವ ಪಾಪಿ ಅನಿಸತೊಡಗಿತು. ಹರೆಯದ ಕಾಲಕ್ಕೆ ನಾನು ಹಿಡಿದ ದಾರಿ ಸುಖದ ಸೋಪಾನವೆನಿಸಿತ್ತು. ನನ್ನ ಮದುವೆಯಾದ ಗಂಡ ನನಗಿಂತ ವಯಸ್ಸಿನಲ್ಲಿ ಬಹಳೇ ಹಿರಿಯನಾಗಿದ್ದ. ಮೊದಲನೇ ಹೆಂಡತಿಯೊಡನೆ ೧೨ ವರ್ಷ ಸಂಸಾರ ಮಾಡಿದವ. ಅವಳು ಸತ್ತಮೇಲೆ ನನ್ನ ತಂದೆಗೆ ದುಂಬಾಲ ಬಿದ್ದು ನನ್ನನ್ನು ಮದುವೆ ಮಾಡಿಕೊಂಡವ. ನನ್ನ ತಂದೆಯ ಸಮವಯಸ್ಕನಾದವನಿಗೆ ನನ್ನನ್ನು ಕೊಡಕೂಡದೆಂದು ನನ್ನ ತಾಯಿ ರಂಭಾಟ ಹೂಡಿದಳು. ಆದರೆ ನನ್ನ ತಂದೆಗೆ ದೊಡ್ಡ ಆಸ್ತಿಯ ಧನಿಕ ಅಳಿಯ ಅನಾಯಾಸವಾಗಿ ಸಿಗುವಾಗ ಒಲ್ಲೆ ಅನ್ನುವುದು ಮೂರ್ಖತನ ಅನಿಸಿತ್ತು. ಊರ ಜನರೆಲ್ಲರೂ ವಯಸ್ಸಾದವನಿಗೆ ಕೊಟ್ಟು ಹುಡುಗಿಯ ಗೋಣು ಮುರಿಯಬೇಡಿರಿ ಎಂದು ಹೇಳಿದರೂ ಅವನು ಕೇಳಲಿಲ್ಲ. ಮನಸ್ಸಿಲ್ಲದ ಮನಸ್ಸಿನಿಂದ ನಾನು ಗೋವಿಂದರಾವ ನಾಯಕರನ್ನು ಮದುವೆಯಾದೆ. ಮನೆಯಲ್ಲಿ ಧನಕನಕ ಬೇಕಾದಷ್ಟಿತ್ತು. ಒಂದೆರಡು ಮಕ್ಕಳಾಗಿದ್ದರೆ ಎಲ್ಲವೂ ಸರಿಹೋಗಬಹುದಿತ್ತೋ ಏನೋ? ಗೋವಿಂದರಾಯರು ನನ್ನ ಸೌಭಾಗ್ಯವನ್ನೇ ಕಸಿದುಕೊಂಡು ಮದುವೆಯಾದ ಮೂರನೇ ವರ್ಷವೇ ಕಣ್ಣುಮುಚ್ಚಿದರು.

ನನ್ನ ತಂದೆಗೆ ನನ್ನ ಆಸ್ತಿಯ ಉಪಭೋಗದ ಅವಕಾಶ ಲಭಿಸಿತು. ನನಗೆ ಕೆಂಪು ಸೀರೆ ಉಡಿಸಿ ಮಡಿಮಾಡಿ ಧರ್ಮಮಾರ್ತಾಂಡನಾದ ನನಗೆ ಜೀವನದಲ್ಲಿ ಎಲ್ಲರಂತೆ ಇರುವ ಆಸೆ ಅದು ಕನಸಿನ ಮಾತಾಯಿತು.

ಸುಖವಾಗಿ ಉಂಡು ತಿಂದು ಬಾಳುವ ನವತಾರುಣ್ಯದ ಕಾಲ ನನ್ನನ್ನು ರೇಗಿಸಿತು. ಮಡಿ ಮಾಡಿದರೆ ಮನಸ್ಸು ಮಲಿನವಾಗುವುದಿಲ್ಲವೆಂಬುದು ಭ್ರಮೆ ಎಂದು ತೋರಿಸಿಕೊಡಬೇಕೆಂಬ ಹುಚ್ಚು ತಲೆಗೇರಿತು. ನಮ್ಮ ಮನೆಗೆ ನಿತ್ಯ ಪೂಜೆಗೆ ಬರುತ್ತಿದ್ದ ಕೃಷ್ಣಾಚಾರಿ ಎಂಬವರು ಮಾತ್ರ ನನಗೆ ನಿತ್ಯ ಭೆಟ್ಟಿಯಾಗುವ ಗಂಡಸು. ಅವರನ್ನು ನನ್ನ ಸುಖದ ಸಾಧನವನ್ನಾಗಿ ಬಳಸಲು ನಿರ್ಧರಿಸಿದೆ. ಅವನಿಗೂ ಅದೇ ಬೇಕಾಗಿತ್ತೋ ಏನೋ? ನಮ್ಮಿಬ್ಬರಲ್ಲಿ ಸ್ನೇಹ ಬೆಳೆಯಿತು. ತಂದೆಗೆ ಇದು ಗೊತ್ತಾಗಲು ಅವರು ರೇಗಿದರು. ನಾನು ಪ್ರತಿಭಟಿಸಿದೆ.

"ಒಬ್ಬ ಹೆಣ್ಣುಮಗಳ ಜೀವನವನ್ನೇ ಹಾಳು ಮಾಡಿದ ಪಾಪ ತೊಳೆದುಕೊಳ್ಳಲು ಕಾಶೀಯಾತ್ರೆಗಾದರೂ ಹೋಗು. ಅದಕ್ಕೆ ತಗಲುವ ವೆಚ್ಚದ ಹಣ ಕೊಡುವೆ" ಎಂದು ಹೇಳಿದೆ. ಹಣ ಪಡೆದು ತಂದೆ ತಾಯಿ ಇಬ್ಬರೂ ಕಾಶೀಯಾತ್ರೆಗೆ ಹೋದರು

ನಾನು ಕೃಷ್ಣಾಚಾರಿಯೊಡನೆ ಸ್ವಚ್ಛಂದ ಜೀವನ ಸಾಗಿಸಿದೆ. ನನ್ನ ಪಾಪದ ಕೊಡ ತುಂಬಿತು. ಮುಟ್ಟು ನಿಂತಿತು. ನನ್ನ ತಂದೆಯು ಕಾಶಿಯಿಂದ ಮರಳಿ ಬಂದ ನಂತರ ನಾನು ಅವನಿಗೆ ಅವನ ಮನೆಯಲ್ಲಿಯೇ ಇರಲು ವ್ಯವಸ್ಥೆ

ಮಾಡಿದೆ. ಕೃಷ್ಣಾಚಾರಿಯ ಸಹಾಯದಿಂದ ಗರ್ಭಪಾತದ ಏರ್ಪಾಡು ಮಾಡಿಕೊಂಡೆ. ಅದು ನನಗೆ ಆಗ ನನ್ನ ಮನೆತನದ—ನನ್ನ—ಮರ್ಯಾದೆ ಉಳಿಸಿಕೊಳ್ಳುವ ಏಕಮೇವ ಉಪಾಯವೆನಿಸಿತ್ತು. ಅದೊಂದು ಪಾಪದ ಕೆಲಸವೆಂಬ ವಿಚಾರವೂ ತಲೆಯಲ್ಲಿ ಸುಳಿಯಲಿಲ್ಲ

ಕೃಷ್ಣಾಚಾರಿ ನನ್ನ ಜೀವನ ಸಂಗಾತಿ ಎಂಬ ಭ್ರಮೆಯಲ್ಲಿದ್ದೆ. ಆದರೆ ಅವನಿಗೊಂದು ಕನ್ನೆ ತೆಗೆದು ಅವನ ತಾಯಿತಂದೆಗಳು ಲಗ್ನ ಮಾಡಿದರು. ಅವನು ಹೆಂಡತಿಯೊಡನೆ ಊರು ಬಿಟ್ಟು ಪಟ್ಟಣ ಸೇರಿದ. ನನಗೆ ಒಂಟಿ ಜೀವನ ಬೇಸರವನ್ನುಂಟುಮಾಡಿತು. ಕೈಯಲ್ಲಿ ದುಡ್ಡು ಇತ್ತು. ವಿಲಾಸ ಜೀವನದ ಹಂಬಲ ಮನಸ್ಸಿನಲ್ಲಿತ್ತು. ಒಬ್ಬ ಕಾರಕೂನನನ್ನು ನೇಮಕ ಮಾಡಿಕೊಂಡೆ. ಅವನೊಡನೆ ಚಲ್ಲಾಟ ನಡೆಸಿದೆ. ಇದ್ದಕ್ಕಿದ್ದಂತೆ ಅವನು ಕ್ಷಯರೋಗಕ್ಕೆ ತುತ್ತಾಗಿ ಸತ್ತು ಸ್ವರ್ಗಸೇರಿದ.

ಚುಕ್ಕಾಣಿ ಇಲ್ಲದ ನಾವೆ ಗಾಳಿಗೆ ಪ್ರವಾಹಗುಂಟ ಸಾಗಿದಂತೆ ನನ್ನ ಬಾಳುವೆ ಸಾಗಿತು. ಆಗ ವಿಷಯಾಸಕ್ತಿಗೆ ಪಾಟ ಸಿಕ್ಕಿತು. ಊರ ಜನರಿಗೂ ನನ್ನ ಬಗ್ಗೆ ಜಿಗುಪ್ಸೆ ಹುಟ್ಟಿತು. ಒಂದು ದಿನ ನಾಲ್ಕೆಂಟು ಹಿರಿಯರು ಬಂದು "ಗೋವಿಂದ ನಾಯಕರ ಮನೆತನ ಉಳಿಯಬೇಕು. ನೀನು ಅವರ ಸಂಬಂಧಿಕರ ಹುಡುಗನೊಬ್ಬನನ್ನು ದತ್ತಕ ತೆಗೆದುಕೊಳ್ಳಬೇಕು" ಎಂದು ಹೇಳಿದರು. ಇದಕ್ಕೆ ಒಪ್ಪಬೇಕು; ಇಲ್ಲವೆ ಸಾಮಾಜಿಕ ಬಹಿಷ್ಕಾರಕ್ಕೆ ತಲೆಯೊಡ್ಡಬೇಕು. ಈ ಪರಿಸ್ಥಿತಿಯನ್ನು ಎದುರಿಸುವ ಪ್ರಸಂಗ ತಂದೊಡ್ಡಿದ್ದರು. ದತ್ತಕ ಮಾಡಿಕೊಳ್ಳಲು ಒಪ್ಪಿದೆ. ಅವರು ನನ್ನ ಭಾವನ ಕಿರಿಯ ಮಗನನ್ನು ದತ್ತಕ ಮಾಡಿಕೊಳ್ಳಲು ಹಟ ಹಿಡಿದರು. ಅವನನ್ನು ದತ್ತಕ ತೆಗೆದುಕೊಂಡದ್ದೇ ನನ್ನ ಸರ್ವನಾಶಕ್ಕೆ ನಾಂದಿಯಾಯಿತು.

ನನ್ನ ವಿಲಾಸ ಜೀವನದ ಪ್ರಬಲ ಸಾಧನವಾಗಿದ್ದ ಧನ-ಕನಕ, ಆಸ್ತಿ-ಪಾಸ್ತಿ ದತ್ತಕ ಮಗನ ವಶಕ್ಕೆ ಪಂಚರು ಒಪ್ಪಿಸಿದರು. ಅವನು ಹಾಕಿದ್ದಷ್ಟು ತಿಂದು, ಹೇಳಿದಂತೆ ಕೇಳಿಕೊಂಡು ಮೂಲೆ ಹಿಡಿದು ಮನೆಯಲ್ಲಿಯೇ ಬಿದ್ದುಕೊಂಡಿರುವ ಪರಿಸ್ಥಿತಿ ನನಗೆ ಬಂತು. ನನಗೆ ಇದು ಅಸಹ್ಯವಾಗಿ ಪುರಾಣ ಕೇಳುವತ್ತ ಮನಸ್ಸು ಹರಿಸಿದೆ.

ಪುರಾಣ ಕೇಳಿದಂತೆ ನನ್ನಲ್ಲಿ ಜ್ಞಾನೋದಯವಾಯಿತು. ನಾನೆಂಥ ಪಾಪಿ. ನನಗೆ ರೌರವ ನರಕ ಕಟ್ಟಿಟ್ಟದ್ದು ಎಂದು ಭಯ ಹುಟ್ಟಿತು. ಪಾಪಕ್ಷಾಲನೆಗಾಗಿ ಏನು ಮಾಡಬೇಕೋ ಅದನ್ನು ಮಾಡಿ ಪಾಪದ ಹೊರೆ ಇಳಿಸಿಕೊಳ್ಳಲು ಮನಸ್ಸು ಧಡಪಡಿಸಹತ್ತಿತು. ಕಾಶೀಯಾತ್ರೆ ಮಾಡಬೇಕು ಲೋಕಪಾವನೆ ಗಂಗಾಮಾತೆಯಲ್ಲಿ ಸ್ನಾನಮಾಡಿ ಪಾಪದ ಕಲ್ಮಶ ತೊಳೆದುಕೊಳ್ಳಬೇಕು ಎಂಬ ವಿಚಾರ ತಲೆಯಲ್ಲಿ ಸುಳಿಯಿತು. ದಿನದಿನಕ್ಕೆ ಈ ಕಾಶೀಯಾತ್ರೆಯತ್ತ ಮನಸ್ಸು ಹರಿಯತೊಡಗಿತು.

ದತ್ತಕ ಮಗನಿಗೆ ಪಂಚರಿಂದ ಹೇಳಿಸಿ ಸಾವಿರ ರೂ. ವೆಚ್ಚಕ್ಕೆ ಪಡೆದು ಕಾಶೀಯಾತ್ರೆಗೆ ಹೊರಟುಬಿಟ್ಟೆ.

ಪುಣೆ ನಿಲ್ದಾಣದಲ್ಲಿ ತಿಕೀಟು ಚೆಕ್ಕರನು ಬಂದು ತಿಕೀಟು ಕೇಳಿದಾಗ ಹಣವಿದ್ದ ಪಾಕೀಟಿನಲ್ಲಿಟ್ಟಿದ್ದ ತಿಕೀಟು ತೆಗೆದು ತೋರಿಸಿದೆ. ಮುಂದೆ ಮುಂಬಯಿಗೆ ಹೋದಾಗ ಹಣದ ಪಾಕೀಟು ಮಾಯವಾಗಿತ್ತು. ಕೈಯಲ್ಲಿದ್ದ ಬಂಗಾರದ ಬಳೆ ಮಾರಿ ನನ್ನ ಜೊತೆ ಕಾಶೀಯಾತ್ರೆಗೆ ಹೊರಟಿದ್ದ ನನ್ನ ಗಂಡನ ತಂಗಿಯನ್ನು ಕಳೆದುಕೊಂಡು ಮರಳಿ ಊರಿಗೆ ಬಂದೆ. ಹಣ ಕಳೆದುಕೊಂಡ ಮಾತನ್ನು ಯಾರೂ ನಂಬಲಿಲ್ಲ. ಪುನಃ ಹಣ ಕೊಡಲು ನನ್ನ ದತ್ತಕ ಮಗ ಒಪ್ಪಲಿಲ್ಲ.

ಮನಸ್ಸು ರೋಸಿಹೋಯಿತು. ಬಿಕ್ಕೆ ಬೇಡಿಯಾದರೂ ಕಾಶೀಯಾತ್ರೆ ಮಾಡಬೇಕು.

ಪಾಪಕ್ಷಾಲನೆ ಮಾಡಿಕೊಳ್ಳಬೇಕು ಎಂಬ ವಿಚಾರ ಜಾಗ್ರತವಾಯಿತು. ದತ್ತಕ ಮಗನು ನನ್ನನ್ನು ಸರಿಯಾಗಿ ನೋಡಿಕೊಳ್ಳದೆ ಭಿಕ್ಷೆಗೆ ಹಚ್ಚಿದನೆಂದು ಅವನ ವಿರುದ್ಧ ಜನಾಭಿಪ್ರಾಯ ವನ್ನುಂಟುಮಾಡಲು ಮನೆಮನೆ ಭಿಕ್ಷೆಬೇಡ ಹತ್ತಿದೆ. ಇದೇ ಅವನಿಗೆ ಬೇಕಾಗಿತ್ತೋ ಏನೋ. ಭಿಕ್ಷೆ ಬೇಡುವುದೇ ನಿನ್ನ ಹಣೆಬರಹದಲ್ಲಿದ್ದರೆ ಹಾಗೇ ಮಾಡು. ಮನೆಗೆ ಬರುವ ಅಗತ್ಯ ವಿಲ್ಲ ಎಂದು ಮನೆಯಿಂದ ಹೊರದೂಡಿದನು,

ನನ್ನ ಗತಜೀವನ ಕಂಡವರು 'ಮಾಡಿದ್ದುಣ್ಣೋ ಮಹಾರಾಯತಿ' ಎಂದು ಮೂದಲಿಸ ತೊಡಗಿದರು. ಊರಲ್ಲಿ ಯಾರೂ ಭಿಕ್ಷೆ ಯನ್ನೇ ಹಾಕದಂತಾದರು. ಆಗ ಭಿಕ್ಷುಕನಿಗೆ ಜಗತ್ತೇ ಅವನ ರಂಗಭೂಮಿ. ಈ ಊರಲ್ಲಿ ಏನು, ಮುಂದಿನ ಊರಲ್ಲಿ ಏನು ? ಎಂದುಕೊಂಡು ಊರಿಂದ ಊರಿಗೆ ಭಿಕ್ಷೆ ಬೇಡುತ್ತ ಅಲೆಯುತ್ತ ಅಚ್ಯುತನ ತಂದೆ ನರಸಿಂಗರಾಯರ ಊರಿಗೆ ಬಂದೆ. ಅವರು ನನ್ನನ್ನು ತಮ್ಮ ಮನೆ ಯಲ್ಲಿಟ್ಟುಕೊಂಡು ಪ್ರೀತಿಯಿಂದ ತಮ್ಮ ಒಡಹುಟ್ಟಿದ ತಂಗಿಯಂತೆ ನೋಡಿಕೊಂಡರು. ಕಾಶೀಯಾತ್ರೆ ಮಾಡಿಸುವ ಭರವಸೆಕೊಟ್ಟರು. ಅನಂತನನ್ನು ರಾಮರಾವ ದೇಶಪಾಂಡೆಯವರ ಹೆಂಡತಿ ಎಂದು ಹೇಳಿಕೊಂಡು ದತ್ತಕ ತೆಗೆದು ಕೊಳ್ಳಲು ನನ್ನನ್ನು ಒಪ್ಪಿಸಿದರು."

ಗಂಗಾಬಾಯಿಗೆ ತನ್ನ ಇಡೀ ಗತ ಜೀವನದ ಸ್ಮೃತಿಗಳು ಒಂದೊಂದಾಗಿ ಕಣ್ಣಮುಂದೆ ಬರತೊಡಗಿದ್ದವು. ಜ್ವರವೇರಿದ್ದರಿಂದ ಅವಳು ಒಂದೇ ಸಮನೆ ತನ್ನಷ್ಟಕ್ಕೆ ತಾನೇ ತನ್ನ ಹಿಂದಿನ ಜೀವನದ ಘಟನೆಗಳ ಬಗೆ ಬಡಬಡಿಸುತ್ತಿದ್ದಳು.

ಅಚ್ಯುತನಿಗೆ ಅವಳು ಜಾನಕಿಬಾಯಿ ದೇಶಪಾಂಡೆ; ತನ್ನ ಅಣ್ಣನ ದತ್ತಕ ತಾಯಿ. ಇಷ್ಟೇ ಅವಳ ಬಗೆ ಗೊತ್ತಿದ ಸಂಗತಿ. ಈಗ ಅವಳ ಬಡಬಡಿಕೆಯನು ಕೇಳಿದಾಗ ಅವನಿಗೆ ಮೊದ ಮೊದಲು ಏನೂ ಅರ್ಥವಾಗದಿದ್ದರೂ ಅವಳು ಆಡಿದ ಎಲ್ಲ ಮಾತುಗಳನ್ನು ಕೇಳಿದ ನಂತರ ಅವಳು ಜಾನಕಿಬಾಯಿ ದೇಶಪಾಂಡೆ ಅಲ್ಲ. ಗೋವಿಂದ ನಾಯಕನ ಹೆಂಡತಿ ಗಂಗಾ ಬಾಯಿ ಎಂದು ತಿಳಿಯಿತು.

ಜ್ವರ ನೆತ್ತಿಗೇರಿ ಅವಳು "ನಾನು ಪಾಪಿ. ಕುಲಕಂಟಕಿ. ಗಂಗಾಮಾತೆ ನನ್ನನ್ನು ಉದ್ಧರಿಸಳು. ಅಯ್ಯೋ ನನಗಾವ ಗತಿ!" ಎಂದು ಚೀರಿ ಭೋರಿಟ್ಟು ಅಳಹತ್ತಿದಳು.

ಅಚ್ಯುತ ಗಾಬರಿಯಾಗಿ ಕ್ಷೇತ್ರಪುರೋಹಿತ ಕೃಷ್ಣಾಚಾರ್ಯರನ್ನು ಕರೆದುಕೊಂಡು ಬಂದು ಅವಳನ್ನು ಸಮಾಧಾನಪಡಿಸಲು ಕೇಳಿಕೊಂಡನು.

ಗಂಗಾಬಾಯಿ ಚೀರಾಟ, ಅಳುವು, ಹೆಚ್ಚುತ್ತಲೇ ಇತ್ತು. ಸೂರ್ಯೋದಯದ ಸುಮಾರಿಗೆ ಅವಳು ಕಣ್ಣುಮುಚ್ಚಿದಳು. ಬಡಬಡಿಕೆ ಚೀರಾಟ, ಅಳುವು ಎಲ್ಲವೂ ನಿಂತವು. ಅಚ್ಯುತ ನೋಡಿದಾಗ ಅವಳ ಉಸಿರಾಟವೂ ನಿಂತು ಹೋಗಿತ್ತು.

ಅವಳ ಚಿತಾಭಸ್ಮವನ್ನು ಗಂಗಾಮಾತೆಯ ಜಲಪ್ರವಾಹಕ್ಕೆ ಸೇರಿಸಿ ಕೃಷ್ಣಾಚಾರ್ಯರು, "ಗಂಗಾಮಾತೆಯು ಅನೇಕ ಪಾಪಿಗಳ ಪಾಪ ವನ್ನು ತನ್ನ ಉದರದಲ್ಲಿ ಸ್ವೀಕರಿಸಿದರೂ ಅವ ಳಿಗೆ ಪಾಪಲೇಪವಿಲ್ಲ. ಅವಳು ಲೋಕಪಾವನೆ. ಗಂಗಾಬಾಯಿಯ ಪಾಪ ಅವಳ ದೇಹಕ್ಕೆ ಸಂಬಂಧಿಸಿದ್ದು, ಪಶ್ಚಾತ್ತಾಪದಿಂದ ಅವಳ ಮನ ಸ್ಸಿಗೆ ಅಂಟಿದ ಪಾಪ ಸುಟ್ಟು ಪುಟಕ್ಕೆ ಹಾಕಿದ ಚಿನ್ನದಂತೆ ಅವಳ ಮನಸ್ಸು ಪರಿಶುದ್ಧವಾಗಿತ್ತು. ಅಂತೆಯೇ ಅವಳಿಗೆ ಪುಣ್ಯಕ್ಷೇತ್ರದಲ್ಲಿ ಮರಣ ಒದಗಿತು" ಎಂದು ಉದ್ಗಾರ ತೆಗೆದರು. *



# ಸ್ವಪ್ನವಾಸವದತ್ತಾ

ವತ್ಸರಾಜ ಉದಯನನಷ್ಟು ರೊಮ್ಯಾಂಟಿಕ್ ವ್ಯಕ್ತಿ ಭಾರತದ ಇತಿಹಾಸದಲ್ಲೇ ಬೇರೊಬ್ಬನಿರಲಾರ. ಪಾಂಡವ ಕುಲೋತ್ಪನ್ನನಾದ ಆತ ಮಹಾ ಶೂರ, ವಿದ್ವಾನ್, ಸಂಗೀತ ನಿಪುಣ, ನಾರೀ ಹೃದಯ ಚೋರ. ಮೋಸದಿಂದ ಅವನನ್ನು ಅಪಹರಿಸಿ ಉಜ್ಜಯಿನಿಯ ರಾಜ ಮಹಾ ಪ್ರತಾಪಿ ಪ್ರಸೇನಜಿತ ಅಥವಾ ಪ್ರದ್ಯೋತ ತನ್ನ ಮಗಳಿಗೆ ಸಂಗೀತ ಗುರುವಾಗಿ ಮಾಡಿದರೆ ಈತ ಅವಳ ಹೃದಯವನ್ನೇ ಅಪಹರಿಸಿ ಅವಳನ್ನು ಹಾರಿಸಿಕೊಂಡು ತನ್ನ ರಾಜ್ಯಕ್ಕೆ ಹೋಗಿಬಿಟ್ಟ.

ಮಹಾಕವಿ ಭಾಸ ವತ್ಸರಾಜನ ಕಥೆಗಳನ್ನು ಕುರಿತ ಒಂದು ನಾಟಕಮಾಲೆಯನ್ನೇ ಬರೆದಿದ್ದಾನೆ. ಸ್ವಪ್ನವಾಸವದತ್ತ ಅವನ ಶ್ರೇಷ್ಠ ನಾಟಕಗಳಲ್ಲಿ ಒಂದಾಗಿದೆ. ಆ ನಾಟಕ ಕಥೆ ಮತ್ತು ಅದರ ಸನ್ನಿವೇಶಗಳ ಚಿತ್ರೀಕರಣ ಈ ಪುಟಗಳಲ್ಲಿದೆ.

ವತ್ಸದೇಶದ ಅರಸು ಉದಯನ ತನ್ನರಸಿ ವಾಸವದತ್ತೆಯಲ್ಲಿ ತುಂಬ ಅನುರಕ್ತನಾಗಿದ್ದ. ರಾಜ್ಯಭಾರವನ್ನು ಆತ ನಿರ್ಲಕ್ಷಿಸಿದ್ದರೂ ಅವನ ವಿಶ್ವಾಸಿಕ ಮಂತ್ರಿ ಯೌಗಂಧರಾಯಣ, ಸೇನಾಪತಿ ರುಮಣ್ವಂತರೇ ನೋಡಿಕೊಳ್ಳುತ್ತಿದ್ದರು. ವತ್ಸರಾಜ್ಯದ ವೈರಿ ಆರುಣಿಯಿಂದಾದ ಪರಾಭವವನ್ನು ದೂರ ಮಾಡಲು ಯೌಗಂಧರಾಯಣನು ರುಮಣ್ವಂತನೊಡನೆ ಆಲೋಚನೆ ಮಾಡಿದ. ತಮ್ಮ ಶಕ್ತಿ ಹೆಚ್ಚಲು ಮಗಧದೊಡನೆ ನೆಂಟುತನ ಬೆಳೆಸಬೇಕೆಂದು ನಿರ್ಧರಿಸಿದರು. ಮಗಧದ ರಾಜಕುಮಾರಿ ಪದ್ಮಾವತಿಯು ಉದಯನನನ್ನು ಲಗ್ನವಾಗಬೇಕಾದರೆ ವಾಸವದತ್ತೆ ಸತ್ತಳೆಂದು ಸುಳ್ಳು ಸುದ್ದಿಯನ್ನು ಹರಡಬೇಕಿತ್ತು. ತಮ್ಮ ಆಲೋಚನೆಯನ್ನು ರಾಣಿ ವಾಸವದತ್ತೆ ಹಾಗು ಅವಳ ಸೋದರ ಗೋಪಾಲಕನೊಡನೆ ಹೇಳಿದರು. ರಾಣಿ ಪತಿಯ ಉತ್ಕರ್ಷಕ್ಕಾಗಿ ಅವರು ಹೇಳಿದಂತೆ ನಡೆಯಲು ಒಪ್ಪಿದಳು. ಮಗಧ ದೇಶದ ಸಮೀಪದಲ್ಲಿ ಲಾವಾಣಕವೆಂಬ ಸುಂದರ ಗ್ರಾಮ. ಅಲ್ಲಿ ಯೌಗಂಧರಾಯಣನು ತನ್ನಾಟವನ್ನು ಪ್ರಾರಂಭಿಸಿದ. ವತ್ಸರಾಜ ಉದಯನನು ಬೇಟೆಗೆಂದು ಅರಮನೆಯಿಂದ ದೂರ ಹೋದಾಗ ಅರಮನೆಗೆ ಬೆಂಕಿಬಿತ್ತು. ಆ ಬೆಂಕಿಯಲ್ಲಿ ವಾಸವದತ್ತೆ ಮತ್ತು ಮಂತ್ರಿ ಯೌಗಂಧರಾಯಣ ಸುಟ್ಟುಹೋದರೆಂದು ಯೌಗಂಧರಾಯಣನು ಸುಳ್ಳುಸುದ್ದಿಯನ್ನು ಹಬ್ಬಿಸಿದ. ಯೌಗಂಧರಾಯಣ ಪೂರ್ವ ಯೋಜನೆಯಂತೆ ತಾನು ವೃದ್ಧ ಬ್ರಾಹ್ಮಣನಾಗಿಯೂ ವಾಸವದತ್ತೆ ಅವಂತೀ ಕನ್ಯೆಯಾಗಿಯೂ ವೇಷಧರಿಸಿ ಲಾವಾಣಕದಿಂದ ಹೊರ ಹೊರಟರು. ಅವರಿಬ್ಬರೂ ಮಗಧ ರಾಜ್ಯದ ಆಶ್ರಮವೊಂದನ್ನು ಸೇರಿದಾಗ ಮಗಧ ರಾಜಕುಮಾರಿ ಪದ್ಮಾವತಿ ಅಲ್ಲಿಗೆ ತನ್ನ ತಾಯಿಯ ದರ್ಶನಕ್ಕೆಂದು ಬಂದಿದ್ದಳು. ಅವಳನ್ನು ನೋಡಲು ಕಿಕ್ಕಿರಿದ ಜನ

ಸಮೂಹದಲ್ಲಿ ಇವರೂ ಸೇರಿದರು.

ಮಗಧ ರಾಜಪುತ್ರಿ ಪದ್ಮಾವತಿಯನ್ನು ನೋಡಿದ ಯೌಗಂಧರಾಯಣನು ಪುಷ್ಪಕ ಭದ್ರಾದಿ ಭವಿಷ್ಯಜ್ಞರು ಹೇಳಿದಂತೆ ಇವಳೇ ನಮ್ಮರಸಿಯಾಗುವಳು ಎಂದು ಆಲೋಚಿಸಿದನು. ವಾಸವದತ್ತೆಗಾದರೋ ಅವಳನ್ನು ನೋಡುತ್ತಲೆ ಸೋದರೀ ಪ್ರೇಮ ಉಕ್ಕಿ ಬಂದಿತು. ಅವಳ ಸುಂದರ ರೂಪ, ಮಧುರ ವಾಣಿ ವಾಸವದತ್ತೆಯನ್ನು ಮೆಚ್ಚಿಸಿದವು.

ಸ್ವಾಗತಿಸಿದ ತಾಪಸಿಗೆ ಪದ್ಮಾವತಿ ವಂದಿಸಿದ ಬಳಿಕ ತಾಪಸಿ ಚೇಟಿಗೆ ಕೇಳಿದಳು. "ನಮ್ಮ ರಾಜಕುಮಾರಿಯನ್ನು ವರಿಸಲು ಯಾವ ರಾಜಕುಮಾರನೂ ಬಂದಿಲ್ಲವೆ ?" ಕೂಡಲೇ ಚೇಟಿ ಉತ್ತರಿಸಿದಳು. "ಉಜ್ಜಯನಿಯ ಮಹಾಸೇನ ಪ್ರದ್ಯೋತ ರಾಜನು ತನ್ನ ಮಗನಿಗೆ ರಾಜಕುವರಿಯನ್ನು ಕೊಡಬೇಕೆಂದು ದೂತರ ಮುಖಾಂತರ ಹೇಳಿ ಕಳಿಸಿದ್ದಾನೆ." ಇದನ್ನು ಕೇಳಿ ಪ್ರದ್ಯೋತನ ಮಗಳಾದ ವಾಸವದತ್ತೆ ಈಕೆ ನಮ್ಮವಳಾದಳೆಂದುಕೊಂಡಳು.

ಯೌಗಂಧರಾಯಣನು ಇದೇ ಸಮಯವೆಂದು ಪದ್ಮಾವತಿಯ ಬಳಿಗೆ ಹೋಗಿ "ಈಕೆ ನನ್ನ ತಂಗಿ. ಈಕೆಯ ಪತಿ ದೇಶಾಂತರ ಹೋಗಿರುವ. ಕೆಲವು ಕಾಲ ತಾವು ಈಕೆಯನ್ನು ಪಾಲಿಸಬೇಕು. ನನಗೆ ಅರ್ಥ ಭೋಗ ವಸ್ತುಗಳಲ್ಲಿ ಆಶೆಯಿಲ್ಲ. ನನ್ನ ಸೋದರಿಯ ಶೀಲವನ್ನು ರಕ್ಷಿಸಬೇಕೆಂಬುದಷ್ಟೇ ನನ್ನ ಪ್ರಾರ್ಥನೆ," ಎಂದು ಯೌಗಂಧರಾಯಣ ರಾಜಕುವರಿಯನ್ನು ಕೇಳಿಕೊಂಡ.

ಆರ್ಯ ಯೌಗಂಧರಾಯಣನು ನನ್ನನ್ನು ಇವಳ ಬಳಿ ಇಡುವಲ್ಲಿ ಏನಾದರೂ ಉದ್ದೇಶವಿರಬೇಕೆಂದು ವಾಸವದತ್ತ ತನ್ನಲ್ಲಿ ತಾನು ವಿಚಾರಿಸಿದಳು ಪದ್ಮಾವತಿ ವಾಸವದತ್ತೆಗೆ ಆಶ್ರಯ ಕೊಡಲೊಪ್ಪಿದಳು.

"ದುರ್ದೈವಿಯಾದ ನಾನು ಏನು ಮಾಡಲಿ ? ಎಲ್ಲಿ ಹೋಗಲಿ ?" ಎಂದು ವಾಸವದತ್ತೆ ತನ್ನ ಅಸಹಾಯತೆಯನ್ನು ವ್ಯಕ್ತಪಡಿಸಿದಾಗ ಪದ್ಮಾವತಿಯು "ಬಾ ಇನ್ನು ನೀನು ನನ್ನವಳಾದೆ" ಎಂದು ವಾಸವದತ್ತೆಯನ್ನು ಸ್ವಾಗತಿಸಿದಳು. ತನ್ನ ಅರ್ಧ ಭಾರವು ಇಳಿಯಿತೆಂದುಕೊಂಡ ಯೌಗಂಧರಾಯಣ

ಅಷ್ಟರಲ್ಲಿ ಮಧ್ಯಾಹ್ನದ ಬಿಸಿಲಿನಲ್ಲಿ ದಣಿದ ಬ್ರಹ್ಮಚಾರಿಯೊಬ್ಬ ಆಶ್ರಮಕ್ಕೆ ಬಂದ. ಯೌಗಂಧರಾಯಣನು ಬ್ರಹ್ಮಚಾರಿಯನ್ನು ವಿಚಾರಿಸಿದಾಗ "ನಾನು ರಾಜಗೃಹದವ. ಲಾವಾಣಕದಲ್ಲಿ ವೇದಶಾಸ್ತ್ರವನ್ನು ಅಭ್ಯಸಿಸುತ್ತಿದ್ದೆ. ವತ್ಸರಾಜ ಉದಯನ ಹಾಗೂ ಆತನ ರಾಣಿ ವಾಸವದತ್ತೆ ಅಲ್ಲಿರುತ್ತಿದ್ದರಷ್ಟೇ. ಒಂದು ಸಲ ಉದಯನನು ಬೇಟೆಗೆ ಹೋದಾಗ ಲಾವಾಣಕ ಗ್ರಾಮಕ್ಕೆ ಬೆಂಕಿ ಬಿದ್ದು ಅದರಲ್ಲಿ ವಾಸವದತ್ತೆಯೂ ಮಂತ್ರಿ ಯೌಗಂಧರಾಯಣನೂ ಸುಟ್ಟು ಹೋದರು. ಬೇಟೆಯಿಂದ ಮರಳಿದ ಉದಯನನಿಗೆ ಇದು ತಿಳಿಯುತ್ತಲೆ ಆತನೂ ಅದೇ ಬೆಂಕಿಯಲ್ಲಿ ಬಿದ್ದು ಸಾಯಲು ಹೋದನು. ಆದರೆ ಆತನ ಮಂತ್ರಿಗಳು ಅವನನ್ನು ತಡೆ ಹಿಡಿದರು. ರಾಣಿಯ ಆಭರಣಗಳನ್ನು ನೋಡಿದಾಗಂತೂ ವತ್ಸರಾಜ ಮೂರ್ಛೆ ಹೋಗಿಬಿಟ್ಟ" ಎಂದು ಚಿತ್ರವತ್ತಾಗಿ ವರ್ಣನೆ ಮಾಡಿದ.

ಇದನ್ನು ಕೇಳುತ್ತ ವಾಸವದತ್ತೆ ದುಃಖಭಾರದಿಂದ ಕಣ್ಣೀರು ಸುರಿಸಿದಳು. ಎಲ್ಲರ ನೋಟ ಆ ಕಡೆಗೆ ಹೊರಳುತ್ತಲೇ "ನನ್ನ ತಂಗಿಯ ಹೃದಯ ಬಲು ಕೋಮಲ" ಎಂದು ಯೌಗಂಧರಾಯಣ ನೆವ ಹೇಳಿದ.

"ಆತನಾದರೂ ಬದುಕಿರುವವನಲ್ಲ! ಆತ ಮೂರ್ಛೆ ಹೋದದ್ದು ಕೇಳಿಯೇ ನನ್ನ ಮನಸ್ಸಿಗೆ ಆಘಾತವಾಗಿತ್ತು." ಎಂದು ಪದ್ಮಾವತಿ ಅನೈಚ್ಛಿಕವಾಗಿ ತನ್ನ ಉದ್ವೇಗವನ್ನು ವ್ಯಕ್ತಪಡಿಸಿದಳು.

ಆಗಂತುಕರ ಪ್ರಶಂಸೆಗೂ ಪಾತ್ರನಾದ ಆ ವಿಧುರ ರಾಜನ ಕೈ ಹಿಡಿಯುವ ಪುಣ್ಯವತಿಯಾರಾಗಿರಬಹುದು ಎಂಬ ವಿಚಾರ ತಾಪಸಿ, ಚೇಟಿ

ಪದ್ಮಾವತಿಯರ ಮನದಲ್ಲಿ ಸುಳಿಯಿತು.

*

ಯೌಗಂಧರಾಯಣ ಅವಂತಿಕೆ (ವಾಸವದತ್ತೆ)ಯನ್ನು ಆಶ್ರಮದಲ್ಲಿ ಪದ್ಮಾವತಿಯ ಆಶ್ರಯದಲ್ಲಿ ಬಿಟ್ಟು ಹೋದ ಮೇಲೆ ವಾಸವದತ್ತೆಗೆ ಒದಗಿದ ಉಭಯ ಸಂಕಟದ ಅವಸ್ಥೆ ಅತ್ಯಂತ ಹೃದಯಸ್ಪರ್ಶಿಯಾದದ್ದು. ತನಗೊಬ್ಬ ಸವತಿ ಬರುವುದಕ್ಕೆ ಸಹಕಾರವನ್ನು ತಾನೇ ನೀಡುವ, ಅದಕ್ಕೆ ತಾನೇ ಉಪಕರಣವಾಗುವ ಸ್ಥಿತಿ ಅವಳಿಗೆ ಬರುತ್ತದೆ. ಈ ದಿವ್ಯದಿಂದ ಅವಳು ಪುಟಕ್ಕಿಟ್ಟ ಚಿನ್ನದಂತಾಗಿ ಹೊರಬರುತ್ತಾಳೆ. ಅವಳ ಪತಿಪ್ರೇಮ ಅವಳ ಈರ್ಷೆಯನ್ನು ಗೆಲ್ಲುತ್ತದೆ.

ರಾಜಧಾನಿಗೆ ಅವರು ಮರಳಿದ ಮೇಲೆ ಮಾಧವೀ ಲತೆಯ ಮಂಟಪದ ಬಳಿ ಚೇಟಿಯರೊಡನೆ ಪದ್ಮಾವತಿಯು ಚೆಂಡಾಡುತ್ತಿರುವಾಗ ವಾಸವದತ್ತೆ ಆಕೆಗೆ "ಮಹಾಸೇನನ ಸೊಸೆ" ಎಂದು ಹಾಸ್ಯ ಮಾಡಿದಳು. ಆಗ ಚೇಟಿಯೊಬ್ಬಳು "ನಮ್ಮ ರಾಜಕುಮಾರಿಗೆ ಆ ಸಂಬಂಧದಲ್ಲಿ ಇಚ್ಛೆಯಿಲ್ಲ. ಆಕೆ—ವತ್ಸರಾಜ ಉದಯನನ್ನು ಇಚ್ಛಿಸುತ್ತಾಳೆ," ಎಂದು ಹೇಳಿದಳು. ಪದ್ಮಾವತಿಯ ಮುಗ್ಧ ಮನಸ್ಸು ಉದಯನನ ಕಥೆ ಕೇಳಿ ಆತನಿಗೇ ಅರ್ಪಿತವಾಗಿತ್ತು.

ಚೇಟಿ "ಆತನು ಕುರೂಪಿಯಾಗಿದ್ದರೆ" ಎಂದು ಚೇಷ್ಟೆ ಮಾಡಿದಾಗ ವಾಸವದತ್ತೆ ಒಮ್ಮೆಲೆ "ಇಲ್ಲ ಇಲ್ಲ ಆತನು ರೂಪವಂತ" ಎಂದು ಹೊಗಳಿದಳು. "ನಿನಗೆ ಹೇಗೆ ಗೊತ್ತು?" ಎಂದು ಪದ್ಮಾವತಿ ಕೇಳಲು "ಉಜ್ಜಯಿನಿಯ ಜನರು ಹಾಗನ್ನುವದನ್ನು ಕೇಳಿದ್ದೇನೆ," ಎಂದು ಜಾರಿಕೊಂಡಳು.

ಅಷ್ಟರಲ್ಲಿ ದಾಸಿಯೊಬ್ಬಳು ಓಡುತ್ತ ಬಂದು "ರಾಜಪುತ್ರಿ ನಿನ್ನನ್ನು ವತ್ಸರಾಜನಿಗೆ ಕೊಟ್ಟಿತು" ಎಂದು ಸಾರಿದಳು. ಮಗಧ ದೇಶಕ್ಕೆ ಕಾರ್ಯಾಂತರದಿಂದ ಬಂದಿದ್ದ ಉದಯನ, ರಾಜನ ಕೇಳಿಕೆಯ ಮೇರೆಗೆ ಪದ್ಮಾವತಿಯನ್ನು ಮದುವೆಯಾಗಲೊಪ್ಪಿದ್ದ. ಅವಸರದಿಂದ ನಿರ್ಧಾರವಾದ ಈ ಮದುವೆ ಅಂದೇ ಶುಭನಕ್ಷತ್ರದಲ್ಲಿ ನೆರವೇರಲಿತ್ತು.

ವಿವಾಹದ ಸಂಭ್ರಮದಿಂದ ತುಂಬಿದ್ದ ಅರಮನೆಯಲ್ಲಿ ಪದ್ಮಾವತಿಯನ್ನು ಬಿಟ್ಟು ವಾಸವದತ್ತೆ ಪ್ರಮದವನಕ್ಕೆ ನಡೆದಳು. ಪತಿಯ ಕ್ಷೇಮದಿಂದ ಹರ್ಷಿತವಾದ ಅವಳ ಹೃದಯಕ್ಕೆ ಸವತಿಯ ಆಗಮನ ಸ್ತ್ರೀಸಹಜವಾದ ಆಘಾತವನ್ನು ತಂದಿತ್ತು. ಅದು ಸಾಲದ್ದಕ್ಕೆ ಆಕೆಯ ಹಿಂದೆಯೆ ಚೇಟಿಯೊಬ್ಬಳು ಆಕೆಯನ್ನು ಹುಡುಕುತ್ತ ಬಂದು ನಮ್ಮ ರಾಜಕುವರಿಗಾಗಿ ವಿವಾಹದ ಕೌತುಕಮಾಲಿಕೆಯನ್ನು ಕಟ್ಟಿಕೊಡಲು ಹೇಳಿದಳು. "ಕೌತುಕಮಾಲೆಯನ್ನೂ ನಾನೇ ಕಟ್ಟಬೇಕಾಯಿತೆ? ದೇವರೆಷ್ಟು ನಿರ್ದಯಿ!" ಎಂದು ವಾಸವದತ್ತೆ ವ್ಯಥೆಪಟ್ಟಳು.

ಚೇಟಿ ಗಡಿಬಿಡಿಯಲ್ಲೇ ವಾಸವದತ್ತೆ ಕಟ್ಟಿದ ವಿವಾಹ ಮಾಲಿಕೆಯನ್ನು ಒಯ್ದಳು. ತನ್ನ ಪತಿಯೇ ತನಗೆ ಪರಕೀಯನಾದನಲ್ಲ ಎಂದು ಚಿಂತಿಸುತ್ತ ಮಲಗಿಯಾದರೂ ಸಮಾಧಾನಪಟ್ಟುಕೊಳ್ಳಬೇಕೆಂದು ಅರಮನೆಗೆ ಹೊರಟಳು.

ಮದುವೆಯ ನಂತರವೂ ಉದಯನನು ಮಗಧದಲ್ಲಿ ತಂಗಿದ್ದ. ಪದ್ಮಾವತಿಯು ಪತಿಯ ಮನಸ್ಸನ್ನು ಪ್ರಸನ್ನವಾಗಿಡಲು ಏನನ್ನೂ ಮಾಡುತ್ತಿದ್ದಳು. ಆದರೆ ಅವನಿಗೆ ಹಗಲಿರುಳೂ ವಾಸವದತ್ತೆಯದೇ ನೆನಪು. ಕಣ್ಮುಂದೆ ಅವಳದೇ ಚಿತ್ರ ಎಂದರಿಯಲು ಪದ್ಮಾವತಿಗೆ ವೇಳೆ ಹಿಡಿಯಲಿಲ್ಲ. ಆದರೂ ಅವನನ್ನೊಲಿಸುವ ಯತ್ನವನ್ನು ಸಾಂಗವಾಗಿ ಅವಳು ನಡೆಸುತ್ತಲೇ ಇದ್ದಳು.

ಪದ್ಮಾವತಿಯ ಪರಿವಾರದವಳಾಗಿದ್ದ ಅವಂತಿಕಾ ನಾಮದ ವಾಸವದತ್ತೆ ತನ್ನ ಗಂಡನ ಸಾಮೀಪ್ಯದಲ್ಲಿದ್ದೂ ಅವನ ಕಣ್ಣಿಗೆ ಬೀಳಬಾರದಂತಿರಬೇಕಾಗಿತ್ತು. ಒಂದು ದಿನ ಉದ್ಯಾನದಲ್ಲಿ ಮಾಧವೀಲತಾ ಮಂಟಪದಲ್ಲಿ ಪದ್ಮಾವತಿಯೊಡನಿದ್ದ ವಾಸವದತ್ತೆಯನ್ನು ಅಲ್ಲಿಗೇ ಬಂದ ಉದಯನನೂ ಅವನ ವಿದೂಷಕನೂ ಕಂಡು

ಹಿಡಿಯುವುದು ಸ್ವಲ್ಪದರಲ್ಲಿ ತಪ್ಪಿತಷ್ಟೇ.

ಲತಾಮಂಟಪದ ಹೊರಗೆ ನಿಂತಿದ್ದ ಉದಯನನನ್ನು ಅಂದು ಮರೆಯಲ್ಲಿ ಕಣ್ಣಾರೆ ಕಂಡು ವಾಸವದತ್ತೆ ಆನಂದಾಶ್ರುಗಳನ್ನು ಸುರಿಸಿದಳು. ತನ್ನೀ ವಿಚಿತ್ರ ವರ್ತನೆಯನ್ನು ಚೇಟಿಗೆ ಅವಳು ಪರಾಗ ಕಣ್ಣಿಗೆ ಬಿದ್ದದ್ದರಿಂದ ಕಣ್ಣೀರು ಬಂತೆಂದು ಹೇಳಿ ಸುಧಾರಿಸಿಕೊಳ್ಳಬೇಕಾಯಿತು.

ಹಾಗೇ ಅನ್ಯಮನಸ್ಕನಾಗಿ ನಿಂತಿದ್ದ ಉದಯನನಿಗೆ ಅಲ್ಲಿ ಯಾರೂ ಇಲ್ಲವೆಂದುಕೊಂಡಿದ್ದ ವಿದೂಷಕ ಕೇಳಿದ: "ನಿನಗೆ ವಾಸವದತ್ತೆ ಹೆಚ್ಚು ಪ್ರಿಯಳೊ ಅಥವಾ ಪದ್ಮಾವತಿಯೋ" ಉಭಯ ಸಂಕಟಕ್ಕೀಡಾದ ಉದಯನ ಬಾಯಿಬಿಡಲೇ ಬೇಕಾಯಿತು— "ಪದ್ಮಾವತಿಯ ರೂಪಶೀಲ ಮಾಧುರ್ಯಗಳಿಗಾಗಿ ನಾನವಳನ್ನು ಗೌರವಿಸುವೆನಾದರೂ ವಾಸವದತ್ತೆಯಲ್ಲಿ ನಟ್ಟ ನನ್ನ ಮನಸ್ಸನ್ನು ಕಿತ್ತುಕೊಳ್ಳಲಾರದವನಾಗಿದ್ದೇನೆ."

ವಾಸವದತ್ತೆಗೆ ಇದನ್ನಾಲಿಸಿ ತನ್ನ ಶ್ರಮ ಸಾರ್ಥಕವೆನಿಸಿ ಆನಂದವಾಯಿತು. ಪದ್ಮಾವತಿ ತನ್ನ ಪತಿ ಎಷ್ಟು ದಯಾಳು; ವಾಸವದತ್ತೆಯ ಗುಣಗಳನ್ನು ಸ್ಮರಿಸುತ್ತಾನೆ ಎಂದುಕೊಂಡಳು. ತನ್ನ ಬಳಿ ಇರುವವಳೇ ವಾಸವದತ್ತೆ ಎಂದು ಅವಳಿಗೇನು ಗೊತ್ತು!

ಒಂದು ರಾತ್ರಿ ಪದ್ಮಾವತಿಗೆ ತಲೆನೋಯತೊಡಗಿತು. ವಾಸವದತ್ತೆಯು ಏನಾದರೂ ಕಥೆಗಳನ್ನು ಹೇಳಿ ತಲೆನೋವಿನ ವೇದನೆಯನ್ನು ಕಡಿಮೆ ಮಾಡುವಳೆಂದು ಆಕೆಯನ್ನು ಚೇಟಿಯರು ಹುಡುಕಲು ಹೋದರು. ಪದ್ಮಾವತಿಯು ಅಸ್ವಸ್ಥಳಾಗಿರುವ ವಾರ್ತೆ ಬರುತ್ತಲೆ ರಾಜನು ಗಾಬರಿಯಿಂದ ಸಮುದ್ರಗೃಹದಲ್ಲಿ ಪದ್ಮಾವತಿ ಇರಬಹುದೆಂದು ಅಲ್ಲಿಗೆ ನಡೆದ. ಆದರೆ ಅಲ್ಲಿಗೆ ಪದ್ಮಾವತಿ ಬಂದಿರಲಿಲ್ಲ ಅವಳ ಆಗಮನವನ್ನು ನಿರೀಕ್ಷಿಸುತ್ತ ಅವರು ಅಲ್ಲಿಯೇ ಕುಳಿತರು. ಆಗ ರಾಜನಿಗೆ ನಿದ್ರೆ ಬಂದು ಅಲ್ಲಿಯೇ ಮಲಗಿದ. ವಿದೂಷಕನು ಚಳಿಯಿರುವುದರಿಂದ ಹೊದೆಯಲು ತರುವೆನೆಂದು ಹೊರಟುಹೋದನು.

ಆತನು ಅತ್ತ ಹೋಗುತ್ತಲೆ ಇತ್ತ ವಾಸವದತ್ತೆ ಚೇಟಿಯೊಂದಿಗೆ ಸಮುದ್ರಗೃಹಕ್ಕೆ ಬಂದಳು. ಸಮುದ್ರಗೃಹದ ಅರೆಗತ್ತಲಲ್ಲಿ ಮಲಗಿದಾತ ಉದಯನನೆಂದರಿಯದೆ ಪರಿಜನರು ಪದ್ಮಾವತಿಯೊಬ್ಬಳನ್ನೇ ಬಿಟ್ಟು ಹೋಗಿರುವರೆಂದು ಆತನ ಬಳಿಹೋಗಿ ಕುಳಿತಳು.

ನಿದ್ರೆಯಲ್ಲಿ ಉದಯನನು "ಹಾ ವಾಸವದತ್ತೆ" ಎಂದು ಕನವರಿಸಿದ. ವಾಸವದತ್ತೆಯು ಕೂಡಲೇ ಎದ್ದು "ಈತ ಆರ್ಯಪುತ್ರ. ಪದ್ಮಾವತಿಯಲ್ಲ. ನನ್ನ ದರ್ಶನದಿಂದ ಆರ್ಯ ಯೌಗಂಧರಾಯಣನ ಪ್ರತಿಜ್ಞೆಗೆ ಭಂಗ ಬರುವುದೇನೋ" ಎಂದು ಚಿಂತಿಸತೊಡಗಿದಳು.

ರಾಜನು ಮತ್ತೆ ನಿದ್ರೆಯಲ್ಲಿಯೇ "ಹಾ ಅವಂತೀ ರಾಜಪುತ್ರಿ" ಎಂದು ಬಡಬಡಿಸಿದ. "ಆತನು ಕನಸು ಕಾಣುತ್ತಿರುವ. ಇಲ್ಲಿ ಯಾರೂ ಇಲ್ಲ ಒಂದುಕ್ಷಣ ಹೊತ್ತು ಆತನನ್ನು ನೋಡಿ ಸಂತೋಷ ಪಡುವೆ," ಎಂದುಕೊಳ್ಳುವಷ್ಟರಲ್ಲಿ "ಹಾ ಪ್ರಿಯೆ, ಹಾ ಪ್ರಿಯಶಿಷ್ಯೆ, ವಿರಚಿಕೆಯ ನೆನಪೆ? ನಿನಗೆ ಸಿಟ್ಟೆ ಮಾತನಾಡು!" ಎಂದು ಮತ್ತಾತ ಕನವರಿಸಿದ. "ನನಗೆ ಸಿಟ್ಟಿಲ್ಲ. ವಿರಚಿಕೆಯ ಚಿಂತೆಬೇಡ" ಎಂದಾಕೆ ಉತ್ತರಿಸಿದಳು. ಉದಯನನು ತನ್ನ ಕೈ ಮುಂದೆ ಚಾಚಿದ. ಹಾಸಿಗೆಯ ಹೊರಗೆ ಜೋತಾಡುತ್ತಿದ್ದ ಅವನ ಕೈಗಳನ್ನು ಮೆಲ್ಲಗೆ ಮೇಲಿರಿಸಿ ವಾಸವದತ್ತೆ ಹೊರಗೆ ಹೊರಟಳು. ರಾಜನು ಒಮ್ಮೆಲೆ ಎದ್ದು "ಹಾ ವಾಸವದತ್ತೆ ನಿಲ್ಲು ನಿಲ್ಲು ಹಾ: ಧಿಕ್!" ಎನ್ನುತ್ತ ಮುನ್ನಡೆದ. ಬಾಗಿಲ ಚೌಕಟ್ಟು ತಲೆಗೆ ಬಡಿಯುತ್ತಲೆ ಎಚ್ಚರಾಗಿ ಆತನು ಇದು ನಿಜವೊ, ಅಥವಾ ಭ್ರಾಂತಿಯೊ ಎಂದು ಯೋಚಿಸತೊಡಗಿದ.

ಅಷ್ಟರಲ್ಲಿ ಅಲ್ಲಿಗೆ ಬಂದ ವಿದೂಷಕನನ್ನು ನೋಡಿ ರಾಜನು "ವಾಸವದತ್ತೆ ಬದುಕಿರುವಳು. ಮಲಗಿದ್ದ ತನ್ನನ್ನು ಆಕೆ ಎಬ್ಬಿಸಿದಳು. ಆಕೆ

ಸುಟ್ಟುಹೋದಳೆಂದು ರುಮಣ್ವಂತನು ಸುಳ್ಳು ಹೇಳಿದ" ಎಂದು ನುಡಿದ.

"ಇದು ಅಸಂಭವ, ನೀನು ಕನಸುಕಂಡಿರಬಹುದು. ಇಲ್ಲವೆ ನಗರದಲ್ಲಿರುವ ಅವಂತಿಸುಂದರಿ ಯಕ್ಷಣಿ ಕಾಣಿಸಿರಬಹುದು."

"ಇಲ್ಲ ಇಲ್ಲ. ಅವಳ ನೀಳ ಮುಂಗುರುಳು, ಕಾಡಿಗೆ ಹಚ್ಚಿದ ಕಣ್ಣುಗಳನ್ನು ನೋಡಿದೆ. ಅವಳು ನನ್ನ ತೋಳನ್ನು ಹಿಡಿದುದರಿಂದ ನನಗಾದ ರೋಮಹರ್ಷವಿನ್ನೂ ಹೋಗಿಲ್ಲ" ಎಂದು ರಾಜನು ತನ್ನ ಅನುಭವವನ್ನು ಹೇಳಿದ. ಅನಂತರ ಇಬ್ಬರೂ ಅಲ್ಲಿಂದ ಚತುಶ್ಶಾಲೆಗೆ ಬಂದರು.

ಅಷ್ಟರಲ್ಲಿ ಕಂಚುಕಿ ಬಂದು ಆರುಣಿಯನ್ನು ಸೋಲಿಸಲು ಅಮಾತ್ಯ ರುಮಣ್ವಂತ ಸೈನ್ಯ ಸಮುದಾಯದೊಂದಿಗೆ ಬಂದಿರುವದಾಗಿ ತಿಳಿಸಿದನು. ಉದಯನನ ಪೌರುಷ ಮರುಕಳಿಸಿ ಆರುಣಿಯನ್ನು ತನ್ನ ಬಾಣಕ್ಕೆ ಬಲಿಕೊಡುವುದಾಗಿ ಗರ್ಜಿಸುತ್ತ ರಾಜ ಯುದ್ಧಕ್ಕೆ ಹೊರಟ.

ಉದಯನ ವತ್ಸರಾಜ್ಯವನ್ನು ಮರಳಿ ಗೆದ್ದ. ಮಗಧಕ್ಕೆ ಮರಳಿದ ಆತ ಒಂದು ದಿನ ವೀಣೆ ನುಡಿಸುವುದನ್ನು ಕೇಳಿದ. ತನ್ನದಾದ ಆ ಘೋಷವತಿ ವೀಣೆಯನ್ನು ವಾಸವದತ್ತೆ ಬಾರಿಸುತ್ತಿದ್ದುದು ಆತನಿಗೆ ನೆನಪಾಯಿತು. "ಹಾ ಘೋಷವತಿಯನ್ನು ಪ್ರೀತಿಸುತ್ತಿದ್ದ ವಾಸವದತ್ತೆ ಇನ್ನಿಲ್ಲ!" ಎಂದು ಉದಯನ ವಿಲಪಿಸಿದನು.

ಆದರೆ ಉದಯನನ ಸಂಕಟ, ವಾಸವದತ್ತೆಯ ಅಂತರ್ಧಾನದ ಬಹಳ ಕಾಲ ಉಳಿಯಬೇಕಾಗಲಿಲ್ಲ. ಯುದ್ಧದಲ್ಲಿ ಗೆದ್ದ ಉದಯನನನ್ನು ಅಭಿನಂದಿಸಲು ವಾಸವದತ್ತೆಯ ತಂದೆ ಕಳಿಸಿದ ಶಿಷ್ಟರು ವಾಸವದತ್ತೆಯ ಚಿತ್ರವನ್ನು ದುಃಖಿ ಉದಯನನಿಗೆ ಅರ್ಪಿಸಿದರು.

ಆ ಚಿತ್ರವನ್ನು ನೋಡಿದ ಪದ್ಮಾವತಿಗೆ ತನ್ನ ರಕ್ಷಣೆಯಲ್ಲಿರುವ ಆವಂತಿಯೂ ಹೀಗೇ 'ಇರುವಳು ಎಂದು ಸಂದೇಹವುಂಟಾಯಿತು. ತನ್ನಲ್ಲಿ ಬ್ರಾಹ್ಮಣನು ನ್ಯಾಸವಾಗಿಟ್ಟ ಯುವತಿ ವಾಸವದತ್ತೆಯಂತೆ ಇರುವಳು ಎಂದಾಕೆ ಉದಯನನಿಗೆ ಹೇಳಿದಳು.

ಅಷ್ಟರಲ್ಲಿ ಆ ಉಜ್ಜಯನಿಯ ಬ್ರಾಹ್ಮಣನು ಅಲ್ಲಿಗೇ ಬಂದನು. ಅವನ ಧ್ವನಿಯು ಉದಯನನಿಗೆ ಪರಿಚಿತವೆನಿಸಿತು. ಪದ್ಮಾವತಿ ಆವಂತಿಕೆಯನ್ನು ಅಲ್ಲಿಗೆ ಕರೆಸಿದಳು. "ಸಾಕ್ಷಿಗಳೆದುರು ನ್ಯಾಸವನ್ನು ಒಪ್ಪಿಸೋಣ ಇಲ್ಲಿ ರೈಭ್ಯರು ಮೊದಲಾದವರಿರುವರು" ಎಂದು ಆವಂತಿಕೆಯ ಮುಖದ ಅವಗುಂಠನವನ್ನು ತೆಗೆದಾಗ ರಹಸ್ಯವೆಲ್ಲ ಬಯಲಾಯಿತು. ಯೌಗಂಧರಾಯಣನೂ ನಿಜವೇಷ ತೋರಿಸಿದ.

ಅವರಿಬ್ಬರನ್ನೂ ನೋಡಿದ ಉದಯನನಿಗೆ ಅದು ಕನಸೋ ನನಸೋ ತಿಳಿಯದಾಯಿತು. "ದೇವಿಯನ್ನು ಬಚ್ಚಿಟ್ಟದ್ದಕ್ಕಾಗಿ ನನ್ನನ್ನು ಕ್ಷಮಿಸಬೇಕು" ಎಂದು ಯೌಗಂಧರಾಯಣನು ಕ್ಷಮೆಕೇಳಿದ.

ನಮಸ್ಕರಿಸಿದ ಆತನನ್ನು ಹಿಡಿದೆತ್ತಿ ಉದಯನನು—"ನಿಮ್ಮ ಬುದ್ಧಿ ಸಾಹಸಗಳಿಂದಲೇ ನಾವು ಉಳಿದಿದ್ದೇವೆ" ಎಂದವನನ್ನು ಪ್ರಶಂಸಿಸಿದ. ಪದ್ಮಾವತಿಯು "ನಿನ್ನನ್ನು ಸಖಿಯೆಂದು ತಿಳಿದು ಏನಾದರೂ ಅಪಚಾರವೆಸಗಿದ್ದರೆ ಕ್ಷಮಿಸು" ಎಂದು ನಮಸ್ಕರಿಸಲು ವಾಸವದತ್ತೆ ಆಕೆಯನ್ನು ಹಿಡಿದು ಅಪ್ಪಿಕೊಂಡಳು.

"ಯೌಗಂಧರಾಯಣ, ದೇವಿಯನ್ನು ಬಚ್ಚಿಡುವ ಉದ್ದೇಶವೇನಿತ್ತು?"

"ಕೌಶಾಂಬಿಯುನ್ನುಳಿಸಲು"

"ಕಾಲೋಚಿತ ಸಾಹಸಗಳಿಂದ ವಿಮುಖನಾಗಿದ್ದ ನನ್ನನ್ನು ನಿನ್ನ ಮಂತ್ರಬಲದಿಂದ ಉದ್ಧರಿಸಿದ ಮಂತ್ರಿ ಶ್ರೇಷ್ಠನಲ್ಲವೇ ನೀನು ಯೌಗಂಧರಾಯಣ!" ಎಂದು ರಾಜ ತನ್ನ ಮಂತ್ರಿಯನ್ನು ಪ್ರಶಂಸಿಸಿದ.

ನಿರೂಪಣೆ : ಪ್ರ. ರಂ. ಪಂಢರಿ

ಮುಂದೆ ಹತ್ತು ಚಿತ್ರಗಳಲ್ಲಿ ಆ ನಾಟಕದ ಸನ್ನಿವೇಶಗಳನ್ನು ಚಿತ್ರೀಕರಿಸಲಾಗಿದೆ. →



ಮಗಧದ ರಾಜಕುಮಾರಿ ಪದ್ಮಾವತಿಯು ಉದಯನನ್ನು ಲಗ್ನವಾಗಬೇಕಾದರೆ ವಾಸವದತ್ತೆ ಸತ್ತಳೆಂದು ಸುಳ್ಳು ಸುದ್ದಿಯನ್ನು ಹರಡಬೇಕಿತ್ತು - ರಾಣಿ ಪತಿಯ ಉತ್ಕರ್ಷಕ್ಕಾಗಿ ಅದಕ್ಕೊಪ್ಪಿದಳು.



“ಬಾ ಇನ್ನು ನೀನು ನನ್ನವಳಾದೆ” ಎಂದು ವಾಸವದತ್ತೆಯನ್ನು ಸ್ವಾಗತಿಸುತ್ತಾಳೆ.



"...ಬೇಟೆಯಿಂದ ಮರಳಿದ ಉದಯನನಿಗೆ ಇದು ತಿಳಿಯುತ್ತಲೆ ಆತನೂ ಅದೇ ಬೆಂಕಿಯಲ್ಲಿ ಬಿದ್ದು ಸಾಯಲು ಹೋದನು."



ಚೇಟಿಯು 'ಆತನು ಕುರೂಪಿಯಾಗಿದ್ದರೆ' ಎಂದು ಚೇಷ್ಟೆ ಮಾಡಿದಾಗ ಒಮ್ಮೆಲೆ "ಇಲ್ಲ ಇಲ್ಲ. ಆತನು ರೂಪವಂತ— ಉಜ್ಜಯಿನಿಯ ಜನರು ಹಾಗನ್ನುವದನ್ನು ಕೇಳಿದ್ದೇನೆ." ಎಂದಳು ವಾಸವದತ್ತೆ.



"ಕೌತುಕ ಮಾಲೆಯನ್ನೂ ನಾನೇ ಕಟ್ಟಬೇಕಾಯಿತೆ ? ದೇವರೆಷ್ಟು ನಿರ್ದಯಿ ?" ವಾಸವದತ್ತೆ.



ಹಗಲಿರುಳು ವಾಸವದತ್ತೆಯದೇ ನೆನಪು. ಕಣ್ಮುಂದೆ ಅವಳದೇ ಚಿತ್ರ ತೋರಿ ಉದಯನನಿಗೆ.



ತನ್ನ ಪತಿಯ ಕುಂದದ ದೇಹವನ್ನು ಸಮೀಪದಿಂದ ನೋಡಿದ ವಾಸವದತ್ತೆಗೆ ಆನಂದಾಶ್ರುಗಳು ಬಂದವು.



"ಹಾ ವಾಸವದತ್ತೆ ನಿಲ್ಲು, ನಿಲ್ಲು ಹಃ ಧಿಕ್"



"ಹಾ, ಘೋಷವತಿಯನ್ನು ಪ್ರೀತಿಸುತ್ತಿದ್ದ ವಾಸವದತ್ತೆಯು ಇನ್ನೆಲ್ಲಿ ?"

ಎಂದು ಉದಯನ ವಿಲಪಿಸುವ



ಮಂತ್ರಬಲದಿಂದ ಕಾಲೋಚಿತ ಸಾಹಸಗಳಿಂದ, ಮುಳುಗಿದ್ದ ನನ್ನನ್ನು ಉದ್ಧರಿಸಿದ ಮಂತ್ರಿಶ್ರೇಷ್ಠ ನೀನಲ್ಲವೆ ಯೌಗಂಧರಾಯಣ.

# ಸಾಹಿತ್ಯ- ಸಾಂಸ್ಕೃತಿಕ

# ಒಬ್ಬ ರೈತ 10,000 ರೂಪಾಯಿ ಉಳಿಸಿಟ್ಟಿದ್ದ, ಆದರೆ ಪ್ರತಿ ವರ್ಷವೂ 600 ರೂಪಾಯಿ ಕಳೆದುಕೊಳ್ಳುತ್ತಿದ್ದ- ಅವನ ಸಂಗತಿ ಕೇಳಿದ್ದೀರಾ?

ಬ್ಯಾಂಕಿನ ಅಧಿಕಾರಿಯು ತನ್ನ ಪ್ರಚಾರ ಕಾರ್ಯ ವಾಹನಗಳೊಂದಿಗೆ ಅನೇಕ ಸಲ ಆ ರೈತನಲ್ಲಿಗೆ ಹೋಗಿ, ಬಹಳ ವಿವರಿಸಿ ಹೇಳಿ, ಪ್ರೇರಿಸಿದ ಅನಂತರವೇ ಅವನಿಗೆ ತನ್ನ ಹಣವನ್ನು ಬ್ಯಾಂಕಿನಲ್ಲಿ ಇಟ್ಟರೆ ಅದು ಸುರಕ್ಷಿತವಾಗಿ ಇರುವುದೆಂದೂ, ಬಡ್ಡಿ ಸೇರಿ ಅದು ವರ್ಧಿಸುವುದೆಂದೂ ನಂಬಿಕೆ ಉಂಟಾಯಿತು.

ಆಮೇಲೆ ಅವನು ಬ್ಯಾಂಕಿನ ಅಧಿಕಾರಿಯನ್ನು ತನ್ನ ಹೊಲಕ್ಕೆ ಕರೆದುಕೊಂಡು ಹೋದನು ಮತ್ತು ಅಲ್ಲಿ, ನೆಲದಡಿಯಲ್ಲಿ ಅಡಗಿಸಿಟ್ಟಿದ್ದ 10,000 ರೂಪಾಯಿ ಮೌಲ್ಯದ ನೋಟುಗಳ ಕಟ್ಟುಗಳನ್ನು ಹೊರ ತೆಗೆದನು. ಆಮೇಲೆ ಸ್ಟೇಟ್ ಬ್ಯಾಂಕಿನಲ್ಲಿ ಸೇವಿಂಗ್ಸ್ ಖಾತೆಯನ್ನು ತೆರೆದು ಅದರಲ್ಲಿ ಈ ಹಣವನ್ನು ಜಮೆ ಮಾಡಿದನು—ಪಿ.ಟಿ.ಐ.

ಅವನು ಈ 10,000 ರೂಪಾಯಿಯನ್ನು ಸ್ಟೇಟ್ ಬ್ಯಾಂಕಿನಲ್ಲಿ ಮೊದಲೇ ಇಡುತ್ತಿದ್ದರೆ ಅವನಿಗೆ ಈ ಹಣದ ಮೇಲೆ ಬಡ್ಡಿಯ ಹಣ ರೂ. 600/- ಸಿಗುತ್ತಿತ್ತು. ಅಷ್ಟು ಅವನಿಗೆ ನಷ್ಟವಾಯಿತು. ಈ 10,000 ರೂಪಾಯಿಯನ್ನು ಕೂಡ ಅವನು ಕಳೆದುಕೊಳ್ಳುವ ಸಂಭವವಿತ್ತು. ಏಕೆಂದರೆ ಗೆದ್ದಲು ಹುಳಗಳಿಗೂ ಇತರ ಕ್ರಿಮಿಗಳಿಗೂ ಈ ನೋಟುಗಳು ಆಹಾರವಾಗಿರುತ್ತವೆ. ನೀವು ಈ ರೈತನಷ್ಟು ಅದೃಷ್ಟಶಾಲಿಗಳಾಗಿರದಿರಬಹುದು. ಆದ್ದರಿಂದ ನಿಮ್ಮ ಹಣವನ್ನು ಸ್ಟೇಟ್ ಬ್ಯಾಂಕಿನಲ್ಲಿ ಇಡಿರಿ. ದೇಶದಲ್ಲೆಲ್ಲ ಹರಡಿರುವ, ಸ್ಟೇಟ್ ಬ್ಯಾಂಕ್ ಮತ್ತು ಅದರ ಸಹಾಯಕ ಬ್ಯಾಂಕುಗಳ 2,300ಕ್ಕಿಂತಲೂ ಹೆಚ್ಚು ಇರುವ ಆಫೀಸುಗಳು ಬ್ಯಾಂಕಿಂಗ್‌ನ ಸೌಕರ್ಯವು ಎಲ್ಲಾ ಜನರಿಗೂ ಸುಲಭವಾಗಿ ಸಿಗುವಂತೆ ಮಾಡಿವೆ.

ಸ್ಟೇಟ್ ಬ್ಯಾಂಕಿನ ಫೀಲ್ಡ್ ಆಫೀಸರರು ದೂರ ದೂರದ ಹಳ್ಳಿಗಳಿಗೂ ಹೋಗಿ ಅಲ್ಲಿಯ ಜನರಿಗೆ ಬ್ಯಾಂಕಿಂಗ್‌ನ ವಿಷಯದಲ್ಲಿ ಮಾರ್ಗದರ್ಶನವನ್ನೂ, ಸೇವೆಯನ್ನೂ ನೀಡುತ್ತಾರೆ. ಸ್ಟೇಟ್ ಬ್ಯಾಂಕಿನಲ್ಲಿ ಹಣ ಉಳಿಸಿರಿ.

[illegible]: ನಿಮ್ಮ ಹಣವನ್ನು ಅಡಗಿಸಿ ಇಡಬೇಡಿರಿ. ಅದನ್ನು ಸ್ಟೇಟ್ ಬ್ಯಾಂಕಿನಲ್ಲಿ ಸುರಕ್ಷಿತವಾಗಿ ಇಟ್ಟು ಅದು ಬೆಳೆಯುವಂತೆ ಮಾಡಿರಿ. ಹಾಗೆ ಮಾಡಿದರೆ ನೀವು ನಿಮಗೆ ಸಹಾಯ ಮಾಡಿಕೊಳ್ಳುವುದು ಮಾತ್ರವಲ್ಲದೆ ದೇಶಕ್ಕೂ ಸಹಾಯ ನೀಡುವಿರಿ.

## ಸ್ಟೇಟ್ ಬ್ಯಾಂಕ್ – ಸೇವೆಗಾಗಿ

I. 480 KN

# ಮೌಲಿಕ ಸಾಹಿತ್ಯ

## ಡಾ. ಎಸ್. ಎಲ್ ಭೈರಪ್ಪನವರ ವಿಚಾರಗಳು

ಸಂತೋಷಕುಮಾರ ಗುಲ್ವಾಡಿ

ಹೆಚ್ಚಾಗಿ ನಾನು ಮಾಡಿದ ಸಂದರ್ಶನಗಳಂತೆ ಒಂದು ಸಾಹಿತ್ಯ ಸಮ್ಮೇಳನದ ಮಧ್ಯದಲ್ಲೋ, ಒಂದು ಹೊಟೆಲಿನಲ್ಲೋ ಇಲ್ಲವೆ ಲೇಖಕನ ಮನೆಯಲ್ಲೋ ಅಸ್ತವ್ಯಸ್ತ ಗ್ರಂಥರಾಶಿಯ ನಡುವೆ ಕೂತು ಒಂದು ಕೈಯಲ್ಲಿ ಲೇಖನಿ, ಇನ್ನೊಂದರಲ್ಲಿ ಉರಿಯುತ್ತಿರುವ ಸಿಗರೇಟು ಹಿಡಿದ ಗಂಭೀರ ಮುಖದ, ಕೆದರಿದ ಕೂದಲಿನ ಲೇಖಕನನ್ನು ಕಾಣುವಂತೆ ಈ ನಮ್ಮ ಭೇಟಿ ನಡೆದಿರಲಿಲ್ಲ. ಅಥವಾ ಹವಾ ನಿಯಂತ್ರಿತ ಕೋಣೆಯಲ್ಲಿ ಬಿಮ್ಮನೆ ಮುಖ ಬಿಗಿದು ಕೂತ ಸೂಟುಧಾರಿಯನ್ನು ವ್ಯಾವಹಾರಿಕವಾಗಿ ಸಂದರ್ಶಿಸಿದಂತದ್ದೂ ಆಗಿರಲಿಲ್ಲ ಇದು

ಡಾ॥ ಎಸ್ ಎಲ್ ಭೈರಪ್ಪನವರೊಡನೆ ನಾನು ಮಾಡಿದುದು ಒಂದು ಅಪೂರ್ವ ರೀತಿಯ ಸಂದರ್ಶನ-ಅವರ ಅಪೂರ್ವ ಕೃತಿಗಳಂತೆಯೆ ಅದು ನಡೆದುದು ಮುಂಬಯಿಯ ಬಾಂಬೇ ಸೆಂಟ್ರಲ್ ರೈಲುನಿಲ್ದಾಣದ ಮೂರನೆಯ ನಂಬರ್ ಪ್ಲಾಟ್‌ಫಾರ್ಮ್‌ನಲ್ಲಿ-ಅಕ್ಟೋಬರ ೨೯, ೧೯೬೮ ರಂದು ಸಂಜೆ ಆರರಿಂದ ಡಹಲಿಯ ರೈಲು ಬಿಡುವವರೆಗೆ. ಸುತ್ತಲೆಲ್ಲ ಜಾತ್ರೆ; ಗಜಿಬಿಜಿ ಆದರೂ ನಮ್ಮದು ನಿರಾತಂಕವಾದ ಏಕಾಂತವಾಗಿತ್ತು.

ಡಾ॥ ಭೈರಪ್ಪನವರನ್ನು ನಾನು ಮೊದಲಾಗಿ ಭೇಟಿಯಾದುದು ಮುಂಬಯಿಯ ತುತ್ತತುದಿಯಲ್ಲಿ ದಿ. ಹೋಮಿ ಭಾಭಾ ಸ್ಮಾರಕವಾಗಿ ಭವವಾಗಿ ನಿಂತಿರುವ ಟಾಟಾ ಇನ್ಸ್ಟಿಟ್ಯೂಟ್ ಆಫ್ ಫಂಡಮೆಂಟಲ್ ರಿಸರ್ಚ್‌ನಲ್ಲಿ ಅಂದು ಸಂಜೆ ಅಲ್ಲಿ ಕೂಡಿದವರು ಶ್ರೀ ಶ್ರೀನಿವಾಸ ಹಾವನೂರ, ಡಾ॥ ವಾಸು ಬಿ ಪುತ್ರನ್ ಮತ್ತು ಕುಮಾರಿ ಮಡಿಮನ್. ಒಳಗಡೆ ಹೊಕ್ಕಾಗ



ಹಾವನೂರರು ನನಗೆ ಪರಿಚಯ ಮಾಡಿ ಕೊಟ್ಟರು—

"ಇವರೇ ಡಾ॥ ಭೈರಪ್ಪನವರು."

ವಂದಿಸುವುದನ್ನು ಮರೆತು ಒಂದರೆಕ್ಷಣ ನಾನು ಅವಾಕ್ಕಾದೆ. 'ವಂಶವೃಕ್ಷ', 'ಧರ್ಮಶ್ರೀ' ಯಂಥ ಉದ್ದಾಮ ಕಾದಂಬರಿಗಳನ್ನೂ, 'ಸತ್ಯ ಮತ್ತು ಸೌಂದರ್ಯ, 'ಸಾಹಿತ್ಯ ಮತ್ತು ಪ್ರತೀಕ' ಮೊದಲಾದ ವೈಚಾರಿಕ ಕೃತಿಗಳನ್ನೂ ಬರೆದ ಡಾ॥ ಭೈರಪ್ಪನವರು ಇವರೆಯೆ? ಅವರ ಕೃತಿ ಗಳನ್ನೋದಿ ನಾನವರ ಬಗೆಗೆ ಊಹಿಸಿದ ಚಿತ್ರ ದಲ್ಲಿ ಅವರು ತಲೆ ನರೆತ, ಧೋತಿ, ಕೋಟು, ಟೋಪಿ ಹಾಕಿಕೊಂಡ ರಿಟೈಯರ್ಡ್ ಪ್ರೊಫೆ ಸರರಿರಬಹುದೆಂದು ನನ್ನ ಕಲ್ಪನೆಯಾಗಿತ್ತು. ಆದರೆ ನನ್ನ ಮುಂದೆ ಮಂದಸ್ಮಿತರಾಗಿ ನಿಂತ ವರು ೩೪ ವರ್ಷದ ತರುಣರು. ಸುಪುಷ್ಟವಾದ, ಆರೋಗ್ಯ ಸೂಚಿಸುವ ಎಣ್ಣೆಗೆಂಪು ಶರೀರ. ಚಿಕ್ಕದಾದರೂ ಸೂಕ್ಷ್ಮವಾದ ಪ್ರಕಾಶಮಾನ ಕಣ್ಣುಗಳು. ಚಿಗುರು ಮೀಸೆ. ಸರಳವಾದ ಒಂದು ಪ್ಯಾಂಟು ಮತ್ತು ಬಿಳಿ ಬುಷ್ ಕೋಟು. ಅವಶ್ಯವಿದ್ದಷ್ಟೇ ಮಾತು. ಪ್ರವೃತ್ತಿ ಗಂಭೀರ ವಾಗಿರುವಂತೆ ತೋರುತ್ತಿದ್ದರೂ ಮಾತು ಸರಳ, ನೇರ. ಅವರ ಗಾಂಭೀರ್ಯ ಅವರು ಜೀವನ ದಲ್ಲಿ ಕಂಡು-ಉಂಡ ಕಷ್ಟಗಳ ಪರಿಣಾಮವಾ- ಗಿರಬಹುದು; ಇಷ್ಟು ಸಣ್ಣ ವಯಸ್ಸಿನಲ್ಲಿ ಆಳ ವಾಗಿ ಅಭ್ಯಸಿಸಿ, ಹಿರಿಯ ವಿಚಾರಗಳನ್ನು ಜೀರ್ಣಿಸಿಕೊಂಡು ಅಂತರ್ಮುಖಿಯಾದುದ ರಿಂದಲೂ ಇರಬಹುದು. ಆದರೆ ಅಲ್ಲಿ ಹೆಮ್ಮೆ ಇಲ್ಲವೆ ಸ್ವಪ್ರತಿಷ್ಠೆಯ ಕುರುಹೂ ಇರಲಿಲ್ಲ. ಇವರು ತುಂಬಿದ ಕೊಡ ಎಂದು ಮೊದಲಿಗೇ ಮನವರಿಕೆಯಾಗಿ ಬಿಟ್ಟಿತು ನನಗೆ. ಹೊರಗಿ ನಿಂದ ಸರಳವಾದರೂ ಅಂತರ್ಯದಲ್ಲಿ ಭವ್ಯವಾದ ವ್ಯಕ್ತಿತ್ವ.

"ನಮಸ್ಕಾರ" ಎಂದು ಕೈಜೋಡಿಸಿದೆ.

ಭೈರಪ್ಪನವರು ಪ್ರಥಮವಾಗಿ ಕವಿವರ್ಯ ಪದ್ಮಭೂಷಣ ದ.ರಾ ಬೇಂದ್ರೆಯವರನ್ನು ಭೇಟಿ ಯಾದಾಗ ಅವರಿಗೂ ಇದೇ ರೀತಿಯ ಸಂದೇಹ ಬಂದಿತ್ತಂತೆ. ಅಷ್ಟೇ ಏಕೆ, ಇಲ್ಲಿಯ 'ಟೈಮ್ಸ್ ಆಫ್ ಇಂಡಿಯಾ'ದ ಎಂ. ವಿ. ಕಾಮತರಿಗೆ ಭೈರಪ್ಪನವರ ಪರಿಚಯವನ್ನು ನಾನು ಮಾಡಿ ಕೊಟ್ಟಾಗ ಅವರಿಗೂ ಮೊದಲು ನಂಬಿಕೆಯೇ ಬರಲಿಲ್ಲ. ಧರ್ಮ, ತತ್ವಜ್ಞಾನ, ಮೊದಲಾದ ವಿಶಿಷ್ಟವಾದ ಅರ್ಥಪೂರ್ಣ ವಿಷಯಗಳ ಹಿನ್ನೆಲೆ ಯಲ್ಲಿ ಮೌಲಿಕ ಕಾದಂಬರಿಗಳನ್ನು ರಚಿಸಿದ ವರು ಇಷ್ಟು ತರುಣರು ಎಂದವರು ಒಮ್ಮೆಲೇ ಒಪ್ಪಲು ಸಿದ್ಧರಿದ್ದಂತಿರಲಿಲ್ಲ. ಆದರೆ ಭೈರಪ್ಪ ನವರು ಒಮ್ಮೆ ಮಾತನಾಡಲಾರಂಭಿಸಿದ ಮೇಲೆ ಅವರ ವಿಶಿಷ್ಟ ವ್ಯಕ್ತಿತ್ವದ ಅರಿವು ಕೇಳುವವರಿಗೆ ಆಗುತ್ತದೆ.

*

## ಅನುಭವದ ಕುಲುಮೆಯಲ್ಲಿ

ಇತ್ತೀಚಿನ ದಶಕದಲ್ಲಿ ಮೌಲಿಕ ಕಾದಂಬರಿ ಗಳನ್ನು ಮತ್ತು ವೈಚಾರಿಕ ಸಾಹಿತ್ಯವನ್ನು ಬರೆದು ಕನ್ನಡ ಸಾಹಿತ್ಯದಲ್ಲಿ ವಿನೂತನ ಸೃಷ್ಟಿ ಮಾಡಿರುವ ಡಾ॥ ಸಂತೇಶಿವರ ಲಿಂಗಣ್ಣಯ್ಯ ಭೈರಪ್ಪನವರು ಕನ್ನಡ ಸಾಹಿತ್ಯ ರಂಗದಲ್ಲೇ ಒಂದು ವೈಚಾರಿಕ ಕ್ರಾಂತಿ ಮಾಡಿದ್ದಾರೆ. ಓದು ಗರನ್ನು ಬೌದ್ಧಿಕ ಮಟ್ಟದಲ್ಲಿ ತನ್ನೊಂದಿಗೇ ಎತ್ತರಕ್ಕೊಯ್ದು ವಿಚಾರ ವಾದದ ಸಮರ್ಥನೆ ಗಳಿಂದ ಒಪ್ಪಿಸಿ, ಭಾವನೆಗಳ ತಾಕಲಾಟದಿಂದ ಹಿಡಿದಲುಗಿಸಿ, ಧಾರ್ಮಿಕ ಹಿನ್ನೆಲೆಯಿಂದ ಸೂಕ್ಷ್ಮವಾಗಿ ವಿವೇಚನೆ ಮಾಡಿ, ಮಾನಸಿಕ ವಾಗಿ ವಿಶ್ಲೇಷಿಸಿ, ಸಾಹಿತ್ಯದಲ್ಲಿ ಹೊಸ ಸೌಂದ- ರ್ಯವನ್ನು, ಓದುಗನಲ್ಲಿ ನವ್ಯ ಅನುಭವನ್ನು ತರುವಂಥ ಕೃತಿಗಳು, ಕೃತಿಕಾರರು ಕನ್ನಡದಲ್ಲಿ ಬೆರಳಿನಿಂದೆಣಿಸುವಷ್ಟು. ಭೈರಪ್ಪನವರು ಇವರಲ್ಲಿ ಒಬ್ಬರು: ಮೇಲಾಗಿ ಅವರು ಈ ಬಗೆಯ ಲೇಖಕರಲ್ಲೇ ಇನ್ನೂ ತರುಣರು. ಆದುದರಿಂದ ವಿಶಿಷ್ಟರು; ಹಾಗೆಯೆ ಅವರ ಕೃತಿಗಳು

ಜೀವನದಲ್ಲಿ ಸ್ವಾನುಭವದಿಂದ ಪ್ರೇರಿತರಾದ ಭೈರಪ್ಪನವರು ಕಷ್ಟಗಳನ್ನುಂಡು, ಸಮಸ್ಯೆಗಳ- ನ್ನೆದುರಿಸಿ, ಸ್ವಂತ ಪರಿಶ್ರಮದಿಂದ ಮೇಲೇರಿದ ವರು. ತನ್ನ ಆರನೆಯ ತರಗತಿಯಿಂದ ಸ್ವತಃ ಕಷ್ಟಪಟ್ಟು ಗಳಿಸಲಾರಂಭಿಸಿದ ಅವರು ಪಿ ಎಚ್.ಡಿ. ಮಾಡುವ ತನಕ ಇದೇ ರೀತಿ ದುಡಿದು ಕಲಿತರು. ಸಿನಮಾದಲ್ಲಿ ಗೇಟ್ ಕೀಪರ್ ಆಗು

ವುದರಿಂದ ಹಿಡಿದು ನಾಟಕದಲ್ಲಿ ಪರದೆ ಎಳೆದು, ಹೋಟೆಲು ಮಾಣಿಯಾಗಿ, ಊದು ಬತ್ತಿ ಮಾರಾಟ ಮಾಡಿ, ಖಾಸಗಿ ಟ್ಯೂಷನ್ನುಗಳಿಂದಲೇ ಅವರ ವಿದ್ಯಾರ್ಥಿದೆಸೆ ಸಾಗಿತ್ತು. ಅದಕ್ಕಾಗಿ ಇಂದು ಅವರಿಗೆ ವಿಷಾದವಿರುವಂತೆ ನನಗೆ ತೋರಲಿಲ್ಲ. ಇಂಥ ಅನುಭವಗಳನ್ನು ಜೀವನವೇನು ಎಲ್ಲರಿಗೂ ಕೊಡುತ್ತದೆಯೆ? [ಕೊಟ್ಟರೂ ಅದನ್ನೆದುರಿಸಿ ಅವರಂತೆ ಮೇಲಕ್ಕೇರುವವರು ಎಷ್ಟು ಮಂದಿ!] ಸ್ವಸಂತೋಷದಿಂದ ಅದನ್ನು ಸ್ವೀಕರಿಸಿ ಅವರು ಮುಂದುವರಿದರು. 'ಬರಿಯ ತತ್ವಜ್ಞಾನ ಹೊಟ್ಟೆ ತುಂಬಿಸಲಾರದು' ಎಂಬ ನಿಷ್ಠುರ ಸತ್ಯದ ಅರಿವು ಅವರಿಗೆ ಚೆನ್ನಾಗಿ ಮನವರಿಕೆಯಾಗಿದೆ. ಎಂದೇ ಅದನ್ನವರು ಜೀವನದಲ್ಲೇ ಅಳವಡಿಸಿಕೊಂಡರು. ಹೈಸ್ಕೂಲಿನಲ್ಲಿದ್ದಾಗ ಅವರಿಗಾದ ಒಂದು ಅಪೂರ್ವ ಅನುಭವವನ್ನು ಅವರದೇ ಮಾತಿನಲ್ಲಿ ಕೇಳಬೇಕು:

"...೧೯೪೫ರಲ್ಲಿ ನಾನು ಹೈಸ್ಕೂಲು ಎರಡನೆಯ ವರ್ಷ ಮುಗಿಸಿದ್ದೆ (ಈಗಿನ x). ೧೬ ವಯಸ್ಸು. ಓದಲು ದುಡ್ಡಿಲ್ಲದೆ ಮಿಲಿಟರಿ ಸೇರಲು ಬೆಂಗಳೂರಿಗೆ ಹೋದೆ ದೇಹ ಧಾರ್ಢ್ಯ (Physical fitness) ಬಂತು. ನನಗೆ ಏರ್ ಫೋರ್ಸ್ ಸೇರುವ ಆಸೆ. 'ಮ್ಯಾಟ್ರಿಕ್ ಆಗದವರನ್ನು ಸೇರಿಸುವುದಿಲ್ಲ. ಇನ್‌ಫ್ಯಾಂಟ್ರಿಗೆ ಸೇರು' ಎಂದರು. ಸೇರದೆ ನೌಕರಿ ಹುಡುಕಿಕೊಂಡು ದಾವಣಗೆರೆಗೆ ಹೊರಟೆ. ಬೆಂಗಳೂರು ಬಿಡುವ ಮುನ್ನ ಒಂದೂವರೆ ದಿನ ಊಟವಿಲ್ಲದೆ ತೊಟ್ಟಿದ್ದ ಪ್ಯಾಂಟು ಮತ್ತು ಬೂಟುಗಳನ್ನು ಗುಜರಿಯಲ್ಲಿ ಹನ್ನೆರಡಾಣೆಗೆ ಮಾರಿ ಹೊಟೇಲಿನಲ್ಲಿ ಊಟ ಮಾಡಿ ಟಿಕೇಟಿಲ್ಲದೆ ಗಾಡಿ ಹತ್ತಿದೆ. ಹತ್ತು ಹನ್ನೆರಡು ಮೈಲಿಯ ನಂತರ ಒಂದು ಸ್ಟೇಶನ್ನಿನಲ್ಲಿ ಹಿಡಿದರು. ಅನಂತರ ದಾವಣಗೆರೆಯ ತನಕ ರೈಲ್ವೆ ಹಳಿಗಳ ಪಕ್ಕದಲ್ಲಿ ನಡೆದುಹೋದೆ. ಅಲ್ಲಿ ನೌಕರಿ ಸಿಗಲಿಲ್ಲ. ಹುಬ್ಬಳ್ಳಿಗೆ ನಡೆದೆ. ಅಲ್ಲಿಯೂ ನೌಕರಿ ದೊರೆಯಲಿಲ್ಲ. ಈ ಸಂದರ್ಭದಲ್ಲಿ ಉತ್ತರ ಕರ್ನಾಟಕದ ಹಲವು ಊರುಗಳಲ್ಲಿ ಹೊಟೇಲಿನ ಮಾಣಿ, ನಾಟಕ ಕಂಪೆನಿ, ಟೂರಿಂಗ್ ಸಿನಿಮಾಗಳಲ್ಲಿ ಬ್ಯಾಂಡ್ ಬಡಿದು, ಲೆಕ್ಕಬರೆದು, ಬಣ್ಣ ಹಾಕಿ, ಸ್ಟೇಜಿನ ಮೇಲೆಬಂದು, ದಲಾಲಿ ಅಂಗಡಿಯಲ್ಲಿ ಕಾರಕೂನಗಿರಿ ಹೀಗೆಲ್ಲ ಮಾಡಿದೆ. ಕೊನೆಗೆ ನಾಡಾಡಿ ಸಂನ್ಯಾಸಿಗಳ ಜೊತೆ ಬಿದ್ದು, ಭಂಗಿ ಸೇದಿಕೊಂಡು ಕಾವಿಧರಿಸಿ ಶಿವಧ್ಯಾನ ಮಾಡುತ್ತಿದ್ದೆ. ಇಷ್ಟೆಲ್ಲ ಒಂದು ವರ್ಷದಲ್ಲಿ ಆದುವು. ಅನಂತರ ಮತ್ತೆ ಮೈಸೂರಿಗೆ ಹೋಗಿ, ಊದು ಬತ್ತಿ ವ್ಯಾಪಾರದ ಏಜಂಟನಾಗಿ ದುಡಿದು ಹೈಸ್ಕೂಲು ಮುಗಿಸಿದೆ. ಆ ಮೇಲೆ ಪ್ರೈವೇಟ್ ಟ್ಯೂಶನ್, ಕೋಚಿಂಗ್ ಕ್ಲಾಸಿನಲ್ಲಿ ಪಾಠ ಹೇಳಿಕೊಡುವುದು ಮಾಡಿಕೊಂಡು ಇತಿಹಾಸ ಅರ್ಥಶಾಸ್ತ್ರ ಇಂಗ್ಲಿಷ ಮೊದಲಾಗಿ ನನ್ನವಲ್ಲದ ವಿಷಯಗಳನ್ನೆಲ್ಲ ಸ್ವತಃ ಓದಿಕೊಂಡು ಇಂಟರ್ ಮತ್ತು ಬಿ. ಎ. ವಿದ್ಯಾರ್ಥಿಗಳಿಗೆ ಪಾಠ ಹೇಳಿ ಹಣ ಸಂಪಾದಿಸಬೇಕಾಗುತ್ತಿತ್ತು ಆದರೂ ಇದರಲ್ಲಿ ಯಶಸ್ವಿಯಾಗಿ ಸಾಕಷ್ಟು ಸಂಪಾದನೆ ಬರಲು ಶುರುವಾಯಿತು. ಓದಿನಲ್ಲಿ ಮೊದಲಿಗನಾಗಿ ನಿಲ್ಲುತ್ತಿದ್ದುದರಿಂದ ಬಿ ಎ. (ಆನರ್ಸ್) ಮತ್ತು ಎಂ. ಎ. ಗಳಲ್ಲಿ ಮೆರಿಟ್ ಸ್ಕಾಲರ್‌ಶಿಪ್ ಕೂಡ ಸಿಕ್ಕುತ್ತಿತ್ತು."

ಭೈರಪ್ಪನವರು ಬಿ. ಎ. (ಆನರ್ಸ್) ಮತ್ತು ಎಂ ಎ ಗಳೆರಡರಲ್ಲೂ ಪ್ರಥಮ ದರ್ಜೆಯ ಪ್ರಥಮ ಶ್ರೇಣಿಯಲ್ಲಿ ಪಾಸಾದರು ಆನರ್ಸ್‌ಗೆ ಚಿನ್ನದ ಪದಕವೂ ದೊರೆಯಿತು. ಆನರ್ಸ್‌ನಲ್ಲಿ ಕಲಿಯುವಾಗ ನಡೆದ ಒಂದು ಘಟನೆಯನ್ನು ಭೈರಪ್ಪನವರು ನನಗೆ ವಿವರಿಸಿದ್ದು, ಅವರ ಸತ್ವವೇನು ಎಂದು ತಿಳಿಸುವಂತೆಯು ಬಹಳ ಮಾರ್ಮಿಕವೂ ಆಗಿದೆ—

ಶರಚ್ಚಂದ್ರರ 'ದೇವದಾಸ' ಆಗ ಅವರಿಗೆ ಪಾಠ್ಯಪುಸ್ತಕವಾಗಿತ್ತು. ಶರಚ್ಚಂದ್ರರ ಗ್ರಂಥಗಳನ್ನೆಲ್ಲ ಆಗಲೇ ಮೂರು ಮೂರು ಬಾರಿ ಓದಿದ ಭೈರಪ್ಪನವರು ಅವನ್ನು ಅರಗಿಸಿ ಕುಡಿದಿದ್ದರು. ಆದರೂ ಪರೀಕ್ಷೆಯಲ್ಲಿ ಯಾವುದೋ ಕಾರಣದಿಂದ ಅವರಿಗೆ ೩೪ ಮಾರ್ಕು ಸಿಕ್ಕಿದ್ದುವಂತೆ. ಅತಿ ಹೆಚ್ಚು ಗುಣಗಳು ದೊರೆಯುವಂತೆ ಬರೆದಿದ್ದ ಭೈರಪ್ಪನವರು ಇದಕ್ಕಾಗಿ ಮೇಷ್ಟ್ರನ್ನು ಪ್ರತಿಭಟಿಸಿದರು. ಕೊನೆಗೆ ಮೇಷ್ಟ್ರು ಕೇಳಿದರಂತೆ—

"ಹಾಗಾದರೆ ನಿನಗೆ ಎಷ್ಟು ಮಾರ್ಕು ಬೇಕಪ್ಪ?"

ಕೂಡಲೇ ಭೈರಪ್ಪನವರ ಉತ್ತರ ಸಿದ್ಧ.

"ನಾನು ಮಾರ್ಕು ಬೇಡಲು ಬಂದಿಲ್ಲ ಸಾರ್. ನಾನು ಬರೆದುದಕ್ಕೆ ತಕ್ಕುದಾಗಿ ನೀವು ಕೊಡ ಬೇಕು ಎಂದು ಹಕ್ಕಿನಲ್ಲಿ ಕೇಳಲು ಬಂದೆ." ಎಂದರಂತೆ

ಭೈರಪ್ಪನವರು ಡಾಕ್ಟರೇಟ್ ಪಡೆದುದು ಬರೋಡಾ ವಿಶ್ವವಿದ್ಯಾಲಯದಲ್ಲಿ. ಸೌಂದರ್ಯ ಶಾಸ್ತ್ರದಲ್ಲಿ ಅವರ ಪಿ ಎಚ್‌ಡಿ, ಪ್ರಬಂಧ— ಅದನ್ನವರು ದಾಖಲೆಯ ಒಂದೂವರೆ ವರ್ಷ ದಲ್ಲೇ ಮುಗಿಸಿದ್ದರು— 'ಸತ್ಯ ಮತ್ತು ಸೌಂದರ್ಯ' ಎಂಬುದಾಗಿತ್ತು.

ಅಲ್ಲಿಂದ ಮತ್ತೆ ಭೈರಪ್ಪನವರು ಇದೀಗ ದೆಹ ಲಿಯ ಡಿಪಾರ್ಟ್‌ಮೆಂಟ್ ಆಫ್ ಫೌಂಡೇಶನ್ಸ್ ಆಫ್ ಎಜ್ಯುಕೇಷನ್ಸ್‌ನಲ್ಲಿ ಸಂಶೋಧಕರಾಗಿ ಕೆಲಸ ಮಾಡುತ್ತಿದ್ದಾರೆ ಅವರ ಪತ್ನಿ ಶ್ರೀಮತಿ ಸರಸ್ವತಿ ಎರಡು ಗಂಡು ಮಕ್ಕಳು ಸೊಣ ವಿನಕೆರೆಯಲ್ಲಿ ಅಜ್ಜ— ಅಜ್ಜಿಯರೊಂದಿಗೇ ಇದ್ದಾರೆ ಮುಂದೆ ಕೆಲವು ವರ್ಷಗಳಲ್ಲಿ ಅಲ್ಲಿಯೇ ನೆಲೆಸಿ ಸಂಪೂರ್ಣವಾಗಿ ಸಾಹಿತ್ಯ ಸಾಧನೆ ಮಾಡುವ ಯೋಜನೆ ಭೈರಪ್ಪನವರದು.

ಭಾರತೀಯ ಮೌಲ್ಯ, ವೇದಾಂತ, ಧರ್ಮ, ಜೀವನ ಪರಂಪರೆಗಳನ್ನು ಅತ್ಯಂತ ಶ್ರದ್ಧೆಯಿಂದ ಅಭ್ಯಸಿಸಿದ ಭೈರಪ್ಪನವರ ಕಾದಂಬರಿಗಳಲ್ಲೆಲ್ಲ ಅದರ ಉಜ್ವಲ ಹಿನ್ನೆಲೆ. ಉದಾತ್ತ ವಿಚಾರಗಳು ಸ್ಪಷ್ಟವಾಗಿ ಮೂಡಿವೆ. ಓದುವ ಹುಚ್ಚು ಮೊದಲಿನಿಂದಲೂ ಅವರೊಂದಿಗೇ ಬೆಳೆದು ಬಂದಿತ್ತು. ಸಿಸಿರಕುಮಾರ ಮಿತ್ರರ 'ವಿಷನ್ ಆಫ್ ಇಂಡಿಯಾ', ಈ. ಬಿ. ಹೇವೆಲ್‌ರ 'ಐಡಿ ಯಲ್ಸ್ ಆಫ್ ಇಂಡಿಯನ್ ಆರ್ಟ್'ಗಳನ್ನು ಅವರು ಹಿಂದೆಯೇ ಓದಿ ಪ್ರಭಾವಿತರಾಗಿದ್ದರು ಇತ್ತೀಚೆಗೆ ಆನಂದಕುಮಾರ ಸ್ವಾಮಿ ಬರೆದ ಭಾರತೀಯ ಕಲೆಗಳ ಬಗೆಗಿನ ಗ್ರಂಥಗಳು ಹೊಸ ಆಸಕ್ತಿಯನ್ನು ಕೆರಳಿಸಿವೆ. ಈ ವಿಷಯ ವಾಗಿ ಅವರೊಂದು ಗ್ರಂಥವನ್ನೂ ಬರೆಯುವ ಯೋಜನೆಯನ್ನು ಮಾಡಿಕೊಂಡಿದ್ದಾರೆ.

ಭೈರಪ್ಪನವರ ಬರವಣಿಗೆಯ ಕ್ರಮದ ಇನ್ನೆರಡು ವಿಶಿಷ್ಟ ವಿಚಾರಗಳನ್ನು ಇಲ್ಲಿ ಹೇಳ ಬೇಕು. ಕಾದಂಬರಿಯೊಂದನ್ನು ಬರೆಯುವ ಮೊದಲು ಅವರು ಅದಕ್ಕೆ ಬೇಕಾದ ಎಲ್ಲ ವಿವರಗಳನ್ನು ಸಂಗ್ರಹಿಸುತ್ತ ಇರುತ್ತಾರೆ. ಆಗ ಅವರು ಬರೆಯುವ ಗೋಜಿಗೇ ಹೋಗುವುದಿಲ್ಲ. ಕತೆಯು ಕಲ್ಪನೆ ಒಂದು ಮೂರ್ತರೂಪ ತಾಳಿದ ಬಳಿಕ ಕತೆ ನಡೆಯುವ ಪ್ರದೇಶಕ್ಕೆ ಹೋಗಿ ಅಲ್ಲಿಯ ವಾತಾವರಣ ಪರಿಸ್ಥಿತಿ, ವಸ್ತುಸ್ಥಿತಿ ಗಳನ್ನು ತಿಳಿದುಕೊಂಡು, ಅಭ್ಯಸಿಸುತ್ತಾರೆ. ಕಾದಂಬರಿಯ ಹಿನ್ನೆಲೆಯ ವ್ಯಾಪ್ತಿಗೆ ಸಹಕಾರಿ ಯಾಗುವಂಥ ಎಲ್ಲ ಸೂಕ್ಷ್ಮ ವಿಚಾರಗಳನ್ನೂ ಅರಿಯುತ್ತಾರೆ ಈ ರೀತಿಯ ಪ್ರದೇಶದ ಅಭ್ಯಾಸ (Spot Study) ಮಾಡಿ ಬರೆಯುವ ಲೇಖ ಕರು ಕನ್ನಡದಲ್ಲಿ ತೀರ ವಿರಳ.

ತಮ್ಮ ಕೃತಿಯೊಂದನ್ನು ಭೈರಪ್ಪನವರು ಒಮ್ಮೆಲೇ ಕೂತು ಸರಾಗವಾಗಿ ಬರೆಯುತ್ತಾರೆ. (ಇದನ್ನು ಆವರ ಕೃತಿಗಳ ಕೊನೆಯಲ್ಲಿ ಕೊಟ್ಟ ದಿನಾಂಕಗಳಿಂದ ಗಮನಿಸಬಹುದು) ಇದರಿಂದ ಕೃತಿಯ ಉದ್ದಕ್ಕೂ ಹರಿವ ಸೆಳೆ ಸಮನಾಗಿರು ತ್ತದೆ. ಈ ದಿನಗಳಲ್ಲಿ ಅವರು ಸಾಧ್ಯವಿದ್ದಷ್ಟು ಬಾಹ್ಯ ಆಕರ್ಷಣೆಗಳಿಂದ ಅಲಿಪ್ತರಾಗಿರುತ್ತಾರೆ. ಪತ್ರಿಕೆ ಓದುವುದು, ಪತ್ರವ್ಯವಹಾರ ಮಾಡು ವುದು ಮೊದಲಾಗಿ ಎಲ್ಲ ಕ್ರಿಯೆಗಳನ್ನು ನಿಲ್ಲಿಸಿ, ಕೃತಿರಚನೆಗಾಗಿಯೇ— ಅದರಲ್ಲೇ ಸಮಯ, ವಿಚಾರಗಳನ್ನು ಕೇಂದ್ರೀಕರಿಸುತ್ತಾರೆ. ಕರಡು ಬರೆದಾದ ಬಳಿಕ ಗುಣಗ್ರಾಹಿ ಮಿತ್ರರೊಡನೆ ಮುಕ್ತವಾಗಿ ಚರ್ಚೆ ನಡೆಸಿ ಅದನ್ನು ತಿದ್ದು ತ್ತಾರೆ. ಹಾಗೆಯೆ ಕೃತಿ ಪಳಗುತ್ತದೆ ಒಂದೆರಡು ವರ್ಷ ಕರಡು ಪ್ರತಿಯನ್ನು 'ಕೊಳೆ ಹಾಕಿದ' ಬಳಿಕವೇ ಅದು ಪ್ರಕಾಶನದ ಬೆಳಕು ಕಾಣು ವುದು.

## ಮೌಲಿಕ ಸಾಹಿತ್ಯ

ಬೇಸರ ಕಳೆಯಲು ಅಥವಾ ಸಮಯ ಕೊಲ್ಲಲು ಓದುವ ಕಾದಂಬರಿಗಳ ಗುಂಪಿಗೆ ಭೈರಪ್ಪನವರ ಮೌಲಿಕ ಕೃತಿಗಳು ಸೇರಿಲ್ಲ. ಅವರ ಕಾದಂಬರಿಗಳಲ್ಲಿ ಮನೋರಂಜನೆಗಿಂತ ವೈಚಾರಿಕತೆಗೆ ಪ್ರಾಧಾನ್ಯ ಹೆಚ್ಚು; ಕೆಲವೊಮ್ಮೆ ಇದುವೆ ತೀರ ಹೆಚ್ಚು. ಕೆಲವು ಭಾವುಕರಿಗೆ ಇವರ ಕಾದಂಬರಿಗಳು ಬರಡು ಎನಿಸಲೂ

ಬಹುದು. ಇದಕ್ಕೆ ಕಾದಂಬರಿಯುದ್ದಕ್ಕೂ ಬರುವ ಬೌದ್ಧಿಕ ಪ್ರಾಬಲ್ಯದ ಕೆಲವು ಪಾತ್ರಗಳ ಮುಕ್ತ ಚರ್ಚೆ ಕಾರಣ. ಆದರೂ ವೈಚಾರಿಕತೆ ಹದವಾಗಿ ಕಥಾವೇಷ್ಟದೊಂದಿಗ ಸಮಾವೇಶಗೊಂಡುದರಿಂದ ಬುದ್ಧಿವಂತ ಓದುಗನಿಗೆ ಅವರ ಕಾದಂಬರಿಗಳು ರಸಕವಳವಾಗುತ್ತವೆ. ಅವರ ಕೃತಿಗಳಿಗ ಮಹತ್ತಾದ ಉದ್ದೇಶವಿದೆ. ಸರಳವಾಗಿ, ನೇರವಾಗಿ ಹೇಳುವ ಕಥನ ಕಲೆ ಅವರಿಗೆ ಸಾಧಿಸಿದುದರಿಂದ, ಸನ್ನಿವೇಶಗಳು ತೀರ ಸೈಜವಾಗಿರುವುದರಿಂದ ಕಾದಂಬರಿ ಒಂದಿಷ್ಟು ಅಡೆತಡೆಗಳಿಲ್ಲದೆ ಮುಂದುವರಿಯುತ್ತದೆ. ಪ್ರತಿ ವ್ಯಕ್ತಿಯ ಚರ್ಚೆ— ಚರ್ಯೆಗಳಲ್ಲಿ ನಮ್ಮ ಬೌದ್ಧಿಕ ಮಟ್ಟ ಏರುತ್ತದೆ; ಅವರ ಅನುಭವ ನಮ ಅನುಭವವಾಗುತ್ತದೆ. ಅವರ ತಾಕಲಾಟ, ಸಮಸ್ಯೆ, ದುಃಖಗಳಲ್ಲಿ ನಾವೂ ಪಾಲ್ಗೊಳ್ಳುತ್ತೇವೆ. ಕಾದಂಬರಿಯ ಸಾರ್ಥಕತೆಗೆ ಇದಕ್ಕಿಂತ ಹೆಚ್ಚಿನ ಸಾಕ್ಷಿ ಏನಿದೆ?

ನಾಲ್ವತ್ತಾರನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ನಡೆದ ೧೯೬೫ ೬೬ ರ ಕನ್ನಡ ಕಾದಂಬರಿ ಸಣ್ಣ ಕತೆಗಳ ಒಂದು ಸಮೀಕ್ಷೆಯಲ್ಲಿ ಡಾ॥ ಹಾ. ಮಾ. ನಾಯಕರು ಭೈರಪ್ಪನವರ 'ವಂಶವೃಕ್ಷ'ದ ಕುರಿತಾಗಿ ಹೇಳಿದ ಮಾತು ಅವರ ಹೆಚ್ಚಿನ ಕೃತಿಗಳಿಗೆ ಅನ್ವಯಿಸುತ್ತದೆ: "... ಬದುಕಿನ ಬಹುದೊಡ್ಡ ಹಾಸಿನಮೇಲೆ ನಿರ್ಮಿತವಾಗಿರುವ 'ವಂಶವೃಕ್ಷ' ಕುತೂಹಲಕಾರಿ ಹಾಗೂ ಕನ್ನಡದ ಈಚಿನ ಮಹತ್ವದ ಕಾದಂಬರಿಗಳಲ್ಲಿ ಒಂದಾಗಿದೆ .... ಇಂದಿನ ಕಾದಂಬರಿಕಾರ ಎಷ್ಟೋ ಸಂದರ್ಭದಲ್ಲಿ ಉಪನ್ಯಾಸಕಾರನಾಗಿಬಿಡುತ್ತಾನೆ. ಆದರೆ ಭೈರಪ್ಪನವರು ಪ್ರಥಮತಃ ಕಾದಂಬರಿಕಾರರು; ಅವರ ಉಪನ್ಯಾಸ ಸೂಚ್ಯವಾದರೂ ಪ್ರಭಾವಪೂರ್ಣವಾಗಿದೆ."

ಮಾನಸಿಕ ಸಂಘರ್ಷ ಬುದ್ಧಿಜೀವಿಗಳಲ್ಲಿ ನಡೆದೇ ಇದೆ ಅದರ ಸೂಕ್ಷ್ಮವಾದ ವಿಶ್ಲೇಷಣೆಯನ್ನು ಮಾಡುವುದು ಲೇಖಕನ ಅಪೂರ್ವ ಸಮೀಕ್ಷಾದೃಷ್ಟಿಯ ದ್ಯೋತಕ ಸಂವೇದನಾಶೀಲನಾದ ಲೇಖಕನೊಬ್ಬನ ಕೃತಿಯಲ್ಲಿ ಭಾವನೆಯ ಮತ್ತು ವೈಚಾರಿಕ ತಾಕಲಾಟ ಸಹಜ. ಏಕೆಂದರೆ ಅವು ಜೀವನದ ಎರಡು ಶಕ್ತಿಗಳು; ಎರಡು ಧ್ರುವಗಳು, ಅವು ಪ್ರಕೃತಿ.

## ಡಾ। ಭೈರಪ್ಪನವರ ಕೃತಿಗಳು

| ಕಾದಂಬರಿಗಳು* | ಪ್ರಕಟಿಸಿದ ವರ್ಷ |
|---|---|
| ಧರ್ಮಶ್ರೀ | ೧೯೫೯ |
| ದೂರ ಸರಿದರು | ೧೯೬೧ |
| ವಂಶವೃಕ್ಷ | ೧೯೬೨ |
| ಜಲಪಾತ | ೧೯೬೪ |
| ತಬ್ಬಲಿಯು ನೀನಾದೆ ಮಗನೆ | ೧೯೬೫ |
| ನಾಯಿ ನೆರಳು | ೧೯೬೮ |
| ಮತದಾನ | |

**ವಿಚಾರ ಸಾಹಿತ್ಯ**

Truth and Beauty (ಪಿ ಎಚ್ ಡಿ. ಪ್ರಬಂಧ. ಬರೋಡ ವಿಶ್ವವಿದ್ಯಾಲಯದವರು ಇಂಗ್ಲೀಷಿನಲ್ಲಿ ಪ್ರಕಟಿಸಿದ್ದಾರೆ)

ಸತ್ಯ ಮತ್ತು ಸೌಂದರ್ಯ ೧೯೬೩ (ಮೇಲಿನ ಗ್ರಂಥದ ಕನ್ನಡ ವಿಸ್ತರಣೆ)

ಸಾಹಿತ್ಯ ಮತ್ತು ಪ್ರತೀಕ ೧೯೬೪

ಕಥೆ ಮತ್ತು ಕಥಾವಸ್ತು (ಅಚ್ಚಿನಲ್ಲಿ)

ಸೌಂದರ್ಯ ಮತ್ತು ಶಿವ (ಸಿದ್ಧತೆಯಲ್ಲಿ)

ಇತರ

ಗತಜನ್ಮ (ನೀಳ್ಗತೆ— ಹೈಸ್ಕೂಲಿನಲ್ಲಿ ಬರೆದುದು)

ಪ್ರಹ್ಲಾದ ಚರಿತ್ರೆ (ನಾಟಕ— ಮಿಡ್ಲ ಸ್ಕೂಲಿನಲ್ಲಿ)

ಸತ್ತಿಲ್ಲ (ಕಥೆ— 'ಕಸ್ತೂರಿ' ವಸಂತ ಸಂಚಿಕೆ ೧೯೬೮)

---

* ಇತ್ತೀಚೆಗೆ ಅವರು ಇನ್ನೂ ಎರಡು ಕಾದಂಬರಿಗಳನ್ನು ಬರೆದಿದ್ದಾರೆ ಅವುಗಳ ನಾಮಕರಣ ಇನ್ನೂ ಆಗಬೇಕಷ್ಟೆ. ಜೂನಿಯರ್ ಇಂಟರ್‌ನಲ್ಲಿರುವಾಗ ಕುಸ್ತಿ ಪ್ರೇಮಿಯಾದ ಭೈರಪ್ಪನವರು 'ಭೀಮಕಾಯ' ಹಾಗೂ 'ಬೆಳಕು ಮೂಡಿತು' ಕಾದಂಬರಿ ಬರೆದು ಎಂ ಎ ಯಲ್ಲಿರುವಾಗ ಸ್ವತಃ ಪ್ರಕಟಿಸಿದ್ದರು.

ಸಂಬಂಧ (ಕಥೆ— 'ಕಸ್ತೂರಿ' ವಸಂತ ಸಂಚಿಕೆ ೧೯೬೯)

'ವಂಶವೃಕ್ಷ'ದ ಶ್ರೋತ್ರಿಗಳ ಮನೆತನ ಮತ್ತು ಪ್ರೊ. ಸದಾಶಿವರಾಯರ ವಂಶಗಳಿಗಿದ್ದ ಹಳೆಯ ಬೆಸುಗೆ. ಅದನ್ನು ತಂದು ಜೋಡಿಸಿದ ಕೊಂಡಿ ಎಷ್ಟು ದೂರವಾದರೂ ಎಷ್ಟು ಹತ್ತಿರ; ದುರ್ಬಲವಾದರೂ ಅದೆಷ್ಟು ಬಲಿಷ್ಠ' 'ತಬ್ಬಲಿಯು ನೀನಾದೆ ಮಗನೆ'ಯಲ್ಲಿ ಪ್ರಾಚೀನ ಕಾಲದಿಂದಲೂ ಭಾರತೀಯ ಸಂಸ್ಕೃತಿಯಲ್ಲಿ ಪರಂಪರಾಗತವಾಗಿ ಗೋವಿಗಿದ್ದ ಪವಿತ್ರ ಸ್ಥಾನ ಇಂದು ಪಾಶ್ಚಾತ್ಯ ಅಂಧಾನುಕರಣೆಯಿಂದಲೋ ಆರ್ಥಿಕ ದೃಷ್ಟಿಯಿಂದಲೋ ಬದಲಾಗಿ ಹೊಸ ಸ್ಥಾನ ಪಡೆಯುತ್ತಿರುವುದನ್ನು ವಿಶ್ಲೇಷಿಸಲಾಗಿದೆ. ಇದಕ್ಕೆ ಹಿನ್ನೆಲೆಯಾಗಿ ಎರಡು ಭಿನ್ನ ಸಂಸ್ಕಾರ, ಪರಂಪರೆಗಳ ದೃಷ್ಟಿಕೋಣ ಹೇಗೆ ಪ್ರತ್ಯೇಕವಾಗಿರುತ್ತವೆ ಎಂಬುದನ್ನು ವಿಚಾರ ಪೂರಿತವಾಗಿ ಚಿತ್ರಿತವಾಗಿದೆ.

ಬುದ್ಧಿಯ ಗ್ರಹಿಕೆಗೆ ನಿಲುಕದ ಎಷ್ಟೋ ನಂಬಿಕೆಯು, ಶ್ರದ್ಧೆಯ ವಿಷಯಗಳನ್ನು ಮೌಢ್ಯ ಎನ್ನುವವರಿದ್ದಾರೆ. ಅಂಥವನ್ನು ಸರಳವಾಗಿ, ಆದರೆ ದಿಟ್ಟವಾಗಿ, ಆಳಕ್ಕೆ ಇಳಿದು ವಿಶದೀಕರಿಸಿ, ಓದುಗರು ಒಪ್ಪುವಂತೆ ವಿವರಿಸುವಲ್ಲಿ ಭೈರಪ್ಪನವರು ಬಲು ಗಟ್ಟಿಗರು ಇದಕ್ಕೆ ಧರ್ಮ ಸೂಕ್ಷ್ಮದ ಭದ್ರವಾದ ಬುನಾದಿಯನ್ನೇ ಅವರು ಕೊಡುತ್ತಾರೆ. ಇಲ್ಲಿ ಸಮಸ್ಯೆ, ಸನ್ನಿವೇಶಗಳು ಸಹಜವಾಗಿಯೇ ಕಾಣುತ್ತವೆಯಲ್ಲದೆ ಕೃತಕವೆನಿಸುವುದಿಲ್ಲ.

'ಧರ್ಮಶ್ರೀ'ಯ ನಾಯಕನು ಹಿಂದೂ ಧರ್ಮದ ಮರ್ಮವನ್ನು ತಿಳಿದ ಸುಸಂಸ್ಕೃತನಾದರೂ ಕ್ರೈಸ್ತಮತದಂಥ ಸೀಮಿತ ಶ್ರದ್ಧೆಯನ್ನು ಅಂಗೀಕರಿಸಿ, ಮಾನಸಿಕ ತೊಳಲಾಟಕ್ಕೆ ಒಳಗಾಗುವುದನ್ನು ನವಿರುನವಿರಾಗಿ ವಿವರಿಸಿದುದು ಇಂಥ ಸಹಜ ಸಮಸ್ಯೆಗಳಲ್ಲೊಂದು. ಪುನರ್ಜನ್ಮದ ಕುರಿತಾದ ಅವರ 'ನಾಯಿ ನೆರಳು' ಕಾದಂಬರಿಯಲ್ಲಿ ಕಾಲೇಜು ಕಲಿಯುವ ತರುಣ ವಿದ್ಯಾರ್ಥಿಯೊಬ್ಬ ತನ್ನ ತಂದೆ ಮತ್ತೆ ಹುಟ್ಟಿ ಬಂದಿದ್ದಾನೆ, ತನ್ನ ವಯಸ್ಸಿನ ದೇಹ ಧರಿಸಿ ಬಂದು ತನ್ನ ತಾಯಿಯನ್ನು ಕೂಡಿಕೊಳ್ಳುತ್ತಾನೆ ಎಂದು ಅರಿತು ತನ್ನ 'ವೈಜ್ಞಾನಿಕ' ಮನಸ್ಸಿನ ಅಳವಿಗೆ ತರಲಾರದೆ ಅದನ್ನು ಧಿಕ್ಕರಿಸುತ್ತಾನೆ. ಆಂಗ್ಲ ಪ್ರೊಫೆಸರರೊಡನೆ ತನ್ನ ಅಳಲನ್ನು ತೋಡಿಕೊಂಡಾಗ, ಹೆಚ್ಚಿನ ಕ್ರಿಶ್ಚಿಯನ್ನರು ಮಾಡುವಂತೆ ಹಿಂದೂ ಧರ್ಮ ಮೂಢ, ಅಂಧಶ್ರದ್ಧೆಯವರ ಗೊಡ್ಡು ಧರ್ಮ ಎಂದು ಹೇಳಿ ವೈಜ್ಞಾನಿಕವಾಗಿರುವ (!) ಕ್ರೈಸ್ತ ಮತದೆಡೆಗೆ ಒಲಿಸಲು ಪ್ರಯತ್ನಿಸಿ ಆ ಪ್ರೊಫೆಸರರು ಬೈಬಲನ್ನು ಕೊಡುತ್ತಾರೆ. ಅದನ್ನು ಓದುವಾಗ ಕುಮಾರಿಯಾದ ಮೇರಿಗೆ ಯೇಸುಕ್ರಿಸ್ತ ಹುಟ್ಟಿದನೆಂಬ ವಿಷಯವನ್ನು ನಂಬಲು ಅವನ ವಿಜ್ಞಾನ-ಪ್ರೇರಿತ ಮನಸ್ಸು ತಿರಸ್ಕರಿಸುತ್ತದೆ. ಈ ರೀತಿಯ ಸಂಸಾರಭೂತವಾದ ಶ್ರದ್ಧೆಯ ವಿಷಯಗಳನ್ನು ಭೈರಪ್ಪನವರಷ್ಟು ಮಾರ್ಮಿಕವಾಗಿ, ಓದುಗರು ತಲೆದೂಗುವಂತೆ ಹೇಳುವ ಲೇಖಕರು ಕನ್ನಡದಲ್ಲಿ ಇಲ್ಲವೆನ್ನುವಷ್ಟು ತೀರ ಕಡಿಮೆ.

## ಪಾತ್ರಶಿಲ್ಪ

ಡಾ। ಭೈರಪ್ಪನವರ ಕಾದಂಬರಿಗಳನ್ನು ಓದಿದವರಿಗೆಲ್ಲರಿಗೂ ಹಿಂದೆಂದೂ ಆಗದ ಅವರ್ಣನೀಯ ಅನುಭವ ಆಗಿರುವುದು ಗೊತ್ತು. ಭವ್ಯವಾದ ನೀಲಾಕಾಶದಲ್ಲಿ ಮಿನುಗು ತಾರೆಗಳಂತೆ ಜೀವನವೆಂಬ ವಿಶಾಲ ಹಿನ್ನೆಲೆಯಲ್ಲಿ ಸಂಸ್ಕಾರಭೂತವಾದ ಅವರ ಪಾತ್ರಗಳು ಜೀವಂತವಾಗಿ ನಿಲ್ಲುತ್ತವೆ. 'ವಂಶವೃಕ್ಷ'ದ ಶ್ರೋತ್ರಿಗಳು, ಕಾತ್ಯಾಯಿನಿ; 'ಧರ್ಮಶ್ರೀ'ಯ ನಾಯಕ ಮತ್ತು ನಾಯಕಿ 'ತಬ್ಬಲಿಯು ನೀನಾದೆ ಮಗನೆ'ಯ ಗೌಡಜ್ಜ ಕಾಳಿಂಗ, ಅವನ ಮೂಕಿ ಸೊಸೆ, ಮಗ ಮತ್ತವನ ಅಮೇರಿಕನ್ ಹೆಂಡತಿ— ಇವು ಚಿರಸ್ಮರಣೀಯ.

ಕಾದಂಬರಿಯೊಳಗಿನ ವ್ಯಕ್ತಿಗಳು ಆ ಕತೆಯೊಂದಿಗೇ ತಾದಾತ್ಮ್ಯ ಹೊಂದುವುದು ಭೈರಪ್ಪನವರ ಕೃತಿಗಳ ಇನ್ನೊಂದು ವೈಶಿಷ್ಟ್ಯ. ಅವರು ಪಾತ್ರವೊಂದನ್ನು ದೇಹದ ಇಲ್ಲವೆ ಭೌತಿಕ ರೂಪದ, ಆಕಾರ, ಗಾತ್ರ, ಉಬ್ಬು ತಬ್ಬು, ಚರ್ಯೆಗಳಿಂದ ವರ್ತಿಸುವ ಹವ್ಯಾಸಕ್ಕೆ ಅವರು ಇತರ ಹೆಚ್ಚಿನ ಲೇಖಕರಂತೆ

ಹೋಗಿಲ್ಲ. ಬದಲು ಆ ವ್ಯಕ್ತಿಗಳ ಮನಸ್ಸಿನಾಳಕ್ಕೆ ಇಳಿದು, ಅದನ್ನು ಕೆಣಕಿ, ಕೆದಕಿ, ಪದರು ಪದರಾಗಿ ಬಿಡಿಸಿ ಓದುಗರ ಮುಂದಿರಿಸುತ್ತಾರೆ.

ಸ್ತ್ರೀ ಪಾತ್ರಗಳು ಹೇಗಿರಬೇಕು? ಅದನ್ನು ಭೈರಪ್ಪನವರ ಒಂದು ಸ್ತ್ರೀಪಾತ್ರದ ಬಾಯಿಯಿಂದಲೇ ಕೇಳಿ—

"ಆಧುನಿಕ ಸ್ತ್ರೀಯನ್ನು ಚಿತ್ರಿಸುವಾಗ ನೀವು ಅವಳಲ್ಲಿ ವಿಚಾರವನ್ನು ತುಂಬುತ್ತೀರಿ. ಆ ವಿಚಾರಗಳು ವಾದದ, ತರ್ಕದ ದೃಷ್ಟಿಯಿಂದ ಎಲ್ಲರೂ ಒಪ್ಪಬೇಕಾದುವೇ. ಆದರೆ ಅವೇ ವಿಚಾರಗಳನ್ನು ಸ್ತ್ರೀಪಾತ್ರದಲ್ಲಿ ತುಂಬುವುದು ಕೃತಕವೆನಿಸುತ್ತದೆ. ಆಧುನಿಕ ವಿದ್ಯಾಭ್ಯಾಸವು ಎಷ್ಟೇ ಪ್ರಭಾವವನ್ನು ಬೀರಿದರೂ ಸ್ತ್ರೀಗೆ ತನ್ನದೇ ಆದ ತರ್ಕಸರಣಿ ಇದೆ, ತನ್ನದೇ ಆದ ಆಲೋಚನಾ—ಲಹರಿ ಇದೆ. ನೀವು ಅವುಗಳನ್ನು ಗುರುತಿಸದೆ, ಗಂಡಸರ ತರ್ಕ—ನೀತಿಯನ್ನು ಅವಳಿಗೆ ಕೊಟ್ಟದ್ದೀರಿ. ಇದರಿಂದ ಪಾತ್ರವು ತನ್ನ ಸಹಜತೆಯನ್ನು ಕಳೆದುಕೊಳ್ಳುತ್ತದೆ. ಹೆಂಗುಸು ಎಷ್ಟೇ ವಿದ್ಯಾವತಿಯಾಗಲಿ—ಸ್ತ್ರೀಯರು ಅತ್ಯಂತ ಮುಂದುವರಿದ ದೇಶವೆಂದು ಹೇಳಿಕೊಳ್ಳುವ ಅಮೇರಿಕ ಮತ್ತು ರಷ್ಯದ ಹೆಂಗುಸಾಗಲಿ— ಹೆಂಗುಸು ಹೆಂಗುಸೇ. ಅವಳನ್ನು ಹಾಗೆಯೇ ನೋಡಬೇಕು. ಅದನ್ನು ಬಿಟ್ಟು, ಗಂಡಸಿನ ಗುಣದೋಷಗಳನ್ನು ಅವಳಲ್ಲಿ ತುಂಬಿದರೆ ಸ್ತ್ರೀತ್ವದ ವಿಡಂಬನೆಯಾದೀತೇ ವಿನಾ ಅದು ಸಹಜವಾದ ಪಾತ್ರ— ಸೃಷ್ಟಿ ಎನಿಸುವುದಿಲ್ಲ." [ದೂರ ಸರಿದರು ಪು. ೩೩]

## ಸಾಹಿತ್ಯ ಧರ್ಮ

"ತತ್ವಜ್ಞಾನದ ಹಿನ್ನೆಲೆ ಇಲ್ಲದೆ ಇದ್ದ ಸಾಹಿತ್ಯ ಅಪೂರ್ಣ, ಆದರೆ ಬರೀ ತತ್ವಜ್ಞಾನದಿಂದಲೇ ಸಾಹಿತಿಯಾಗುವುದಿಲ್ಲ. ಅದು ಇಲ್ಲದಿದ್ದರೂ ಸಾಹಿತಿ ತಪ್ಪು ಹಾದಿ ತುಳಿಯುತ್ತಾನೆ. ಸಾಹಿತ್ಯದಲ್ಲಿ ಅದರ ಮಿಶ್ರಣ ಹದವಾಗಿರಬೇಕು," "ಎಲ್ಲ ಸಾಹಿತ್ಯ ವಿಮರ್ಶೆಯೂ ಮೂಲಭೂತವಾಗಿ ತತ್ವಜ್ಞಾನದ ತಳಹದಿಯ ಮೇಲೆಯೇ ನಿರ್ಮಾಣವಾಗುತ್ತದೆ." ಎಂದು ಹೇಳುತ್ತ ಭೈರಪ್ಪನವರು "Philosophy of Literature" ಎಂಬ ವೈಚಾರಿಕ ಗ್ರಂಥವನ್ನು ಇಂಗ್ಲೀಷಿನಲ್ಲಿ ಬರೆಯುವ ಉದ್ದೇಶ ತನಗಿದೆ ಎಂದು ನನ್ನೊಡನೆ ತಿಳಿಸಿದರು.

## ಕಥೆ ಮತ್ತು ಕಥಾವಸ್ತು

ಮುಂಬಯಿಯಲ್ಲಿ ಭೈರಪ್ಪನವರು 'ಕಥೆ ಮತ್ತು ಕಥಾವಸ್ತು' ಎಂಬ ವಿಷಯ ಸಾಹಿತ್ಯ ಕೂಟದ ಆಶ್ರಯದಲ್ಲಿ ಅಭ್ಯಾಸಪೂರ್ಣ ಭಾಷಣ ಕೊಟ್ಟಿದ್ದರು.

ಭೈರಪ್ಪನವರು ಆರಿಸಿದ ವಸ್ತು ವಿಷಯ—ಅಥವಾ ಅವರದೇ ಶಬ್ದದಲ್ಲಿ ಹೇಳುವುದಿದ್ದರೆ 'ಕಥಾದ್ರವ್ಯ' ಎಷ್ಟು ವಿಶಾಲ. ಅವರು ಆರಿಸಿದ ಕಥಾವಸ್ತುಗಳನ್ನೇ ನೋಡಿ, ಧರ್ಮ-ಮತ-ಮತಾಂತರ; ವಂಶಿಕಧರ್ಮ, ಬೆಳವಣಿಗೆ, ಅದರಲ್ಲಿ ಶ್ರದ್ಧೆ, ಕುಟುಂಬಯೋಜನೆ; ಪ್ರೇಮ-ವೈಚಾರಿಕ ಪ್ರೀತಿ; ಗೋವಿನ ಪಾವಿತ್ರ್ಯ—ಸ್ಥಾನ; ಪುನರ್ಜನ್ಮ ಇತ್ಯಾದಿ ಎಲ್ಲವೂ ಜೀವನದೊಂದಿಗೆ, ಸೂಕ್ಷ್ಮಾತಿಸೂಕ್ಷ್ಮವಾಗಿ ಹಾಸುಹೊಕ್ಕಾಗಿ ಒಂದಾದ ಕಥಾದರ್ಶನದ ಜೀವಾಳ. ಅದು ಧರ್ಮ, ತತ್ವಜ್ಞಾನಗಳ ತಳಹದಿಯ ಮೇಲೆ ಸುಂದರ ಹಂದರವಾಗಿ ಹರಡಿದೆ. ದೇಶ, ಕಾಲ, ಪರಿಸ್ಥಿತಿಯನ್ನು ಹೊಂದಿ ಬಾಹ್ಯಿಕ ವಿಚಾರ- ಪ್ರಚೋದನೆಗಳು ಹೆಚ್ಚು ಕಡಿಮೆಯಾದರೂ ಮೂಲಭೂತ ತತ್ವಗಳು ಅಚಲವಾಗಿ ಹೇಗೆ ಭದ್ರವಾಗಿರುತ್ತವೆ ಎಂಬುದು ಭೈರಪ್ಪನವರ ಎಲ್ಲ ಕೃತಿಗಳಲ್ಲಿ ಅಗೋಚರವಾದ ರೀತಿಯಲ್ಲಿ ಪ್ರಬಲವಾಗಿ ಹರಿದಿದೆ. ಅದನ್ನು ಎಳೆಎಳೆಯಾಗಿ ಬಿಡಿಸಿ, ಸುರುಳಿ ಸುರುಳಿಯಾಗಿ ಸುತ್ತಿ ಓದುಗರನ್ನು ಮಾರುಗೊಳಿಸುವ ಮಾರ್ಮಿಕ ರೀತಿ ಭೈರಪ್ಪನವರ ವೈಶಿಷ್ಟ್ಯ.

ಇಷ್ಟೆಲ್ಲ ವಿಚಾರಗಳ ಅಭ್ಯಾಸದ ಹಿನ್ನೆಲೆಯಲ್ಲಿ ನಾನು ಕೇಳಿದ ಪ್ರಶ್ನೆಗಳು-ಡಾ। ಭೈರಪ್ಪನವರ ಉತ್ತರಗಳು ಹೀಗಿವೆ—

## (ಸಾಹಿತ್ಯಿಕ)

೧. ಒಂದು ಸಾಹಿತ್ಯ ಕೃತಿಯನ್ನು ಅದರ ಬೌದ್ಧಿಕ ವಿದ್ವತ್ತಿನ ಮಾನದಂಡದಿಂದ ಅಳೆಯಬೇಕೋ ಕಲಾವಿದನಾಗಿ ಮಾತ್ರ ಆಸ್ವಾದಿಸಿದರೆ ಸಾಕೋ?

ಕಲಾತ್ಮಕ ಆಸ್ವಾದನೆಯು ಬೌದ್ಧಿಕ ಅಂಶವನ್ನು ಹೊರಪಡಿಸುವುದಿಲ್ಲ. ಬೌದ್ಧಿಕ ದ್ರವ್ಯ, ಸಂಕೇತಗಳಿಲ್ಲದೆ ಯಾವ ದೊಡ್ಡ ಸಾಹಿತ್ಯ ಕೃತಿಯೂ ಆಗುವುದಿಲ್ಲ. ಕೆಲವದರಲ್ಲಿ ಈ ಅಂಶವು ಎದ್ದು ಕಾಣಬಹುದು; ಮತ್ತೆ ಕೆಲವದರಲ್ಲಿ ಒಳಸರಿದು ಹುದಗಿರಬಹುದು.

೨. ಸಾಹಿತ್ಯ ಕೃತಿಯೊಂದು ಜೀವನದ ಮೌಲ್ಯ ಸಂವೇದನೆಯನ್ನು ಪ್ರತಿಬಿಂಬಿಸುವ ಮಾಧ್ಯಮವಷ್ಟೆ? ಇದರಲ್ಲಿ ಸಾಹಿತ್ಯಕಾರನ ತೊಡಕುಗಳೇನು?

ಮೌಲ್ಯಗಳ ತುಲನಾತ್ಮಕ ವಿವೇಚನೆ ಇಲ್ಲದಿರುವುದು ಸಾಹಿತ್ಯದ ಹದವನ್ನು ಮರೆತು ಭಾಷಣಕ್ಕಿಳಿಯುವುದು.

೩. ನಿಮ್ಮ ಅಭಿಪ್ರಾಯದಂತೆ ಕಾಮಕ್ಕೆ ಸಾಹಿತ್ಯದಲ್ಲಿ, ಮುಖ್ಯವಾಗಿ ಕಾದಂಬರಿ ಸಾಹಿತ್ಯದಲ್ಲಿ ಯಾವ ಸ್ಥಾನವಿದೆ?

ನಿಜ ಜೀವನದಲ್ಲಿರುವ ಸ್ಥಾನವೇ ಸಾಹಿತ್ಯದಲ್ಲೂ ಇದೆ. Sex ಎಂಬ ಅರ್ಥದಲ್ಲಾದರೆ ಕಾಮವೊಂದೇ ಜೀವನದ ಸಮಸ್ಯೆಯಲ್ಲ. ಹಸಿವು, ಬೌದ್ಧಿಕ ಹಸಿವು, ಸ್ನೇಹ, ಇತರ ಹಲವು ಬಗೆಯ ಆಶೆ ನಿರಾಶೆ, ಹೀಗೆ ಜೀವನದಲ್ಲಿ ಲೆಕ್ಕವಿಲ್ಲದಷ್ಟು ಶಕ್ತಿ, ಪ್ರವೃತ್ತಿಗಳಿವೆ. Sex ಕೂಡ ಅಂಥ ಒಂದು ಪ್ರವೃತ್ತಿ. ಸಾಹಿತ್ಯಕ್ಕೆ ಅದೊಂದೇ ವಸ್ತುವಾಗಬೇಕಿಲ್ಲ. ಹಾಗೆಂದು ಅದರ ಬಗೆಗೆ ಮಡಿಮಾಡಲೂ ಬೇಕಿಲ್ಲ. ಸಾಮಾನ್ಯೀಕೃತವಾಗುವ ಯಾವ ಭಾವ, ಪ್ರವೃತ್ತಿಗಳಾದರೂ ಸಾಹಿತ್ಯದಲ್ಲಿ ಬರಬಹುದು. ಕಚ್ಚಾ ಸ್ಥಿತಿಯಲ್ಲಿ ತಲೆಹಾಕಬಾರದು.

೪. ನೀವು ಓದಿರುವ ಈ ಶತಮಾನದ ಜಾಗತಿಕ ಹಾಗೂ ಕನ್ನಡದ ಶ್ರೇಷ್ಠ ಕಾದಂಬರಿಗಳಲ್ಲಿ ಮಾಡಿರುವ ಕಾಮದ ವಿಶ್ಲೇಷತೆಯ ಬಗೆಗೆ ನಿಮ್ಮ ಪ್ರತಿಕ್ರಿಯೆ ಏನು?

ತುಂಬ ದೊಡ್ಡದಾಗುವುದರಿಂದ ಇದಕ್ಕೆ ಉತ್ತರ ಇಂತಹ 'ಸಂದರ್ಶನ'ದಲ್ಲಿ ಸಾಧ್ಯವಾಗುವುದಿಲ್ಲ. ಈ ಪ್ರಶ್ನೆಯನ್ನು ಬಿಟ್ಟುಬಿಡಿ.

೫. ನೀವೇಕೆ ಬರೆಯುತ್ತೀರಿ?

ಒಂದು ವಸ್ತು ಮನಸ್ಸಿನಲ್ಲಿ ಹುಟ್ಟಿ ಬೆಳೆದು ಕಾಡುತ್ತದೆ. ಅದನ್ನು ಬರೆಯುವುದರಿಂದ ಒಂದು ರೀತಿಯ ಸಮಾಧಾನ ಸಿಕ್ಕುತ್ತದೆ. ಹೇಗೂ ಬರೆಯುತ್ತೇನೆ. ಶ್ರದ್ಧೆಯಿಂದಲೇ ಬರೆಯೋಣವೆಂದು, ಆ ಬಗೆಗೆ ಗಮನಕೊಟ್ಟು ಯೋಚಿಸಲು, ಬೇಕಾದ ಸಿದ್ಧತೆ ಮಾಡಿಕೊಳ್ಳಲು ತೊಡಗುತ್ತೇನೆ. ಬರೆಯುವ ಪ್ರಕ್ರಿಯೆಯಲ್ಲಿ ಒಂದು ವಸ್ತುವಿನ ಅರ್ಥ ಅಥವಾ ಸಂಕೇತವು ನನಗೇ ಸ್ಪಷ್ಟವಾಗುತ್ತದೆ. ಅಸ್ಪಷ್ಟವಾಗಿ ಕಂಡಿದ್ದ ಪಾತ್ರಗಳು ಸ್ಪಷ್ಟವಾಗಿ ಕಾಣಿಸಿಕೊಂಡು ಅವುಗಳ ಒಳಗು ತಿಳಿಯಲು ಮೊದಲಾಗುತ್ತದೆ. ಬರೆಯುವುದು ಜೀವನವನ್ನು ಅರಿಯುವ ಒಂದು ರೂಪವೆನಿಸುತ್ತದೆ.

೬. ಒಂದು ಜೀವಂತ ಸಮಸ್ಯೆ ಇಲ್ಲವೆ ಘರ್ಷಣೆಯ ವಿವೇಚನೆಯನ್ನು ಮಾಡುತ್ತ ಕಥಾದ್ರವ್ಯದ ಸುತ್ತ ಕಾದಂಬರಿಯೊಂದು ರೂಪುಗೊಳ್ಳುತ್ತದೆಯಷ್ಟೆ. ಹಾಗೆ ಮಾಡುವಾಗ ಲೇಖಕನು ಯಾವೊಂದು ದೌರ್ಬಲ್ಯಕ್ಕೆ ಒಳಗಾಗದೆ, ಪಾತ್ರ ಮತ್ತು ಸನ್ನಿವೇಶಗಳಿಗೆ ಅನ್ಯಾಯವಾಗದಂತೆ ಬರೆಯಬೇಕು. ಆದರೆ ಸಾಹಿತ್ಯ ಕೃತಿಗಳನ್ನು ಕಂಡರೆ ಅದರಲ್ಲಿ ಲೇಖಕನ ಮುದ್ರೆ—ಅವನ ಸುಖ-ದುಃಖಗಳ ಛಾಯೆ ಸ್ಪಷ್ಟವಾಗಿ ಕಾಣುತ್ತದೆ. ಇದು ಅವನ ದೌರ್ಬಲ್ಯದ ದ್ಯೋತಕವೇ? ಲೇಖನಿಯ ಅಧಿಕಾರ ದೊರೆತಿದೆ ಎಂದು ತೋರಿಸುವ ಅಹಂಕಾರವೆ?

ಅನುಭವವೇ ಕಲ್ಪನೆಗೆ ಸಾಮಗ್ರಿಯು ನ್ನೊದಗಿಸುವಾಗ ಲೇಖಕನ ಸುಖದುಃಖಗಳ ಛಾಯೆ ಸಾಹಿತ್ಯಕೃತಿಯಲ್ಲಿ ಮೂಡುವುದು ಸಹಜವೇ. ಈ ಛಾಯೆಯು ವೈಯಕ್ತಿಕ ಮಟ್ಟದಲ್ಲಿರದೆ ಕಲಾಕೃತಿಯ ವಸ್ತುನಿಷ್ಠ ಗುಣವಾಗಿ ಪರಿವರ್ತಿತವಾಗಿರಬೇಕು. ಲೇಖಕನ ಅಹಂಕಾರವೊ, ಸೃಷ್ಟಿಪ್ರಜ್ಞೆಯ ಅಪಕ್ವತೆಯೊ, ವಸ್ತು ಸಂಪತ್ತಿನ ಅಭಾವವೊ, ಯಾವ ಕಾರಣವಾದರೂ ಕೃತಿಯು ಹದಗೆಡುತ್ತದೆ.

**೭. ಜೀವನದಲ್ಲಿ ಪ್ರತಿಕ್ಷಣ ಸೃಷ್ಟಿ-ಸ್ಥಿತಿ ಲಯಕ್ಕನುಗುಣವಾಗಿ ನವ್ಯತೆ ಮೂಡಿ ಬರುತ್ತಲೇ ಇರುವಾಗ ಸಾಹಿತಿಯೊಬ್ಬ ತನ್ನ ಕೃತಿಯೊಂದನ್ನು 'ಇದು ನವ್ಯ' ಎಂದು ಹೇಳಿಕೊಳ್ಳುವುದು ಅರ್ಥಹೀನವಾಗಲಾರದೆ?**

ಜೀವನದಲ್ಲಿ ಮಾತ್ರವಲ್ಲ, ಸಾಹಿತ್ಯದಲ್ಲಿ ಸಹ ರೀತಿ ಬದಲಾಗುತ್ತಲೇ ಇರುತ್ತದೆ. ಪ್ರತಿಯೊಬ್ಬ ಲೇಖಕನೂ 'ತನ್ನತನ'ವನ್ನು ಕಂಡುಕೊಳ್ಳಬೇಕಾಗುತ್ತದೆ. ಪ್ರತಿಯೊಂದು ಸಫಲ ಸಾಹಿತ್ಯಕೃತಿಯೂ ಒಂದು ದೃಷ್ಟಿಯಿಂದ ನವ್ಯವಾದುದೇ. ಇಂಗ್ಲೀಷಿನಲ್ಲಿ Modernist ಎನ್ನುವ ಪಂಥ ಈಗಾಗಲೇ ಹಳೆಯದಾಗಿದೆ. ಕನ್ನಡದಲ್ಲಿಯೂ 'ನವ್ಯ' ಎಂಬ ಹೆಸರಿನ ಗುಂಪು ಕೆಲಸ ಮಾಡುತ್ತಿದೆ. ಕೆಲವು ವರ್ಷಗಳ ನಂತರ ಹಳೆಯದಾಗಿ ಈ ಗುಣವಾಚಕವು ಕಳಚಿಹೋಗುವುದು ಸಹಜ. ಈ ಬಗೆಗೆ ಎರಡು ಮಾತಿನ ಸಂಕ್ಷಿಪ್ತ ಉತ್ತರ ಹೇಳುವುದು ಸಾಧ್ಯವಿಲ್ಲ

**೮. ಸಾಹಿತ್ಯದ ಜನಪ್ರಿಯ ಮಾಧ್ಯಮವಾಗಿರುವ ಕಾದಂಬರಿಗಳಲ್ಲಿ ಶೀರ ಮೌಲಿಕತೆಯ ಗಂಭೀರ ವಿಚಾರಗಳನ್ನು ದೀರ್ಘವಾಗಿ ವಿವೇಚಿಸಿದಾಗ ಕೆಲವೊಮ್ಮೆ ಕೇವಲ ಶಬ್ದ ಜಾಲವಾಗುತ್ತದಲ್ಲದೆ ಆಗಬೇಕಾದ ಪರಿಣಾಮವು ಓದುಗನಲ್ಲಿ ಉಂಟಾಗುವುದಿಲ್ಲ. ಈ ತೊಡಕನ್ನು ಪರಿಹರಿಸುವ ಬಗೆ ಹೇಗೆ?**

ಮೌಲಿಕತೆಯು ಚರ್ಚೆಯ ರೂಪದಲ್ಲಿ, ಎಂದರೆ ಭಾಷಣವಾಗಿ ಬಂದರೆ, ಶಬ್ದಜಾಲವಾಗಿ ಅಪೇಕ್ಷಿತ ಪರಿಣಾಮವಾಗುವುದಿಲ್ಲ. ವಿಚಾರವು ಬೆನ್ನೆಲುಬಿನಂತೆ, ಅಸ್ಥಿಪಂಜರದಂತೆ. ಆದರೆ ಬರೀ ಅಸ್ಥಿಪಂಜರದಿಂದ ಸುಂದರ ಶರೀರವಾಗುವುದಿಲ್ಲ. ಈ ಹೋಲಿಕೆಯನ್ನು ಅಕ್ಷರಶಃ ಭಾವಿಸಬಾರದು. ವೈಚಾರಿಕತೆ ಸಾಹಿತ್ಯದ ಹದದಲ್ಲಿ ಒಂದಾಗಿ ಬರಬೇಕು. ಒಂದು ಕೃತಿಯು ವೈಚಾರಿಕತೆಯು ಹೆಚ್ಚಾಯಿತು, ಕಡಿಮೆಯಾಯಿತು ಅಥವಾ ಸಮವಾಯಿತು ಎಂಬುದು ಆಯಾ ವಾಚಕನ ಬುದ್ಧಿಯ ಮಟ್ಟ ಮತ್ತು ದೃಷ್ಟಿಕೋನಗಳನ್ನು ಅವಲಂಬಿಸುತ್ತದೆ. ಪಾತ್ರಗಳ ಒಳಸಮಸ್ಯೆಗೆ ಸಂಬಂಧಿಸಿದ ವಿಚಾರವು ಚರ್ಚೆಯ ರೂಪದಲ್ಲಿ ಬಂದರೂ ಬಾಧಕವಿಲ್ಲ. ಬೇರೆ ರೂಪದಲ್ಲಿ ಬರೆದರೂ ಆಗುತ್ತದೆ. ಈ ರೂಪಕ್ಕೆ ಇಂಥದೇ ಎಂಬ ನಿಯಮವಿಲ್ಲ.

**೯. ಸಾಹಿತ್ಯಕೃತಿಯೊಂದರ ಸಾಫಲ್ಯದ ಮತ್ತು ಯಶಸ್ಸಿನ ಮಾನದಂಡ ಯಾವುದು?**

ಇದು ತುಂಬ ಮೂಲಭೂತ ಪ್ರಶ್ನೆ. ನನ್ನ 'ಸತ್ಯ ಮತ್ತು ಸೌಂದರ್ಯ' 'ಸಾಹಿತ್ಯ-ಪ್ರತೀಕ' ಗ್ರಂಥಗಳಲ್ಲಿ ಇದರ ಕೆಲವು ಮುಖಗಳನ್ನು ಚರ್ಚಿಸಿದ್ದೇನೆ. ನಿಮ್ಮ ಇತರ ಪ್ರಶ್ನೆಗಳಿಗೆ ಕೊಟ್ಟಿರುವ ಉತ್ತರಗಳು ಇದಕ್ಕೂ ಅನ್ವಯವಾಗುತ್ತವೆ.

**೧೦. 'ವಂಶವೃಕ್ಷ'ದ ಹಿನ್ನುಡಿಯಲ್ಲಿ ನೀವು ಬರೆದಂತೆ 'ಪ್ರತಿಯೊಂದು ಸಾಹಿತ್ಯ ಕೃತಿಯು ಸೃಷ್ಟಿಯಲ್ಲಿ ಮಗ್ನನಾಗಿರುವಾಗಲೂ ಲೇಖಕನ ಮನಸ್ಸಿನ ಹಿನ್ನೆಲೆಯಲ್ಲಿ ಸಾಹಿತ್ಯದ ಕ್ರಿಯೆಯು ಮತ್ತು ಅರ್ಥವ್ಯಾಪ್ತಿಯ ಒಂದು ವಿಶಿಷ್ಟ ಕಲ್ಪನೆಯೇ ಅಸ್ಪಷ್ಟವಾಗಿ ಮೂಡಿರುತ್ತದೆ'. ಆದರೆ ಕೃತಿಯೊಂದನ್ನು ಬರೆಯುತ್ತಿರುವಂತೆಯೇ ಎಷ್ಟೋ ಅಸ್ಪಷ್ಟ (ಅಮೂರ್ತ) ಕಲ್ಪನೆಗಳು ಕೃತಿಕಾರನಲ್ಲಿ ತನ್ನಿಂದ ತಾನೇ ಸ್ಪಷ್ಟವಾಗಿ (ಮೂರ್ತಸ್ವರೂಪದ್ದಾಗಿ) ಮೂಡಿ**

ಬರುತ್ತವೆ. ಮೊದಲು ಸ್ಪಷ್ಟ ಎಂದು ತೋರಿದುದು ಮತ್ತೆ ಮಸುಕಾಗುತ್ತದೆ. ನಿಮಗೂ ಈ ಅನುಭವ ಆಗಿದೆಯೆ? ಆಗಿದ್ದರೆ ಅದಕ್ಕೆ ಕಾರಣವೇನು?

ಆಗಿದೆ. ಸೃಷ್ಟಿ ಮೊದಲು ನಡೆಯುತ್ತದೆ. ಅದರ ರೀತಿ ನೀತಿಗಳನ್ನು ಅರಿಯಹೊರಡುವ ವಿಶ್ಲೇಷಕ ಬುದ್ಧಿಯೂ ಅದನ್ನು ಅನುಸರಿಸುತ್ತದೆ. ಸಾಹಿತ್ಯದಲ್ಲಿ ಸಾಹಿತ್ಯ-ಕೃತಿಯೇ ಮುಖ್ಯ. ಅದರ ಬಗೆಗಿನ ಸಿದ್ಧಾಂತವು, ಕೃತಿಕಾರನೇ ವಿವರಿಸಿದುದಾದರೂ ಅನೇಕ ವೇಳೆ ಅಪೂರ್ಣವೂ ಅಸಮಂಜಸವೂ ಆಗುತ್ತದೆ.

೧೧. ಇದೇ ಹಿನ್ನುಡಿಯಲ್ಲಿ (ಪು. ೫) ಮನಶ್ಶಾಸ್ತ್ರವನ್ನು ಸಾಹಿತಿಗಳು ತಮ್ಮ ಕೃತಿ ನಿರ್ಮಾಣದ ವಿಧಾನವನ್ನಾಗಿ ಅಥವಾ ಗುರಿಯನ್ನಾಗಿ ಮಾಡಿಕೊಳ್ಳಬಾರದು ಎಂದಿದ್ದೀರಿ. ಇದನ್ನು ಸ್ವಲ್ಪ ವಿವರಿಸುವಿರಾ? ಸಾಹಿತಿಗಳು ಮನಶ್ಶಾಸ್ತ್ರದ ಮೂಲಕವೇ ತಮ್ಮ ಕೃತಿಗಳನ್ನು ರೂಪಿಸಿದ ಉದಾಹರಣೆಗಳಿಲ್ಲವೆ?

'ಸಾಹಿತ್ಯ ಮತ್ತು ಪ್ರತೀಕ' ಗ್ರಂಥದ ಎಂಟನೆಯ ಅಧ್ಯಾಯದಲ್ಲಿ ವಿವರಿಸಿದ್ದೇನೆ.

೧೨. ನಿಮ್ಮ ಕೃತಿಗಳಲ್ಲೆಲ್ಲ ನಿಮಗೆ ಅತ್ಯಂತ ಹೆಚ್ಚಿನ ಅನುಭವ ಹಾಗೂ ಆತ್ಮತೃಪ್ತಿ ಕೊಟ್ಟುದು ಯಾವುದು? ಏಕೆ?

ಲೇಖಕನ ಜೀವನದ ಕೊನೆಯಲ್ಲಿ ಕೇಳಬೇಕಾದ ಪ್ರಶ್ನೆ ಇದು

೧೩. ಸಾಹಿತಿಯ ಸ್ವಾನುಭವವೇ (ನಿಷ್ಫಲವಾದ ಪ್ರೇಮ, ಆಸೆ, ಸಾಧನೆ, ಇತ್ಯಾದಿ) ಕೃತಿಯಲ್ಲೂ ಸ್ಪಂದಿಸುವುದೆಂದರೆ ಅದು ಅವನ ಆತ್ಮವಿಮರ್ಶೆ ಎಂದರ್ಥವೆ?

ಸ್ವಾನುಭವವೊಂದೇ ಸಾಹಿತ್ಯದ ಸಾಮಗ್ರಿಯನ್ನು ಪೂರ್ಣವಾಗಿ ಒದಗಿಸುವುದಿಲ್ಲ. ಜೀವನಾನುಭವದಂತೆ ಜೀವನ ನಿರೀಕ್ಷಣೆ, ಚಿಂತನೆ ಮೊದಲಾದುವೂ ಸಾಹಿತ್ಯದ ಸಾಮಗ್ರಿಯನ್ನೊದಗಿಸುತ್ತವೆ. ಪರ್ಯಾಯ ಮತ್ತು ಸೀಮಿತ ಅರ್ಥದಲ್ಲಿ ಸಾಹಿತ್ಯಕೃತಿಯು ಲೇಖಕನ ಆತ್ಮವಿಮರ್ಶೆ ಎನ್ನಬಹುದು.

## (ನಿಮ್ಮ ಕೃತಿಗಳು)

(ಈ ಪ್ರಶ್ನೆಗಳನ್ನು ಕೆಲವು ಮಿತ್ರರು ನಿಮ್ಮ ಕಾದಂಬರಿಗಳನ್ನು ಶ್ರದ್ಧೆಯಿಂದ ಓದಿಯಾದ ಬಳಿಕ ಕೇಳಿದಂಥವುಗಳು. ಒಟ್ಟಿನಲ್ಲಿ ಅವರು ಅವನ್ನು ಮೆಚ್ಚಿಕೊಂಡಿದ್ದಾರೆ. ಆದರೆ ಒಂದೆರಡು ಸಂಶಯಗಳು ಸಹಜವಾಗಿ ಉದ್ಭವಿಸಿವೆ. ಪ್ರಶ್ನೆಗಳಲ್ಲಿ ಒಂದೆರಡು ನೇರವಾಗಿ ಮೊನಚಾಗಿದ್ದಂತೆ ಕಂಡರೂ ಅವುಗಳಿಗೆ ನೀವು ಉತ್ತರ ಕೊಡುವುದು ನಿಮ್ಮ ಕೃತಿಗಳ ಕುರಿತಾದ ಸ್ಪಷ್ಟನೆಗೆ ಸಹಾಯವಾಗಬಹುದೆಂದು ನನ್ನ ಪ್ರಶ್ನಾವಳಿಯಲ್ಲಿ ಸೇರಿಸಿಕೊಂಡಿದ್ದೇನೆ.)

೧. ನಿಮ್ಮ ಕಾದಂಬರಿಗಳಲ್ಲಿ ವೈಚಾರಿಕ ಪ್ರಾಬಲ್ಯ ಭಾವುಕತೆಗಿಂತ ಹೆಚ್ಚಾಗಿದೆ. ಇದು ನೀವು ಸಮಸ್ಯೆಗಳನ್ನೆತ್ತಿ, ಪೃಥಕ್ಕರಿಸಿ ವಿಶ್ಲೇಷಿಸುವ ಕಾರಣದಿಂದ ಇರಬಹುದು. ನಿಮ್ಮ ಕಾದಂಬರಿಗಳಲ್ಲಿ ಎಷ್ಟೋ ಬಾರಿ ಬುದ್ಧಿ, ಹೃದಯಕ್ಕೆ ಸೋಲುತ್ತದೆ. ಇದು ನಿಮ್ಮ ಸ್ವಂತ ಅನುಭವವೊ?

ನನ್ನ ಕಾದಂಬರಿಗಳಲ್ಲಿ ವೈಚಾರಿಕತೆಯು, ಭಾವುಕತೆಗಿಂತ ಹೆಚ್ಚಾಗಿದೆ ಎಂದು 'ದೂರ ಸರಿದರು' ಬಗೆಗೆ ನನಗೂ ಎನಿಸುತ್ತದೆ. ಒಂದು ಮಾತು: ವೈಚಾರಿಕತೆ ಮತ್ತು ಭಾವುಕತೆಯ ಪ್ರಮಾಣ ಮಿಶ್ರಣ ಇಷ್ಟೇ ಇರಬೇಕೆಂಬ ನಿಯಮವಾವುದು? ಇಲ್ಲಿ ಕಥೆಯು ಭಾಷಣವಾಗುತ್ತದೆ ಎಂಬುದನ್ನು ನಿರ್ಧರಿಸುವ ವಾಚಕನ ಮನೋಧರ್ಮ ಮತ್ತು ಸಂಸ್ಕಾರಗಳೂ ಮುಖ್ಯವಾದವು. ಕಥಾದ್ರವ್ಯ, ಕಥಾವಸ್ತು ವಿಲ್ಲದ ಕಥೆಯನ್ನು ನಾನು ಒಪ್ಪುವುದಿಲ್ಲ. ಸದ್ಯದಲ್ಲಿ ಪ್ರಕಟವಾಗುವ 'ಕಥೆ ಮತ್ತು ಕಥಾ-

ವಸ್ತು' ಎಂಬ ಪುಸ್ತಕದಲ್ಲಿ ಇದನ್ನು ಚರ್ಚಿಸಿದ್ದೇನೆ.

"ನಿಮ್ಮ ಕಾದಂಬರಿಗಳಲ್ಲಿ ಎಷ್ಟೋ ಬಾರಿ ಬುದ್ಧಿ ಹೃದಯಕ್ಕೆ ಸೋಲುತ್ತದೆ. ಇದು ನಿಮ್ಮ ಸ್ವಂತ ಅನುಭವವೂ?" ಎಂಬಲ್ಲಿ ಅದು ಸೋಲುವುದೆಲ್ಲಿ ಎಂದು ಸ್ಪಷ್ಟಪಡಿಸಬೇಕು. ಪಾತ್ರಗಳಲ್ಲಿಯಾದರೆ ಅದು ಆಯಾ ಪಾತ್ರಗಳ ಸ್ವಭಾವವಷ್ಟೆ. ಇಡೀ ಕಥಾ ರಚನೆಯಲ್ಲಿಯಾದರೆ ಅದು ಅಂತಹ ಪ್ರತಿಯೊಂದು ಭಾಗವನ್ನೂ ಪ್ರತ್ಯೇಕವಾಗಿ ವಿಶ್ಲೇಷಿಸಿ ನೋಡಬೇಕಾದ ಪ್ರಶ್ನೆ.

೨. 'ವಂಶವೃಕ್ಷ'ದ ಶ್ರೋತ್ರಿಗಳ ವ್ಯಕ್ತಿತ್ವ ಒಂದು ಅಪೂರ್ವ ಮತ್ತು ಮಹೋನ್ನತ ಚಿತ್ರಣ. ತನ್ನ ವಂಶದ ಕುರಿತು ಅಷ್ಟು ವಿಶ್ವಾಸ, ನಿಷ್ಠೆಗಳಿರುವ ಅವರ ಮೂಲ ಶ್ರದ್ಧೆ ಎಲ್ಲ ಅಡಿ ಮೇಲಾಗಿ ಕೊನೆಗೆ ಅವರು ಹಾದರಕ್ಕೆ ಹುಟ್ಟಿದವರು ಎಂಬ ಅರ್ಥ ಬರುತ್ತದೆ. ಹಾಗಾದರೆ ವಂಶೋತ್ಪತ್ತಿ ಎಂಬ ಕ್ರಿಯೆಯೇ ಅಪವಿತ್ರ, ಅನರ್ಥಕ, ಅನೈತಿಕ ಎಂಬುದು ನಿಮ್ಮ ಸಮರ್ಥನೆಯೆ?

ಇಲ್ಲಿ ನನ್ನ ಸಮರ್ಥನೆ ಏನೂ ಇಲ್ಲ. ಶ್ರೋತ್ರಿಯರ ದೊಡ್ಡತನವೇನಿದ್ದರೂ ಅವರ ಸಂಯಮ, ಔದಾರ್ಯ ಇತ್ಯಾದಿ ಗುಣಗಳಿಂದ ಆದದ್ದು. ವಂಶದ ಪಟ್ಟಿಯಿಲ್ಲದೆಯೂ ಅವರು ದೊಡ್ಡದಾಗಿಯೇ ನಿಲ್ಲಬಲ್ಲವರು. ನಮ್ಮ ಪುರಾಣಗಳಲ್ಲಿ ಪ್ರಸಿದ್ಧರಾದ ಎಷ್ಟೋ ಋಷಿ-ಮುನಿಗಳ ಹುಟ್ಟು ಇಂಥದೆ. ಶ್ರೋತ್ರಿಯರ ಹುಟ್ಟಿನ ಘಟನೆಯ ಔಚಿತ್ಯ ಕಾದಂಬರಿಯ ವಸ್ತುವಿನ ಸಮಗ್ರತೆಯಲ್ಲಿಯೇ ಇದೆ.

೩. ಶ್ರೋತ್ರಿಯ ಮತ್ತು ಕಾತ್ಯಾಯನಿಯಂಥ ('ವಂಶವೃಕ್ಷ') ವ್ಯಕ್ತಿಗಳನ್ನು ನೀವು ಜೀವನದಲ್ಲಿ ಕಂಡಿದ್ದೀರಾ? ಅಥವಾ ಅವು ಬರೀ ನಿಮ್ಮ ಕಲ್ಪನಾಸೃಷ್ಟಿಯೆ?

ಇವು ಕಲ್ಪನೆಯಲ್ಲಿ ಸೃಷ್ಟಿಗೊಂಡ ಪಾತ್ರಗಳು. ಈ ಗುಣಗಳುಳ್ಳ ವ್ಯಕ್ತಿಗಳನ್ನು ತುಂಬ ಅಪರೂಪವಾಗಿ ಕಂಡಿದ್ದೇನೆ. "ಶ್ರೋತ್ರಿಯರದ್ದು ಅಸಾಧ್ಯ ವ್ಯಕ್ತಿತ್ವ. ಆದುದರಿಂದ ಅಸ್ವಾಭಾವಿಕವಲ್ಲವೇ?" ಎಂದು ಕೆಲವು ವಾಚಕರು ಕೇಳಿದ್ದಾರೆ. ಅದರಲ್ಲಿ ಅಸ್ವಾಭಾವಿಕವೂ ಇಲ್ಲ, ಅಸಾಧ್ಯವೂ ಇಲ್ಲ. ನೈತಿಕ ಜೀವನ ಕುಸಿದು ನಾವು ದೊಡ್ಡವರೆಂದು ತಿಳಿದಿರುವ ಜನರಲ್ಲಿಯೂ ಸಣ್ಣತನ ತುಂಬಿರುವ ಈ ಕಾಲದಲ್ಲಿ ಈ ಪಾತ್ರ ಹಾಗೆ ಕಾಣಬಹುದು. ಸಾಕಷ್ಟು ವಿಶಾಲ ಅನುಭವವಿದ್ದು ಹಲವಾರು ಜನರನ್ನು ಕಂಡಿರುವವರಿಗೆ ಇದು ಸಾಧ್ಯವೂ ಸ್ವಾಭಾವಿಕವೂ ಆದ ಪಾತ್ರವಾಗಿಯೇ ಕಾಣಿಸುತ್ತದೆ.

೪. ನಿಮ್ಮ 'ಧರ್ಮಶ್ರೀ' ಕಾದಂಬರಿಯ ನಾಯಕನು ಹಿಂದೂ ಧರ್ಮವನ್ನು ಬಹು ನಿಷ್ಠೆಯಿಂದ, ಶ್ರದ್ಧೆಯಿಂದ ಅಭ್ಯಸಿಸಿದ. ಬಾಳಲು ಪ್ರಯತ್ನಿಸಿದ ವಿಚಾರವಾದಿ. ಯಾವುದೋ ದೌರ್ಬಲ್ಯಕ್ಕೆ ಒಳಗಾಗಿ ಅವನು ಕ್ರಿಶ್ಚಿಯನ್ನಳಾದ ಲಿಲ್ಲಿಯನ್ನು ವಿವಾಹವಾಗಿ ತಾನೂ ಮತಾಂತರಗೊಳ್ಳುತ್ತಾನೆ. ಆದರೆ ಮಾನಸಿಕ ತೊಳಲಾಟಕ್ಕೆ ಒಳಗಾಗುತ್ತಾನೆ. ಕೊನೆಗೆ ಆರ್ಯಸಮಾಜದ ಮೂಲಕ ಆಕೆಯನ್ನು ತನ್ನೊಂದಿಗೆ ಶುದ್ಧೀಕರಿಸಿಕೊಂಡು ಮತ್ತೆ ಹಿಂದೂ ಧರ್ಮಕ್ಕೆ ಸೇರಿಸಿಕೊಂಡು 'ಧರ್ಮಶ್ರೀ' ಎಂದು ನಾಮಕರಣ ಮಾಡುತ್ತಾನೆ

ಹಿಂದೂ ಧರ್ಮದ ಕುರಿತು ಅಷ್ಟು ನಿಖರವಾಗಿ, ಆಳವಾಗಿ ತಿಳಿದುಕೊಂಡ ಒಬ್ಬ ವ್ಯಕ್ತಿಗೆ ಆರ್ಯ ಸಮಾಜದಂಥ ಸಂಸ್ಥೆ ಇತ್ತು ಎಂಬುದು, ಹಿಂದು ಧರ್ಮದಿಂದ ಹೊರಗಾದವರನ್ನು ಅದು ಮತ್ತೆ ಹಿಂದೆ ಸೇರಿಸಿಕೊಳ್ಳುವುದೆಂಬ ಬಹು ಸಾಮಾನ್ಯ ಸಂಗತಿ ಮೊದಲೇ ತಿಳಿದಿರಲಿಲ್ಲವೆ? (ಅಸ್ವಾಭಾವಿಕವಾಗಿ ಕಾಣುವುದಿಲ್ಲವೆ?) ಅಥವಾ ನೀವು ಈ ಸಮಸ್ಯೆಗೊಂದು ಕೊನೆಮಾಡಲು ಹೀಗೆ ಮಾಡಿದಿರೊ?

ಆರ್ಯಸಮಾಜದ ಸಂಗತಿಯೇ

ಇಲ್ಲದೆ, ಅವರಿಬ್ಬರೂ ರಿಜಿಸ್ಟರ್ ವಿವಾಹವಾಗುವ ಸೂಚನೆಯೂ ಕಾದಂಬರಿಯಲ್ಲಿ ಬರುತ್ತದೆ. ಹಾಗೆ ಮಾಡಿದರೆ ಆಗುವ ಆರ್ಥಿಕ ಮತ್ತು ಇತರ ಅನಾನುಕೂಲಗಳನ್ನು ದೇವಪ್ರಸಾದರು ವಿವರಿಸುತ್ತಾರೆ. ಆರ್ಯಸಮಾಜದ ಮೂಲಕ ಶುದ್ಧಿಗೊಂಡರೂ ಇತರ ಹಿಂದುಗಳು ಅವರನ್ನು ಪೂರ್ಣವಾಗಿ ತಮ್ಮವರೆಂದು ಆದರಿಸುವುದಿಲ್ಲ. ಮದುವೆಗೆ ಮೊದಲಿನ ಮನಃಸ್ಥಿತಿಯಲ್ಲಿ ಅವರು ಆರ್ಯಸಮಾಜೀಯ ವಿವಾಹವಾಗಿದ್ದರೂ ಅಷ್ಟು ನೆಮ್ಮದಿ ಸಿಕ್ಕುತ್ತಿರಲಿಲ್ಲ. ತೊಳಲಿಕೆಯನ್ನನುಭವಿಸಿದ ಮೇಲೆ, ಸಂಪ್ರದಾಯಸ್ಥ ಹಿಂದುಗಳು ತಮ್ಮನ್ನು ಸಮಾನರೆಂದು ಕಾಣದಿದ್ದರೂ ನೆಮ್ಮದಿಯನ್ನು ಪಡೆಯಬಹುದು. ಅಲ್ಲದೆ, ನಾಯಕನು ಆ ಸಂದರ್ಭದಲ್ಲಿ ಭಾವುಕವಾಗಿ ವರ್ತಿಸುತ್ತಾನೆ; ಪೂರ್ಣ ವೈಚಾರಿಕವಾಗಿಯಲ್ಲ. ಶಂಕರನಿಗೆ ತಿಳಿಸಿದ್ದರೆ ಅವನು ಈ ಮಾರ್ಗ ಸೂಚಿಸುತ್ತಿದ್ದ. ಆದರೆ ಅವನಿಗೆ ತಿಳಿಸುವುದಕ್ಕೆ ಅಂಜಿ ಸುಮ್ಮನಿರುತ್ತಾನೆ. ಕೊನೆಗೆ ಸಹ ಆರ್ಯಸಮಾಜದ ಸೂಚನೆ ಬರುವುದು ಶಂಕರನಿಂದ.

೫. ನಿಮ್ಮ ಕಾದಂಬರಿಗಳಲ್ಲಿ ಕೆಲವು ಸ್ತ್ರೀಪಾತ್ರದ ಮರಣದಿಂದಲೇ ಸಮಾಪ್ತಗೊಳ್ಳುತ್ತವೆ. (ಉದಾ- 'ವಂಶವೃಕ್ಷ'- ಕಾತ್ಯಾಯಿನಿ; 'ದೂರ ಸರಿದರು'— ವಿನತೆ) ಇದು ನಿಮಗೆ ಸ್ತ್ರೀಯರ ಬಗೆಗೆ ಇದ್ದ ನಿಮ್ಮ ಅನುಕಂಪದ ದ್ಯೋತಕವೋ (ಓದುಗರಲ್ಲಿದ್ದ ಅನುಕಂಪವನ್ನು ಹೆಚ್ಚಿಸುವುದಕ್ಕೋ) ಇಲ್ಲವೆ ನೀವು ಕಾದಂಬರಿಯಲ್ಲಿ ಸೃಷ್ಟಿಸಿದ ಸಮಸ್ಯೆಗೆ ಪರಿಹಾರ ಸೂಚಿಸಲಾರದೆ ಮಾಡಿದ ಉಪಾಯವೊ?

ಎರಡೂ ಅಲ್ಲ. ಮಗನಿಂದ ತಿರಸ್ಕರಿಸಲ್ಪಟ್ಟು, ಮತ್ತೆ ಮಗುವನ್ನು ಹಡೆಯಲಾರದೆ, ಶ್ರೋತ್ರಿಯರ ವ್ಯಕ್ತಿತ್ವದ ನೈತಿಕ ನೆನಪಿನಿಂದ ಜರ್ಜರಿತಳಾದ ಕಾತ್ಯಾಯಿನಿ; ಅಂಜಿಕೆಯ ಸ್ವಭಾವದ, ಮತ್ತೆ ಆನಂದವನ್ನು ಕೊಡಲಾರದ ವಿನತೆಯರಲ್ಲಿ ಬದುಕುವ ಇಚ್ಛೆಯೇ ಉಳಿಯುವುದಿಲ್ಲ. ಅವರ ಸ್ಥಾನ ಅವರ ಪಾತ್ರಗಳಿಗೆ ಅನಿವಾರ್ಯವಾಗಿದೆ. ಇವೆರಡು ಪಾತ್ರಗಳು ಹೀಗಾಗುತ್ತವೆ. ನನ್ನ ಇತರ ಕಾದಂಬರಿಗಳ ಸ್ತ್ರೀ ಪಾತ್ರಗಳು ಸಾಯುವುದಿಲ್ಲವಲ್ಲ?

೬. ನಿಮ್ಮ ಕಾದಂಬರಿಗಳಲ್ಲಿ ('ವಂಶವೃಕ್ಷ'— ಶ್ರೋತ್ರಿ ಮತ್ತು 'ನಾಯಿ-ನೆರಳು'ದಲ್ಲಿ ಅಚ್ಚಣ್ಣ) ಪ್ರಮುಖ ವ್ಯಕ್ತಿಯೊಬ್ಬ ಅಂತ್ಯದಲ್ಲಿ ಸಂನ್ಯಾಸಿಯಾಗುತ್ತಾನೆ. ಇದು ಆಶ್ರಮಧರ್ಮದ (ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸ)

ಬಗೆಗೆ ನಿಮಗಿರುವ ನಂಬಿಕೆಯ ದ್ಯೋತಕವೆ?

ನನ್ನ ಸ್ವಂತ ನಂಬಿಕೆಯ ದ್ಯೋತಕವೇನಲ್ಲ. ವಂಶನಿಷ್ಠ ಗೃಹಸ್ಥ ಧರ್ಮದಿಂದ ಹೊರಬರಲು ಶ್ರೋತ್ರಿಯರಿಗಿರುವ ಮಾರ್ಗ ಸಂನ್ಯಾಸವೊಂದೆ. ಸಂನ್ಯಾಸ ಸ್ವೀಕಾರದ ಇಚ್ಛೆ ಅವರಿಗೆ ಮೊದಲೂ ಇತ್ತು. ಅಜ್ಜಣ್ಣಯ್ಯ ಸಂನ್ಯಾಸಿಯಾಗಿ ಹೋಗುವ ಪ್ರಕ್ರಮ, ಸಂದರ್ಭ ಕಾದಂಬರಿಯಲ್ಲೇ ಸ್ಪಷ್ಟವಾಗಿವೆ.

೭. ನಿಮ್ಮ ಕಾದಂಬರಿಗಳಲ್ಲಿ ಪದೇ ಪದೇ (ಕೆಲವೊಮ್ಮೆ ಒಂದು ಪುಟದಲ್ಲೇ ಎರಡಾವರ್ತಿ) ಒಂದೇ ಪದಪ್ರಯೋಗವನ್ನು ಒಬ್ಬ ವ್ಯಕ್ತಿಯ ಕುರಿತಾಗಿ ಇಲ್ಲವೆ ಒಂದು ಸನ್ನಿವೇಶದ ವಿಷಯವಾಗಿ ಮಾಡಲಾಗಿದೆ. (ಉದಾ— 'ವಂಶವೃಕ್ಷ'ದಲ್ಲಿ ಕಾತ್ಯಾಯಿನಿ ನಡೆಯುವಾಗ ಅವಳ ಪಾದಗಳಿಂದ ರಕ್ತ ಚಿಮ್ಮುವಂತಾಗುತ್ತಿತ್ತು ಎಂಬ ಪ್ರಯೋಗ, ಕೊನೆಯಲ್ಲಿ ಬರುವ ಸೋನೆ ಮಳೆ; 'ಧರ್ಮಶ್ರೀ'ಯಲ್ಲಿ ವರ್ಣಿಸಿರುವ ಹಿಂದೂಧರ್ಮ- ಕ್ರಿಶ್ಚಿಯನ್ ಮತ ವಿಚಾರಗಳು, 'ದೂರ ಸರಿದರು' ದಲ್ಲಿ ನಡೆವ ಪ್ರೇಮ ಮತ್ತು ಬೌದ್ಧಿಕ ವಿಚಾರಗಳ ತರ್ಕ, 'ತಬ್ಬಲಿಯು ನೀನಾದೆ ಮಗನೆ' ದಲ್ಲಿ ಬರುವ ಗೊಲ್ಲನ ವಿಚಾರ ಸರಣಿ) ಅದು ಒಂದು ವಿಶಿಷ್ಟ ಪರಿಣಾಮವನ್ನು ತರಲು ಮಾಡಿದ ತಂತ್ರವೆ?

ಹೌದು.

೮. ನಿಮ್ಮ 'ನಾಯಿ ನೆರಳು' ಕಾದಂಬರಿಯಲ್ಲಿ ನಾಯಿಯ ಸಂಕೇತವೇನು? ಅದರ ಸಾವು ಮಧ್ಯದಲ್ಲೇ ಆದುದು ಕಥಾವಸ್ತುವಿನ ಯಾವುದೋ ಕೊಂಡಿಯನ್ನೇ ಕಳಚಿದಂತೆ ಕಾಣುತ್ತದೆ. ಇದೇಕೆ ಹೀಗೆ?

ನಾಯಿ ಕರ್ಮಸಂಕೇತ. ಸ್ವರ್ಗಾರೋಹಣದಲ್ಲಿ ಯುಧಿಷ್ಠಿರನನ್ನು ಅನುಸರಿಸುವ ನಾಯಿಯನ್ನು ಜ್ಞಾಪಿಸಿಕೊಳ್ಳಿ. ಈ ಕಾದಂಬರಿಯಲ್ಲಿ ಸಹ ಅವನು ಅದರೊಡನೆಯೇ ತಲ್ಲೀನನಾಗಿ ಆಡುವುದು, ಆ ನಾಯಿಗೂ ಊರಿನ ಇತರ ನಾಯಿಗಳಿಗೂ ಹೊಂದದಿರುವುದು, ಪುಟ್ಟಿಯೊಡನೆ ತಪ್ಪಿಸಿಕೊಂಡು ಹೋಗುವಾಗ ನಾಯಿಯೇ ದಾರಿ ತೋರಿಸುವುದು. ಅದರಿಂದಲೇ ಅವರು ಪೋಲೀಸರಿಗೆ ಸಿಕ್ಕುವುದು. ಅದನ್ನು ಪೋಲೀಸರು ಹೊಡೆದು ಸಾಯಿಸಿದಾಗ ಅವನು ತಕ್ಷಣ ದುಃಖಪಟ್ಟು ಅನಂತರ ಬಿಡುಗಡೆಯಾದವನಂತೆ ನಗುವುದು ಇವೆಲ್ಲವನ್ನೂ ಈ ದೃಷ್ಟಿಯಿಂದ ಅರ್ಥಮಾಡಿಕೊಳ್ಳಬೇಕು. ನಾಯಿಯು ಪೂರ್ವಕರ್ಮ ಸಂಕೇತ ಎಂಬುದು ನಮ್ಮ ಪುರಾಣಗಳಲ್ಲಿ ಸಾಕಷ್ಟು ಬಂದು, ಪರಿಚಯವಾಗಿರುವುದರಿಂದ ಇದನ್ನು ಹೆಚ್ಚು ಬಿಡಿಸಿ ಹೇಳುವ ಅಗತ್ಯವಿಲ್ಲ ಅದು ಸತ್ತ ನಂತರ ಅವನು ಜೈಲಿಗೆ ಹೋದರೂ ಸಂನ್ಯಾಸಿಯಂತೆಯೇ, ಎಂದರೆ ಲೌಕಿಕದಿಂದ ಬಿಡುಗಡೆಯಾದವನಂತೆ ಇರುತ್ತಾನೆ; ಸ್ವಯಂಪ್ರೇರಿತನಾಗಿ ಶಿಕ್ಷೆಯನ್ನು ಅನುಭವಿಸುತ್ತಾನೆ.

೯. ಇದರಲ್ಲೇ ಪುನರ್ಜನ್ಮವಾಯಿತೆಂದು ತಿಳಿದು ಉಂಟಾದ ಸಮಸ್ಯೆಗೆ ಪರಿಹಾರವನ್ನೂ ನೀವು ಏಕೆ ಸೂಚಿಸಲಿಲ್ಲ?

ಎಲ್ಲವನ್ನೂ ನಾಯಿಯ ಸಂಕೇತವೇ ಸೂಚಿಸುತ್ತದೆ. ಅದನ್ನೆಲ್ಲ ನೇರವಾಗಿ ನಿರೂಪಿಸಲು ಬರುವ ಸಾಹಿತ್ಯಿಕ ತೊಡಕನ್ನು ಕಾದಂಬರಿಯ ಹಿನ್ನುಡಿಯ ನಿಬಂಧ "ಸಾಹಿತ್ಯ ಮತ್ತು ಮೂಲ್ಯಾತ್ಮಕ ವಾಸ್ತವತೆ"ಯಲ್ಲಿ ಚರ್ಚಿಸಿದ್ದೇನೆ.





# ಮಹಿಳೆಯರ ಬರೆವಣಿಗೆಯಲ್ಲಿ ವೈಶಿಷ್ಟ್ಯವೇನಿದೆ ?

ಅನುಪಮಾ ನಿರಂಜನ

ಒಂದು ಕೃತಿಯ ಮೌಲ್ಯಮಾಪನ ಅದರ ಸತ್ತ್ವ ಅಥವಾ ಶ್ರೇಷ್ಠತೆಯಿಂದಲೇ ಹೊರತು ಕೃತಿಕಾರರ ವೈಯಕ್ತಿಕ ಖ್ಯಾತಿ ಪ್ರತಿಷ್ಠೆಗಳಿಂದಲ್ಲ; ಅಥವಾ ಅದನ್ನು ಬರೆದವರು ಪುರುಷ ಅಥವಾ ಮಹಿಳೆ ಎಂಬುದರಿಂದಲ್ಲ ಸಾಹಿತ್ಯ ನಿರ್ಮಿತಿಗೆ ಅಗತ್ಯವಾದ ಪರಿಕರಗಳು ಹಲವು. ಸ್ವಂತ ಪ್ರತಿಭೆ ಮತ್ತು ಭಾಷೆಯ ಮೇಲಣ ಪ್ರಭುತ್ವದ ಜೊತೆಗೆ, ಸಮಗ ಚಿಂತನೆ, ಸಹನೆ, ಅನುಕಂಪ, ವಿಚಾರಪರತೆ, ಹೃದಯವಂತಿಕೆ ಇವುಗಳೂ ಸಾಹಿತಿಗೆ ಇರಬೇಕು. ಮೇಲಿನ ಗುಣಗಳನ್ನು ಯಾವ ವ್ಯಕ್ತಿ ಮೈಗೂಡಿಸಿಕೊಂಡಿರುವನೋ ಆತ ಅಥವಾ ಆಕೆ ಒಳ್ಳೆಯ ಸಾಹಿತಿಯಾಗುವ ಲಕ್ಷಣಗಳನ್ನು ತೋರಬಹುದು. ಆದುದರಿಂದಲೇ ಸಾಹಿತ್ಯ ನಿರ್ಮಾಣದ ಅರ್ಹತೆಗೆ ಲಿಂಗಭೇದವಿಲ್ಲ.

ತನ್ನ ಕತೆ ಅಥವಾ ಕಾದಂಬರಿಯಲ್ಲಿ ಒಂದು ಪಾತ್ರವನ್ನು ಅಥವಾ ಒಂದು ವಿಶಿಷ್ಟ ಸನ್ನಿವೇಶವನ್ನು ಚಿತ್ರಿಸಲು ಸಾಹಿತಿ ಆಳವಾದ ಅಭ್ಯಾಸ ಮಾಡಬೇಕಾಗುತ್ತದೆ. ಪರಿಸರ ವ್ಯಕ್ತಿಯ ಜೀವನದ ಮೇಲೆ ಹಾಗೂ ಸಮಾಜದ ಮೇಲೆ ಯಾವ ಪರಿಣಾಮವನ್ನುಂಟುಮಾಡುತ್ತವೆ ಎಂಬುದರ ಬಗೆಗೆ ವಿಚಾರಮಾಡುವುದರ ಜೊತೆಗೆ, ಕಲಾಪೂರ್ಣವಾಗಿಯೂ ಸಹಜವಾಗಿಯೂ ಪಾತ್ರ ಅರಳುವಂತೆ ಮಾಡುವ ಚೈತನ್ಯ ಸಾಹಿತಿಗಿರಬೇಕು. ಈ ರೀತಿಯ ಪಾತ್ರ ಸೃಷ್ಟಿಮಾಡುವಾಗ ಸಾಹಿತಿ ಆ ಪಾತ್ರದಲ್ಲಿ ತನ್ಮಯನಾಗಬೇಕಾಗುತ್ತದೆ. ಉದಾಹರಣೆಗೆ ಒಬ್ಬ ಬರಹಗಾರ ಒಂದು ಹೆಣ್ಣಿನ ಪಾತ್ರ ಚಿತ್ರಣಮಾಡುವಾಗ, ತನ್ನ ಜೀವನದ ಅನುಭವಗಳನ್ನು ಒರೆಗೆ ಹಚ್ಚಿ ನೋಡುತ್ತಾನೆ. ವಿಶಿಷ್ಟ ವಾತಾವರಣದಲ್ಲಿ ಆ ಹೆಣ್ಣು ವ್ಯಕ್ತಪಡಿಸುವ ಪ್ರತಿಕ್ರಿಯೆಗಳೇನು ಎಂಬುದನ್ನು ಚಿತ್ರಿಸುವಾಗ, ಆ ಪಾತ್ರ ತಾನೇ ಆಗಿದ್ದರೆ ಆ ಸನ್ನಿವೇಶದಲ್ಲಿ ಹೇಗೆ ವರ್ತಿಸುತ್ತಿದ್ದೆ ಎಂಬುದನ್ನು ಕಲ್ಪಿಸಿಕೊಳ್ಳಬೇಕಾಗುತ್ತದೆ. ಇದನ್ನೇ ಲೇಖಿಕೆಯರಿಗೂ ಅನ್ವಯಿಸಬಹುದು. ಪುರುಷ ಪಾತ್ರವನ್ನು ಸೃಷ್ಟಿಸುವಾಗ ಲೇಖಕಿಯರೂ ಇಂಥದೇ ತಲ್ಲೀನತೆಯನ್ನು ತೋರಿಸಬೇಕಾಗುತ್ತದೆ. ಹೀಗಾಗಿ ಸಾಹಿತ್ಯವನ್ನು ಯಾರೇ ರಚಿಸಲಿ ಅದು ಜನರ ಮನಸ್ಸನ್ನು ಅರಳಿಸಬೇಕಾದರೆ, ಸಾಹಿತಿ ಜೀವನಕ್ಕೆ ನಿಷ್ಠನಾಗಿರಬೇಕು. 'ಮಹಿಳೆಯರು ಮಹಿಳಾಪಾತ್ರಗಳನ್ನು ಚೆನ್ನಾಗಿ

ಚಿತ್ರಿಸಬಲ್ಲರು,' ಎಂಬ ವಾದ ಹುರುಳಿಲ್ಲದ್ದು. ಕನ್ನಡದ ಪುರುಷ ಸಾಹಿತಿಗಳನೇಕರು ಸ್ತ್ರೀಯ ಮಾನಸಿಕ ತಾಕಲಾಟಗಳನ್ನು ಚಿತ್ರಿಸಿರುವ ರೀತಿ ಮಹಿಳಾ ಸಾಹಿತಿಗಳಿಂದ ಸಾಧ್ಯವಾಗಿಲ್ಲ. ಹಾಗೆಯೇ ಗಂಡಸರ ಪಾತ್ರಗಳನ್ನು ಕೆಲ ಲೇಖಿಕೆಯರು ಚಿತ್ರಿಸಿರುವಷ್ಟು ಸೊಗಸಾಗಿ ರೂಪಿಸಲು ಲೇಖಕರೂ ಸಮರ್ಥರಾಗಿಲ್ಲ

ಮಹಿಳೆಯರ ಬರವಣಿಗೆಯಲ್ಲಿ ಅವರದೇ ಆದ ವೈಶಿಷ್ಟ್ಯ ಎಲ್ಲಿದೆ? ಆರಿಸಿಕೊಳ್ಳುವ ವಸ್ತುವಿನಲ್ಲೇ? ಬಳಸುವ ತಂತ್ರದಲ್ಲೇ? ಶೈಲಿಯಲ್ಲೇ? ಭಾಷಾಪ್ರಯೋಗದಲ್ಲೇ?

ಆಧುನಿಕ ಕನ್ನಡ ಲೇಖಕಿಯರ ಬರೆವಣಿಗೆಯನ್ನು ಸ್ಥೂಲವಾಗಿ ಪ್ರತಿಬಿಂಬಿಸುವ ಎರಡು ಕಾದಂಬರಿಗಳು ಹಾಗೂ ಎರಡು ಕತೆಗಳನ್ನು ಅವಲೋಕಿಸಿದರೆ. ಮೇಲಿನ ಪ್ರಶ್ನೆಗಳಿಗೆ ಉತ್ತರ ಸಿಗುತ್ತದೆ.

ದಿವಂಗತೆ ಶ್ರೀಮತಿ ತ್ರಿವೇಣಿಯವರ "ಬೆಕ್ಕಿನ ಕಣ್ಣು" ಹಲವು ದೃಷ್ಟಿಗಳಿಂದ ಅತ್ಯುತ್ತಮವೆನಿಸಿದ ಕಾದಂಬರಿ. ಕನ್ನಡದಲ್ಲಿ ಮೊದಲಬಾರಿಗೆ ಮನೋರೋಗ ಕಾದಂಬರಿಯ ಮುಖ್ಯವಸ್ತುವಾಯಿತು. :ಬಾಲ್ಯದಲ್ಲೇ ತಾಯಿಯನ್ನು ಕಳೆದುಕೊಂಡು ಮಲತಾಯಿಯ ದಬ್ಬಾಳಿಕೆಗೆ ತುತ್ತಾಗಿ, ಮನೋದೌರ್ಬಲ್ಯಕ್ಕೆ ಗುರಿಯಾಗುವ ಕಿಶೋರಿಯೊಬ್ಬಳ ಕತೆ ಇದು. ಮನೋರೋಗದ ಬೆಳವಣಿಗೆಯನ್ನು ಹಂತ-ಹಂತವಾಗಿ ನಿರೂಪಿಸಲಾಗಿದೆ. ಪರಿಸರದ ಪ್ರಭಾವ ವ್ಯಕ್ತಿಯ ಮೇಲೆ ಎಷ್ಟುಮಟ್ಟಿಗೆ ಆಗುತ್ತದೆನ್ನುವುದರ ಚಿತ್ರಣ ಇಲ್ಲಿದೆ. ಸನ್ನಿವೇಶ ಆಸ್ಪತ್ರೆಯೇ ಆಗಲೀ ಮನೆಯೇ ಆಗಲೀ ಅಸಹಜತೆ ಎಲ್ಲಿಯೂ ತಲೆಹಾಕಿ ಕಾದಂಬರಿಯ ಕಟ್ಟಡಕ್ಕೆ ಧಕ್ಕೆಯುಂಟುಮಾಡುವುದಿಲ್ಲ. ಪಾತ್ರಗಳು ಸಹಜವಾಗಿ ಬೆಳೆಯುತ್ತವೆ. ತ್ರಿವೇಣಿ ತಂತ್ರಕ್ಕೆ ಎಂದೂ ಪ್ರಧಾನ ಸ್ಥಾನ ಕೊಟ್ಟವರಲ್ಲ. 'ಕಥೆಯೇ ಮುಖ್ಯ' ಎಂಬ ನಂಬಿಕೆಯುಳ್ಳವರು ಅವರು.

"ಅವಳ ಭಾಗ್ಯ," ಶ್ರೀಮತಿ ವಾಣಿಯವರ ಒಂದು ಒಳ್ಳೆಯ ಕಾದಂಬರಿ ಸಾಂಸಾರಿಕ ಜೀವನದ ಕಹಿ-ಸಿಹಿಗಳನ್ನು ರಸವತ್ತಾಗಿ ನಿರೂಪಿಸುವ ಸಾಮರ್ಥ್ಯ ಪಡೆದ ಶ್ರೀಮತಿ ವಾಣಿಯವರ ಬರವಣಿಗೆ ನೇರ, ಸರಳ. ಈ ಕಾದಂಬರಿಯಲ್ಲಿ ಮಧ್ಯಮವರ್ಗದ ಕುಟುಂಬವೊಂದರಲ್ಲಿ ಓದಿಗಾಗಿ ನಿಂತ ಬಡಹುಡುಗನನ್ನು ಮನೆಯವರು ನಿಕೃಷ್ಟರಾಗಿ ಕಂಡರೂ ಕಡೆಗೆ ಅವನೇ ಅಳಿಯನಾಗುವ ಸಂದರ್ಭ ರೋಮಾಂಚಕವಾದುದು. ಬಡ ಹುಡುಗ ಚಂದ್ರಮೌಳಿಯೇ ಆಗಲೀ, ರಾಯರೇ ಆಗಲೀ, ರಾಯರ ಕುಟುಂಬ ಪಾರ್ವತಮ್ಮನವರೇ ಆಗಲಿ; ಅವರ ಪಾತ್ರಗಳು ಜೀವಂತವೋ ಎನ್ನುವಷ್ಟರಮಟ್ಟಿಗೆ ರಚಿತವಾಗಿವೆ

ಶ್ರೀಮತಿ ಎಂ. ಕೆ. ಇಂದಿರಾ ಅವರ "ತಂದೆ," ಹೃದಯಸ್ಪರ್ಶಿಯಾದ ಕತೆ. ಬೇರೆ ಜಾತಿಯವಳನ್ನು ಮಗ ಮದುವೆಯಾದ ಎಂಬ ಕಾರಣದಿಂದ ತಂದೆ ಅವನನ್ನು ದೂರವಿರಿಸಿದರೂ ಮೊಮ್ಮಗನ ಮೋಹ ಅಜ್ಜನನ್ನು ಕಾಡಿಸುತ್ತದೆ. ಮೊಮ್ಮಗ ನಾಲ್ಕು ದಿವಸ ಉದ್ಯಾನಕ್ಕೆ ಆಟಕ್ಕೆ ಬರದಿದ್ದಾಗ ಮನಸ್ಸು ತಡೆಯದೆ ಅಂದಿನವರೆಗೆ ಹೋಗದಿದ್ದ ಮಗನ ಮನೆಗೆ ಹೋಗುತ್ತಾರೆ. 'ತಾತ,' ಮೊಮ್ಮಗ ಸತ್ತ ವಾರ್ತೆ ಕೇಳಿ ದಿಗ್ಮೂಢರಾಗುತ್ತಾರೆ ಅದೇ ಸ್ಥಿತಿಯಲ್ಲಿ ಅವರು ತಮ್ಮ ಮಗನನ್ನು ಸಂಧಿಸುತ್ತಾರೆ. ಈ ಸನ್ನಿವೇಶದ ಚಿತ್ರಣ ಅತ್ಯಂತ ಮಾರ್ಮಿಕವಾಗಿದೆ. ಇದು ಕತೆಗೆ ಒಂದು ನಿರ್ದೇಶವನ್ನೂ ಸಫಲತೆಯನ್ನೂ ನೀಡಿದೆ. ಕತೆಯಲ್ಲಿ ತಂತ್ರಕ್ಕಿಂತ ವಸ್ತು ಪ್ರಮುಖಸ್ಥಾನ ಪಡೆದಾಗ ಹೃದಯಸ್ಪರ್ಶಿಯಾಗುವ ಸಂಭವ ಹೆಚ್ಚು ಎಂಬುದನ್ನು ಈ ಕತೆ ಮನಗಾಣಿಸುತ್ತದೆ.

ಶ್ರೀಮತಿ ವೀಣಾ ಎಲಬುರ್ಗಿ ಅವರ ಕತೆ "ಅತಿಥಿ" ಹಲವಾರು ದೃಷ್ಟಿಗಳಿಂದ ಗಮನಾರ್ಹವಾಗಿದೆ. ಇಲ್ಲಿ ಘಟನೆ ಮುಖ್ಯವಲ್ಲ. ಕೇಂದ್ರ ಪ್ರತಿಮೆಯೊಂದನ್ನಿರಿಸಿಕೊಂಡು ಅದರ ಸುತ್ತ

ಕತೆ ಹೆಣೆಯುವುದು ಇಲ್ಲಿ ಅನುಸರಿಸಲಾದ ನೂತನ ತಂತ್ರ. ಎಳೆತನದಲ್ಲಿ ಪ್ರೇಮವನ್ನು ತುಚ್ಛೀಕರಿಸಿ ಯಶಸ್ಸಿನ ಹಂತಗಳನ್ನು ಏರಿ ವೈಸ್‌ಪ್ರಿನ್ಸಿಪಾಲ್ ಆದರೂ ತನ್ನ ಜೀವನ ನಿರಾಶೆಯ ಪ್ರಪಾತಕ್ಕೆ ಬಂದು ನಿಂತು, ತಾನು ಎಲ್ಲರಿಗೂ ಕಡೆಗೆ ಬದುಕಿಗೂ 'ಅತಿಥಿ'ಯಾಗಿಯೇ ಉಳಿದೆ ಎಂಬ ನಿತ್ಯಸತ್ಯವನ್ನರಿತ ಮಧ್ಯವಯಸ್ಕ ಮಹಿಳೆಯೊಬ್ಬಳ ಚಿತ್ರಣ ಇಲ್ಲಿದೆ

ಮೇಲಿನವನ್ನು ಅವಲೋಕಿಸಿದಾಗ ಲೇಖಕಿಯರು ಆರಿಸಿಕೊಂಡಿರುವ ವಿಷಯಗಳಲ್ಲಿ ಸ್ತ್ರೀಜಾತಿಯ ವಿಶಿಷ್ಟತೆಯೇನೂ ಕಾಣುವುದಿಲ್ಲ. ಇದೇ ವಿಷಯವನ್ನು ಆರಿಸಿಕೊಂಡು ಲೇಖಕರೂ ಕೃತಿ ರಚಿಸಬಹುದು. ಶೈಲಿ, ತಂತ್ರ, ಭಾಷೆ, ಇವುಗಳಲ್ಲೂ ಇಬ್ಬರಲ್ಲೂ ಹೆಚ್ಚಿನ ವ್ಯತ್ಯಾಸ ಕಾಣಸಿಗುವದಿಲ್ಲ. ಆದರೆ ಮಹಿಳೆ ಶೃಂಗಾರ, ಲೈಂಗಿಕ ವಿಷಯಗಳನ್ನು ನಿರೂಪಿಸುವಾಗ ಸಂಯಮಿಯಾಗಿರುತ್ತಾಳೆ ಎನಿಸುತ್ತದೆ.

ಮಹಿಳೆ ಮುಕ್ತಮನಸ್ಸಿನಿಂದ ಬರೆಯಬಲ್ಲಳೇ ಎಂಬುದು ಇನ್ನೊಂದು ಪ್ರಶ್ನೆ. ಸೀಮಿತ ವಾತಾವರಣದಲ್ಲಿ ಬೆಳೆಯುವ ಮಹಿಳೆಗೆ ಆ ಕೆಚ್ಚು ಬರಲಾರದು. ಹೆಣ್ಣು-ಗಂಡುಗಳ ಮನೋವ್ಯಾಪಾರವನ್ನು ಮಹಿಳೆ ಯಶಸ್ವಿಯಾಗಿ ಚಿತ್ರಿಸಬಲ್ಲಳು. ಆದರೆ ಕೆಲವೊಂದು ಲೈಂಗಿಕ ವಿವರಗಳ ನಿರೂಪಣೆ ಅವಳಿಂದ ಸಾಧ್ಯವಾಗದೆ ಹೋಗಬಹುದು. ಅಂಥ ಅನುಭವಗಳನ್ನು ಪಡೆಯುವ ಅಗತ್ಯವೂ ಅವಳಿಗಿಲ್ಲ.

ಸ್ತ್ರೀಯರ ಬರೆವಣಿಗೆಗೆ ಪ್ರೋತ್ಸಾಹ ಎನ್ನುವುದು ಇತ್ತೀಚಿನ ನಾಲ್ಕೈದು ವರ್ಷಗಳಲ್ಲಿ ಬಂದ ಮಾತು. ಲೇಖಕಿಯರ ಸಂಖ್ಯೆ ಕಡಮೆ, ಅವರಿಗೆ ಉತ್ತೇಜನ ನೀಡುವುದು ಅಗತ್ಯ-ಎನ್ನುವುದು ಒಂದು ವಾದ. ಆದರೆ ಈಗ ಅಕ್ಷರ ಬರೆಯಲು ಬರುವವರೆಲ್ಲಾ ಸಾಹಿತಿಗಳಾಗ-ಹೊರಟಿರುವುದನ್ನು ನೋಡಿದರೆ, ಇಂಥ ವಾದ ಸರಿಯಲ್ಲ, ಇದು ಒಳ್ಳೆಯ ಸಾಹಿತ್ಯದ ಬೆಳವಣಿಗೆಗೆ ಮಾರಕವಾಗಬಹುದು, ಎನಿಸುತ್ತದೆ. ಉಚ್ಚಮಟ್ಟದ ಸಾಹಿತ್ಯ ನಿರ್ಮಿಸುವ ಶಕ್ತಿ ಮಹಿಳೆಯರಿಗಿದ್ದರೆ ಪ್ರಜ್ಞಾವಂತರಾದ ಓದುಗರು ಅವರ ಕೃತಿಗಳನ್ನು ಮೆಚ್ಚಿಯೇ ಮೆಚ್ಚುತ್ತಾರೆ. ಮಹಿಳೆ ಅಬಲೆ ಎಂಬ ಮಾತಿಗಾಗಿ, ಆಕೆಯ ಬರೆವಣಿಗೆಯ ಬಗೆಗೆ ಯಾರೂ ಅನುಕಂಪ ತೋರಿಸುವುದು ಅನಗತ್ಯ.

ಮಹಿಳೆಯರ ಬರೆವಣಿಗೆಗಳಲ್ಲಿ ಆಳ ವಿಸ್ತಾರಗಳಿಲ್ಲ ಎಂಬ ಮಾತು ಕೇಳಿಬರುತ್ತಿದೆ ಇದು ಹುರುಳಿರುವ ಟೀಕೆ. ಮಹಿಳೆಗೆ ಬರೆಯಬೇಕೆಂಬ ಹುಮ್ಮಸ್ಸಿದೆಯೇ ವಿನಹ, ಅದಕೆ ಸಾಕಷ್ಟು ಸಿದ್ಧತೆಯನ್ನೂ ಆಕೆ ಮಾಡಿಕೊಳುವುದಿಲ್ಲ ಅವಳ ಪಾಂಡಿತ್ಯ ಕಡಿಮೆ. ವಿಚಾರಶಕ್ತಿ ಎಷ್ಟು ಕಾಲ ಕಳೆದರೂ ಬೆಳೆಯುವುದಿಲ್ಲ. ಲೇಖಕಿಯರ ಕೃತಿಗಳಲ್ಲಿ ವೈವಿಧ್ಯವಿರುವುದಿಲ್ಲ. ಸಂಸಾರ ಚಿತ್ರಣಗಳೇ ಹೆಚ್ಚು. ಪ್ರಯೋಗ-ಶೀಲತೆ ಕಡಮೆ. ಪುರುಷರ ಮೇಲಂಕ್ತಿಯನ್ನನುಸರಿಸಿ ಅಗ್ಗದ ಜನಪ್ರಿಯ ಸಾಹಿತ್ಯ ರಚಿಸುವ ಮನೋವೃತ್ತಿಯೂ ಲೇಖಕಿಯರಲ್ಲಿ ಕಂಡು ಬರುತ್ತದೆ ಈ ರೀತಿಯ ತಮ್ಮ ಕುಂದುಕೊರತೆಗಳನ್ನು ಗಮನದಲ್ಲಿಟ್ಟುಕೊಂಡು, ಅವುಗಳ ನಿವಾರಣೆಯತ್ತ ಲೇಖಕಿಯರು ಗಮನಹರಿಸಬೇಕು.

ಇಂಥ ಒಂದು ಪರಿಸ್ಥಿತಿಯಲ್ಲಿ ಸಹಜವಾಗಿ ಏಳುವ ಪ್ರಶ್ನೆಯೆಂದರೆ, ಬಹುಕಾಲ ಬಾಳುವ ಸಾಹಿತ್ಯ ನಿರ್ಮಿತಿ ಮಹಿಳೆಯಿಂದ ಸಾಧ್ಯವಾಗಬಹುದೆ ಎಂದು. ಆಗಲಾರದು-ಎಂದು ಹೇಳುವಂತಿಲ್ಲ. ಅಂಥ ಸಾಹಿತ್ಯದ ನಿರ್ಮಾಣ ಲೇಖಕಿಯರ ಗುರಿಯಾಗಬೇಕು. *



# ರೇಖಾ ಹೆಬ್ಬಾರ

ಕುಲಮರ್ವ ಬಾಲಕೃಷ್ಣ

"ನಾಲ್ಕು ವರ್ಷದೆಳವೆಯಲ್ಲಿ ಬರೆಯುತೊಡಗಿದ್ದೆಯಾ ನೀನು ?"

ಒಂದು ಅರ್ಧ ನಿಮಿಷ ಏನು ಉತ್ತರ ಕೊಡಬೇಕೆಂದು ಹೊಳೆಯಲಿಲ್ಲ. ಮತ್ತೆ ಸ್ವಲ್ಪ ನಾಚುತ್ತ ಉಗುಳು ನುಂಗಿ ಹೇಳಿದೆ "ನಾಲ್ಕು ವರ್ಷವಲ್ಲ, ಹದಿನಾಲ್ಕು ವರ್ಷದಲ್ಲಿ ನಾನು ಬರೆಯುತ್ತಿದ್ದೆ. [ಬಹುಶಃ ನಾಲ್ಕು ವರ್ಷದಷ್ಟು ಹೊತ್ತಿಗೇ ನಾನು ಅದ್ಭುತ ಬರೆಹಗಾರನಾಗಿದ್ದಿರಬಹುದು. ಇಷ್ಟೇ. ಹೊಯಿಗೆಯಲ್ಲಿ ಆಗ ಬರೆದುದನ್ನು ವಿವರಿಸಿ ಹೇಳುವಷ್ಟು ಶಕ್ತಿ ಇರಲಿಲ್ಲ. ಬರೆದ ಸಾಹಿತ್ಯವು ಕೂಡ ಇಂದಿಗೆ ಮಾಸಿ ಹೋಗಿದೆ!]

"ನೀವೇನು ಪ್ರಶ್ನೆ ಕೇಳುತ್ತೀರೋ ಕೇಳಿ. ಅವಳನ್ನು ನಾನು ಅಡ್ಡ ಬರುವುದಿಲ್ಲ" ಎಂದು ಹೇಳಿ ರೇಖಾ ತಂಗಿ ರಜನಿ ಹೆಬ್ಬಾರ್ ನನ್ನನ್ನೂ ತನ್ನಕ್ಕನನ್ನೂ ಅಲ್ಲಿಯೇ ಬಿಟ್ಟು ಮಾಯವಾದಳು. ಆದರೆ ಒಂದು ಪ್ರಶ್ನೆಯೂ ನನ್ನ ಗಂಟಲ ಮೇಲೆ ಬರಲಿಲ್ಲ. ರೇಖಾಗೆ ಅಂಜಬಿಟ್ಟೆಯೆಂದಲ್ಲ. ಜಹಾಂಗಿರ್ ಆರ್ಟ್ ಗ್ಯಾಲರಿ ಚಿತ್ರಕಲಾವಿದನ ಸಂದರ್ಶನ ತೆಗೆದುಕೊಳ್ಳಲು ಯೋಗ್ಯ ಸ್ಥಳವಲ್ಲ. ಅದರ ಮೇಲೆ ರೇಖಾ ಬರೆದ ಚಿತ್ರಗಳು ತೂಗುತ್ತಿವೆ. ಜನರು ಬರುತ್ತಿದ್ದಾರೆ-ಹೋಗುತ್ತಿದ್ದಾರೆ ಚಿತ್ರಗಳನ್ನು ನೋಡಿ ಮೆಚ್ಚಿದವರು ಚಿತ್ರಕಾರರನ್ನು ಅಭಿನಂದಿಸಲು ಬಯಸುತ್ತಾರೆ. ಚಿತ್ರಕಾರರು ಚಿತ್ರಗಳಿಗಿಂತಲೂ ಚಂದವಾಗಿದ್ದರೆ ಮತ್ತೂ ಹೆಚ್ಚಿನ ಆಕರ್ಷಣೆ. ರೇಖಾ ನಾಲ್ಕು ವರ್ಷದಿಂದ ಇಪ್ಪತ್ತೊಂದರ ವರೆಗೆ ಬರೆದ ಚಿತ್ರಗಳಿಂದ ಒಟ್ಟು ಐವತ್ತೆಂಟನ್ನು ಆಯ್ದು ಪ್ರದರ್ಶನಕ್ಕೆ ಕೊಟ್ಟಿದ್ದರು. ಅದು ಪ್ರದರ್ಶನದ



ರೇಖಾ ಹೆಬ್ಬಾರ

ಕೊನೆಯ ದಿನ. ಅಲ್ಲಿ ಸಂದರ್ಶನ ತೆಗೆದುಕೊಳ್ಳುವ ಔಚಿತ್ಯವೂ ಅಷ್ಟರಲ್ಲಿ ಇತ್ತು.

ಆಗ ರೇಖಾ ಚಿಕ್ಕಮ್ಮ ಬಗಲಿನಲ್ಲಿ ಪತ್ರೊಡೆ ಕಟ್ಟಿಕೊಂಡು ಬಂದರು, ಗ್ಯಾಲರಿಯಲ್ಲಿ 'ಠಾಳ' ಬಿದ್ದುಕೊಂಡಿರುವ ಮಕ್ಕಳಿಗೆ ತಿನಿಸಲು ವಾತ್ಸಲ್ಯದಿಂದ. ನನ್ನ ಸಂಕೋಚ ಮಾಯವಾಯಿತು ಪತ್ರೊಡೆ ಸವಿಯುತ್ತ ಸಂಪ್ರದಾಯಕವಾದ ಸಂದರ್ಶನ ವಿಚಾರವನ್ನು ಬಿಟ್ಟುಕೊಟ್ಟೆ.

ರೇಖಾ ಹೆಬ್ಬಾರ್ ಕಟ್ಟಂಗೇರಿ ಕೃಷ್ಣ ಹೆಬ್ಬಾರರ ಮಗಳು. ಹೆಬ್ಬಾರರು ಪದ್ಮಶ್ರೀ, ಭಾರತದ ಆರು ಸರ್ವ ಶ್ರೇಷ್ಠ ಕಲಾವಿದರಲ್ಲಿ ಒಬ್ಬರು. ಜಗದ್ವಿಖ್ಯಾತ ಎಂದರೂ ಸರಿಯೆ. [ಜಂಬ ಕೊಚ್ಚಬೇಕಾದರೆ ಉಡುಪಿಯ ಕನ್ನಡಿಗರು]. ರೇಖಾ ತಂದೆಯ ಸ್ಟುಡಿಯೋದಲ್ಲಿ ಬಣ್ಣದಲ್ಲಿ ಆಡುತ್ತ ಆಡುತ್ತ ಚಿತ್ರ ಕಲಾವಿದೆಯಾಗಿ ಬೆಳೆದುದಳು. ಹೆಬ್ಬಾರ ಕುಟುಂಬದ ಹತ್ತರದ ಕೆಲವರನ್ನು ಬಿಟ್ಟರೆ ಮೊನ್ನೆ ಮೊನ್ನೆಯ ವರೆಗೆ ಸುಮಾರು ಗುಟ್ಟಾಗಿಯೇ ಇತ್ತು, ಅಷ್ಟೊಂದು ಗೌಪ್ಯವಲ್ಲ. ಶಂಕರ್ಸ ವೀಕ್ಲಿ ಅಂತಾರಾಷ್ಟ್ರೀಯ ಮಕ್ಕಳ ಚಿತ್ರಕಲಾ ಸ್ಪರ್ಧೆಯಲ್ಲಿ ರೇಖಾ ಭಾಗವಹಿಸಿ ಪ್ರತಿ ವರ್ಷ ಬಹುಮಾನ ಗಳಿಸುತ್ತಿದ್ದರು [ಶಂಕರ್ಸ್ ವೀಕ್ಲಿ ಮಕ್ಕಳ ವಾರ್ಷಿಕ ಕೊಳ್ಳುವವರೂ ಅದರಲ್ಲಿ ಮುದ್ರಿಸಿದ ರೇಖಾ ಹೆಬ್ಬಾರ ಬರೆದ ಚಿತ್ರಗಳನ್ನು ಕಂಡು ಹಿಡಿದು ಕಟ್ಟಂಗೇರಿ ಹೆಬ್ಬಾರರ ಮಗಳೂ ಚಿತ್ರಗಾರ್ತಿಯಂತೆ ಎಂದು ಆಡಿಕೊಳ್ಳುವಷ್ಟು ಜನ ಮುಂದುವರಿದಿಲ್ಲವಲ್ಲ].



← ಸ್ಟಿಲ್ ಲೈಫ್

೧೯೬೯ ಜನವರಿ ಒಂದನೆಯ ತಾರೀಖಿನಂದು ಉದ್ಘಾಟಿಸಿದ ಪ್ರದರ್ಶನವಾದರೂ ಏಶಿಯನ್ ಆರ್ಟ್ಸ್ ಎಂಡ್ ಕಲ್ಚರ್ ಸೆಂಟರ್ ಮೂಲಕ ಏರ್ಪಡಿಸಲಾಗಿತ್ತು. ಪ್ರದರ್ಶನದ ವಾಸನೆ ನನಗೆ ಎರಡು ತಿಂಗಳು ಮೊದಲೇ ಸಿಕ್ಕಿತ್ತು. ಕೊಟ್ಟವರು ಶ್ರೀ ಹೆಬ್ಬಾರರೇ. ಕಳೆದ ಗಣಪತಿ ಉತ್ಸವ ಕಾಲದಲ್ಲಿ ನಾನು ಕಲಾವಿದ ಬೇಂದ್ರೆಯವರ ಮನೆಗೆ ಶ್ರೀಮತಿ ಮೋನಾ ಬೇಂದ್ರೆಯವರ ಸಂಗೀತ ಕೇಳಲು ಹೋಗಿದ್ದೆ. ಕಲಾನಗರವೆಲ್ಲ ಅಲ್ಲಿ ನೆರೆದಿತ್ತು. ಶ್ರೀ ಹೆಬ್ಬಾರರೂ ಇದ್ದರು. ಬಹಳ ಸ್ನೇಹದಿಂದ ಹೆಗಲ ಮೇಲೆ ಕೈ ಹಾಕಿ "ನೀವು ನಮ್ಮಲ್ಲಿಗೂ ಬರಬೇಕು. ಎಂದು ಬರುತ್ತೀರಿ? ಇವರನ್ನು ಎಂದು ಕರೆದು ತರುತ್ತೀರಿ ಆರಾ?" ಎಂದು ಆರಾರ

ಹತ್ತಿರಕೇಳಿದರು.

ಹೆಬ್ಬಾರರ ಮಾತಿನ ಸಹಜ ರಭಸವನ್ನು ಕೇಳಿ ಅವರಿಗೆ ನನ್ನ ಮೇಲಿರುವ ಮುನಿಸು ಮಾಯವಾಗಿರಬೇಕೆಂದುಕೊಂಡೆ. ಸುಮಾರು ಹತ್ತು ವರ್ಷದ ಹಿಂದೆ ನಾನು ಮಾಡಿದ ಯಾವುದೋ ನೋವನ್ನು ಮಾಸಿಕೊಂಡಿದ್ದಾರೆ. "ಮುಂದಿನ ವಾರ" ಎಂದು ನಾನು ಹೇಳಿದಾಗ ಅವರು ತಮ್ಮ ಸಂಚಾರದ ದಿನಗಳನ್ನು ಎಣಿಕೆ ಹಾಕಿ, 'ನಾನು ಮತ್ತು ಆರಾ ಊಟಕ್ಕೆ ಬರುವ' ದಿನವನ್ನು ಗೊತ್ತುಪಡಿಸಿಯೇ ಬಿಟ್ಟರು.

ಶ್ರೀ ಹೆಬ್ಬಾರರು ಮೊದಲು ಮಾಹಿಮ್‌ನಲ್ಲಿ ಕಡೆಲ್ ರೋಡಿನಲ್ಲಿ ವಾಸಿಸುತ್ತಿದ್ದರು. ಅಲ್ಲಿಗೆ ನಾನು ಹೋಗಿದ್ದೆ. [ಅದಕ್ಕೂ ಮೊದಲೆ ಇರಲು ಸ್ಥಳ ದೊರೆಯುವುದು ತುಂಬ ಕಷ್ಟವಾಗಿದ್ದಾಗ ಮಹಾಬಲೇಶ್ವರದಲ್ಲಿ ಮನೆ ಮಾಡಿದ್ದರಂತೆ.] ಕಸ್ತೂರಿಗಾಗಿ ನಾನು ಅವರ ಬಗೆಗೆ ಬರೆಯಬೇಕೆಂದು ಶ್ರೀ ಆಚಾರ್ಯರು ತಾಕೀತು ಮಾಡಿದ್ದರು ಕೂಡ. ಇಷ್ಟರಲ್ಲಿ ಹೆಬ್ಬಾರರ ಮತ್ತು ನನ್ನ ಅಪ್ರತ್ಯಕ್ಷ ಸಂಪರ್ಕಕ್ಕೆ ಕಾರಣರಾದ ಶಿವರಾಮ ಕಾರಂತರ ಮತ್ತು ನನ್ನ ಇಬ್ಬರ ನಡುವೆ ಬಿರುಗಾಳಿಯೆದ್ದಿತ್ತು. ನಮ್ಮ ಪತ್ರಗಳು ಸ್ನೇಹವನ್ನು ಸೂಸುತ್ತಿರಲಿಲ್ಲ. ಒಂದು ಪತ್ರದಲ್ಲಿ ಶ್ರೀ ಕಾರಂತರು ಹೀಗೆ ಬರೆದರು: "...ಹೆಬ್ಬಾರರ ಸಂದರ್ಶನ— ತಮಗೆ ಚಿತ್ರ ಕಲೆಯ ಅನುಭವ ಸಾಕಷ್ಟು ಆದ ಮೇಲೆ ಅವರ ಬಳಿಗೆ ಹೋದರಾಗದೆ? ನೀವು ಬರೆದ ಗೀತ ಗೋವಿಂದದ ಅನುವಾದ ಅವರು ಓದಿ ನೋಡಿದ್ದಾರೆ. ಅದರ ಬರವಣಿಗೆ ಕಂಡು ಬೇಸರಿಸಿ 'ಇದಕ್ಕಾಗಿ ನನ್ನಿಂದ ಚಿತ್ರ ಬರೆಯಿಸಿದರೆ?' ಎಂದು ಕೇಳಿದ್ದಾರೆ. ದಯವಿಟ್ಟು ಇನ್ನೊಮ್ಮೆ ಅವರನ್ನು ನೋಯಿಸಬೇಡಿ."

ನನ್ನ ಕೈ ಕಟ್ಟಿತು. ತಪ್ಪು ತಾಳ್ಮೆಗೆಟ್ಟನನ್ನದೇ. ಒಂದು ಕೆಲಸವನ್ನು ಒದೆದು ಬಿಟ್ಟು ಮುಂಬಯಿಗೆ ಬಂದಿದ್ದೆ. ಹೊಸ ಕೆಲಸ ಸಿಗುವುದು ಸುಲಭವಲ್ಲವೆಂದು ಮನವರಿಕೆಯಾಗುತ್ತಲಿತ್ತು. ಶಿವಾಜಿ ಪಾರ್ಕಿನ ಫುಟ್‌ಪಾಥ್, ಅಂಬರನಾಥ ಲೋಕಲ್ ಮತ್ತು ಇಡೀ ಜಗತ್ತು ನನ್ನನ್ನು ಒಂದು ಮೂಲೆಗೆ ಒತ್ತಿ ಕೆಣಕುತ್ತಿದ್ದವು. 'ನಾನು' ಎಂಬ ಗರ್ವ ಇತ್ತು. 'ಆತ್ಮರಕ್ಷಣೆ'ಯ ಗೊಂದಲದಲ್ಲಿ ಯಾರನ್ನು ಎಷ್ಟು ನೋಯಿಸಿದೆ ಎಂದು ಅಳೆದು ಹೇಳುವಂತಿಲ್ಲ. ಅನೇಕರು ನೋವನ್ನು ಮರೆತಿದ್ದಾರೆ ತಮಗರಿಯದೆಯೇ. ಶ್ರೀ ಹೆಬ್ಬಾರರು ಅವರಲ್ಲಿ ಒಬ್ಬರಾಗಿರಬೇಕು.

ಈ ಕಥೆಯನ್ನು ಕೇಳಿ ಆರಾ ನಕ್ಕರು. ರಾತ್ರಿ ಎಂಟು ಗಂಟೆಗೆ ನಾವು ಹೆಬ್ಬಾರರ ಬಂಗಲೆ ತಲ

ಚಿಕ್ಕು



ಓದೆವು. ಅವರು ನಮಗಾಗಿ ಕಾಯುತ್ತಿದ್ದರಂತೆ. ತುಂಬಿದೆಯ ಸ್ವಾಗತ, ರೇಖಾ ಪರಿಚಯ ಮಾಡಿಸಿದ ನಂತರ ಸ್ಟುಡಿಯೋಕ್ಕೆ ಕರೆದುಕೊಂಡು ಹೋಗಿ ಮಗಳು ಬರೆದ ಚಿತ್ರಗಳನ್ನು ಒಂದೊಂದನ್ನಾಗಿ ತೋರಿಸಿದರು. ಹದಿನೇಳು ವರ್ಷದ ಕಲಾ ಕೃತಿಗಳು ಏಶಿಯನ್ ಆರ್ಟ್ಸ್ ಎಂಡ ಕಲ್ಚರ್ ಸೆಂಟರ್‌ದವರು ಪ್ರದರ್ಶನವೇರ್ಪಡಿಸಲು ಮುಂದಾದುದನ್ನು ತಿಳಿಸಿದರು.

ಆ ರಾತ್ರಿಯೂಟ ನನಗೆ ಮನೆಯೂಟವನ್ನು ನೆನಪು ಮಾಡಲು ಅನೇಕ ಕಾರಣ ಇದ್ದವು. ಮಾವಿನ ಮಿಡಿ ಉಪ್ಪಿನಕಾಯಿ ಇತ್ತು. ಹಿತ್ತಿಲಲ್ಲಿ ಬೆಳೆದ ಬೆಂಡಕಾಯಿ. ಎಲ್ಲದಕ್ಕಿಂತ ಹೆಚ್ಚು ಸ್ನೇಹ ಸಾಮೀಪ್ಯ. ಮನೆಯ ಸುತ್ತಲಿನ ಹೂದೋಟವನ್ನು ನೋಡಿ ಅಲ್ಲಿರುವ ಗಿಡಗಳನ್ನು ಗುರುತುಮಾಡುತ ಹೋದಂತೆ ನಾನು ಮಂಗಳೂರಲ್ಲಿದ್ದೇನೆಂದುಕೊಂಡೆ. ಸೇವಂತಿಗಳು ಅರಳಿದ್ದವು, ಎಲ್ಲದಕ್ಕಿಂತಲೂ ಹೆಚ್ಚಾಗಿ

ಕೆ.ಕೆ. ಹೆಬ್ಬಾರ



ಅಬ್ದುಲ್ ಹಲೀಮರಲ್ಲಿ ಸಿತಾರ ಕಲಿಯುತ್ತಿರುವ ರಜನಿ ಸಂಕೋಚವಿಲ್ಲದೆ ನುಡಿಸಿ ತೋರಿಸಿದಳು.

ರೇಖಾ ಚಿತ್ರಗಳ ಕುರಿತು ನಾನು ಅಭಿಪ್ರಾಯ ಕೊಡುವಂತಿಲ್ಲ. ಕಾರಂತರ ಉಪದೇಶವನ್ನು ಅನುಸರಿಸಿ ಚಿತ್ರಕಲೆಯ ಅನುಭವ ಮಾಡಿಕೊಳ್ಳಲು ಹೋಗಲಿಲ್ಲ. ಅಲೆಯಾನ್ಸ್ ಫ್ರಾಂಕೋಸ್‌ನವರು ಅಂಥ ಸವಲತ್ತು ಕೊಡುತ್ತಿದ್ದರೂ ನಾನು ಫ್ರೆಂಚ್ ಕ್ಲಾಸಿಗೆ ಹೋಗುತ್ತಿದರೂ ಕೂಡ ಸಂದೇಹವಿಲ್ಲದೆ ರೇಖಾ ಬರೆದ ಕಲಾ ಕೃತಿಗಳನ್ನು ಮೆಚ್ಚುವೆ ಎಂದು ಹೇಳಬಲ್ಲೆ. ಹದಿನೇಳರಲ್ಲಿ ಬರೆದ ಬೆಕ್ಕಿನ ಚಿತ್ರ ನನ್ನ ಮನಸ್ಸನ್ನು ವಿಶೇಷವಾಗಿ ಸೆಳೆಯಿತು. ಅಷ್ಟರಲ್ಲಿ ಆರಾ ಅದನ್ನೇ ಕೆಟಲಾಗಿನಲ್ಲಿ ವರ್ಣಚಿತ್ರವಾಗಿ ಮುದ್ರಿಸಲು ಸೂಚಿಸಿದರು. ರೇಖಾ ಬೇರೆ ಬೆಕ್ಕುಗಳನ್ನು ಬರೆದಿದ್ದಾರೆ. ಹದಿನಾಲ್ಕರಲ್ಲಿ, ಹತ್ತರಲ್ಲಿ ಎಂದು. ಏನೂ ಅವರ ಮನ ಸೆಳೆದಿವೆ. ಮಹಾಬಲೇಶ್ವರದ-ರೇಖಾ ಹಳ್ಳಿಯೆಂದು ಕರೆಯಬಯಸುತ್ತಾರೆ — ಕಾಡು ಗುಡ್ಡಗಳು ಅವರಿಗೆ ಸ್ಫೂರ್ತಿಯನ್ನು ಕೊಟ್ಟಿವೆ.

ರೇಖಾ ತನ್ನ ಚಿತ್ರಕಲೆಯ ಬಗೆಗೆ ಬರೆಯಲು ನನಗೆ ಹೇಳಿದ್ದಾರೆ. ಬರೆಯದಿದ್ದರೆ 'ಬುರುಡೆ-ಯೊಡೆ'ಯುವುದಾಗಿ ಹೆದರಿಸಿದ್ದಾರೆ. ಅಭಿಪ್ರಾಯ ಕೊಡಲು ನಾನು ತಕ್ಕವನಲ್ಲವೆಂದು ಶ್ರೀ ಕಾರ್ಲ್ ಜೆ. ಖಂಡಾಲಾವಾಲಾ ಬರೆದ ಎರಡು ಮಾತುಗಳನ್ನು 'ಕದ್ದು' ಇಲ್ಲಿ ಹೇಳುತ್ತೇನೆ. [ಕಾರ್ಲ್ ಅವರು ನಮ್ಮ ದೇಶದ ಹೆಸರಾಂತ ಚಿತ್ರಕಲಾ ವಿಮರ್ಶಕರು, ಹೆಬ್ಬಾರರ ಸ್ನೇಹಿತರು. ಬಹುಶಃ ಸೌಜನ್ಯದಿಂದ ರೇಖಾ ಚಿತ್ರ ಪ್ರದರ್ಶಕ್ಕೆ ಮುನ್ನುಡಿ ಬರೆದಿರಬಹುದು. ಈ ಮಾತು ಮೆಚ್ಚುನವರೆಲ್ಲರಿಗೂ ಸಲ್ಲುವುದು. ಮೆಚ್ಚಲಾರದವರು ವಿಮರ್ಶೆಯ ಕಾರ್ಯ ಕೈಕೊಳ್ಳುವುದು ತರವಲ್ಲ.]

"ಅನೇಕ ವರ್ಷಗಳ ಹಿಂದೆ ಗೆಳೆಯ ಹೆಬ್ಬಾರರನ್ನು ನಾನು ಕೇಳಿದೆ. ಅವರ ಮಕ್ಕಳಾರ

ದರೂ ಚಿತ್ರಕಲೆಯಲ್ಲಿ ಆಸಕ್ತಿ ತೋರಿರುವರೇ ಎಂದು. ಆಗಿನ್ನೂ ಸಣ್ಣ ಕೂಸಾಗಿದ್ದ ರೇಖಾ ಚಿತ್ರ ಬರೆಯುವ ಹುಚ್ಚು ತೋರಿಸುತ್ತಿರುವುದಾಗಿ ಅವರು ಹೇಳಿದರು. ಕೆಲವು ವರ್ಷಗಳಾದ ಮೇಲೆ ರೇಖಾ ನನಗೆ ಒಂದು ಹೊಸ ವರ್ಷದ ಗ್ರೀಟಿಂಗ್ ಕಾರ್ಡು ಕಳಿಸಿದಳು. ಈ ಕಾರ್ಡು ಈಗಲೂ ನನ್ನ ಗೋಡೆಯ ಅಲಂಕಾರವಾಗಿದೆ. ರೇಖಾಳ ಚಿತ್ರ ಶಕ್ತಿ ನನ್ನನ್ನು ಬೆರಗುಗೊಳಿಸಿತು. ಹೆಬ್ಬಾರರು ಅವರ ಕೆಲವು ಕೃತಿಗಳನ್ನು ತೋರಿಸುವಂತೆ ಒಡಂಬಡಿಸಿದೆ... ತಂದೆಯ ಪ್ರಭಾವವೇನೂ ಇಲ್ಲದೆ ರೇಖಾ ಬರೆದ ಚಿತ್ರಗಳು ಅವಳು ಸೃಷ್ಟಿಸಿದ ಹೊಸತೊಂದು ಜಗತ್ತು—ಇಲ್ಲಿ ತಾನಾಗಿ ಬೆಳೆದ ಬಣ್ಣ ಬಣ್ಣದ [ಜಣ್ಣ ಬಣ್ಣದ] ಮೆಚ್ಚುಗೆ ವಿಶೇಷವಾಗಿತ್ತು...ರೇಖಾಳ ಕೃತಿಗಳನ್ನು ಕೆಲ ಸಮಯದ ಮೇಲೆ ಮತ್ತೊಮ್ಮೆ ನೋಡಿದೆ. ಹೆಬ್ಬಾರರು ಅವಳ ಚಿತ್ರಕಲಾ ಪ್ರದರ್ಶನವನ್ನು ಏರ್ಪಡಿಸಬೇಕೆಂದು ಸೂಚಿಸಿದೆ. ಅವರು ಸಮಯವಿನ್ನೂ ಬಂದಿಲ್ಲವೆಂದರು...

"ಈ ಪ್ರದರ್ಶನದಲ್ಲಿರುವ ಎಲ್ಲ ಕಲಾಕೃತಿಗಳನ್ನು ನಾನು ನೋಡಿದ್ದೇನೆ, ಅವಳು ನಾಲ್ಕು ವರ್ಷದವಳಾಗಿದ್ದಾಗ ಬರೆದವನ್ನೂ ಕೂಡ. ರೇಖಾ ಆಹ್ಲಾದಕ ವರ್ಣದೃಷ್ಟಿ— ಎಳವೆಯಲ್ಲಿ ತೋರಿದ್ದು-ಯನ್ನು ಕಳೆದುಕೊಂಡಿಲ್ಲ. ಅಲ್ಲದೆ ತನ್ನ ಚಿತ್ರ ಶಕ್ತಿಯನ್ನು ಇತರ ದಿಕ್ಕುಗಳಲ್ಲಿ- ಪ್ರಬಂಧ ಸಮಸ್ಯೆ. ಆಕಾರ, ಇತ್ಯಾದಿ- ಬೆಳೆಸಿಕೊಂಡಿದ್ದಾಳೆ. ಅವಳ ಬಣ್ಣಗಾರಿಕೆ, ನಾವೀನ್ಯ, ಒಂದು ಬಗೆಯ ಸಹಜ ಮತ್ತು ಮುಚ್ಚಿರಲಾರದ ಲಾವಣ್ಯ ಇವು ನನ್ನ ಮನಸ್ಸನ್ನು ಹೊಕ್ಕಿವೆ...ಎಳೆಯ ಕೂಸಾಗಿ ಅವಳು ತುಂಬಿದೆದೆಯಿಂದ ಚಿತ್ರಗಳನ್ನು ಬರೆಯುತ್ತಿದ್ದಳು. ಈಗ ಪ್ರಬುದ್ಧ ಚಿತ್ರಗಾರ್ತಿಯಾಗಿ ಮಿದುಳನ್ನು ಉಪಯೋಗಿಸಿ ಹೃದಯಸ್ಪರ್ಶಿಯಾಗಿ ಬರೆಯುತ್ತಾಳೆ. ಚಿತ್ರಗಾರಿಕೆಯನ್ನು ಮಿದುಳಿನ ಕಸರತ್ತು ಎಂದು ತೋರಿಸುವ ಇಂದಿನ ಹವ್ಯಾಸದಿಂದ ಅವಳು ದೂರ ಇದ್ದುದು ಸಂತೋಷ. ಹಾರ್ದಿಕತೆಯು ಅವಳ ಚಿತ್ರಗಳ ವಿಶೇಷ ಯೋಗ್ಯತೆಯಾಗಿ ಎದ್ದು ಕಾಣುತ್ತದೆ.

ರೇಖಾ ಬಗೆಗೆ ನಾನು ಬರೆಯುಬಹುದು. ಅವರು ಒಳೆ ಮಾತುಗಾರ್ತಿ. ಅಪ್ರಿಯ ಸತ್ಯವನ್ನು ಪ್ರಿಯವಾಗಿ ಹೇಳಬಲ್ಲರು ಜಾಣ್ಣುಡಿಗಳನ್ನು ಮೆಚ್ಚುವರು ಮತ್ತು ಆಡುವರು. ತುಂಬ ಆತ್ಮ

---



### ನುಣಿವೆಣ್ಣಿನ ಸಿಂಗಾರ

ನುಡಿವೆಣ್ಣಿಗೂ ಶೋಭಿಸುವುದು-
-ಫ್ಯಾಷನ್ನು.
ಬಾಬ್-ಕಟ್ಟು ಮಾಡಿ ಮಿಂಚಿದಳು-
-ಈ ಹೆಣ್ಣು.
ಎಲ್ಲರೂ ಹೇಳಿದರು: ಅಪ್ಟು-ಡೇಟ್ ಬಾಲೆ.
ನನ್ನ ಕವಿ ಕೊರಳಲ್ಲಿ ಹಾಕಿದನು ಮಾಲೆ.

— ದಿನಕರ ದೇಸಾಯಿ

ವಿಶಾಸವಿದೆ. ಕಾರಂತರ ಕಾದಂಬರಿಗಳನ್ನು ಮೆಲ್ಲಮೆಲ್ಲನೆ ಓದುತ್ತಿರುವ ಹಾಗಿದೆ. ಸದ್ಯ ಔದಾರ್ಯದ ಉರುಳಲ್ಲಿ, ಮೇಜಿನ ಮೇಲಿದೆ. [ಮಾತನಾಡುವ ಕನ್ನಡ ಅಪರಿಗೆ ಮೊದಲಿನಿಂದಲೂ ಬರುತ್ತದೆ]. ಮರಾಠಿಕವಿ ಪ್ರಿನ್ಸಿಪಾಲ ರೇಗೆಯವರ ಕವಿತೆಗಳನ್ನು ಮೆಚ್ಚುತ್ತಾರೆ.

ತಂದೆಯ ಬಗೆಗೆ ಅವರು ಸಂಜೆ ಸಮಯವಾದಾಗ 'ನಮ್ಮನ್ನೆಲ್ಲ,' ಸುತ್ತ ಕೂರಿಸಿ ಕಾರಂತರ ಹೊಸ ಕಾದಂಬರಿಯನ್ನು ಓದಿ ಹೇಳುತ್ತಾರೆ" ಎನ್ನುವರು. ಕಾರಂತರ ಮೇಲಿರುವ ಹೆಬ್ಬಾರರ ಅಭಿಮಾನದಲ್ಲಿ ರೇಖಾ ಪಾಲುಗೊಳ್ಳುತ್ತಾರೆ. "ಕಾರಂತರು ಮಾತ್ರ ನನ್ನ ಚಿತ್ರ ಕುರಿತು ಉತ್ಸಾಹ ತೋರಿಸುವುದಿಲ್ಲ. ಏನು ಬಣ್ಣದ ಸಾರಣೆ ಎಂದು ಬಿಡುತ್ತಾರೆ. ರಜನಿಯ ಸಿತಾರ ಕೂಡ ಕಾರಂತರಿಗೆ 'ಝುಂಯ್ ಝುಂಯ್' ಅಂತೆ." ಎಂದು ತುಂಟಾಡುವರು.

ಕೆಲವು ವಿಮರ್ಶಕರು ರೇಖಾ ನಾಲ್ಕರಲ್ಲಿ ಬರೆದ ಚಿತ್ರಗಳು ಮಿರೋನ್ರ ಪ್ರಭಾವದಿಂದ ಬರೆದುದೆನ್ನುತ್ತಾರಂತೆ! [ನಮ್ಮಪ್ಪನ ಮೇಲಿ ಅದ ಪ್ರಭಾವ ನನಗೆ ಬಂದಿರಬೇಕು ಎಂದು ರೇಖಾ ಹೇಳಲಿಲ್ಲ]. ಇನ್ನೊಂದು ಆಶ್ಚರ್ಯವೆಂದರೆ ಯಾರೂ ರೇಖಾ ಬರೆದ ಚಿತ್ರಗಳನ್ನು ಅಮೃತಾ ಶೇರ್‌ಗಿಲ್ ಕೃತಿಗಳಿಗೆ ಹೋಲಿಕೆ ಕೊಟ್ಟಿಲ್ಲ. ಈಗಿನ ವಿಮರ್ಶಕರು ಶೇರಗಿಲ್‌ಳನ್ನು ಮರೆತಿದ್ದಾರೆ. ಹಿಂದಿನ ತಲೆಮಾರಿನವರು ಅಮೃತಾ ಶೇರ್‌ಗಿಲ್‌ಳ ರೋಮಾಂಟಿಸಿಸ್ಟ ಕೃತಿಗಳು ಹೆಬ್ಬಾರರ ಕೃತಿಗಳ ಮೇಲೆ ಪ್ರಭಾವ ಬೀರಿದ್ದಾಗಿ ಡಂಗುರ ಸಾರಿದ್ದುಂಟು.

ಇತ್ತೀಚೆಗೆ, ಹೂವರಳಿದಂತೆ ತನ್ನಿಂದ ತಾನೇ ಚಿತ್ರ ಕಲಾವಿದೆಯಾದ ಮೇಲೆ, ರೇಖಾ ಜೆ. ಜೆ. ಸ್ಕೂಲಿಗೆ 'ಆಟಕೊರೊ ಪ್ರಣ್ಣಮೆಕೊರು ಹೋಗುತ್ತಾರೆ. ಸರ್ ಜೆ. ಜೆ. ಸ್ಕೂಲ್ ಅವರ ತಂದೆ ಕಲಿತ ಶಾಲೆ. ಮೊನ್ನೆವರೆಗೆ ರೇಖಾ ಎಲ್ಫಿನ ಸ್ಟನ್‌ದಲ್ಲಿ ಬಿ.ಎ. ಮಾಡುತ್ತಿದ್ದರು. ಒಂದ ಉಸರಿನಲ್ಲಿ ಕತೆ ಬರೆಯುವವರ ಹಾಗೆ ರೇಖ ಚಿತ್ರ ಬರೆಯುವುದಿಲ್ಲ. ಅವರ ತಂತ್ರ 'ಮಾಂಟ ತಂತ್ರ' ಒಂದು ಪದರು ಕಾನ್ವಾಸಿನಲ್ಲಿ ಒಣಗಿ ಮೇಲೆ ಇನ್ನೊಂದು ಬಣ್ಣದ ಪದರು ಹಾಕು ತ್ತಾರೆ. ಒಂದೇ ಸವನೆ ಬರೆಯುತ್ತ ಹೋಗ ವಷ್ಟು ವೇಗದಿಂದ ಕಣ್ಣಿನ ಮೂಲಕ ಆಲೋ ಚಿಸಲಾಗುವುದಿಲ್ಲ.

ರೇಖಾರ ಪ್ರಥಮ ಪ್ರದರ್ಶನ ಅತ್ಯಂ ಯಶಸ್ವಿಯೆನ್ನಬೇಕು. ಪತ್ರಿಕೋದ್ಯಮಿಯ ಸಂಪ್ರದಾಯದಂತೆ ಉದ್ಧರಿಸಿ ಹೇಳುತ್ತೇನ ಶ್ರೀಮತಿ ರೋಸನ್ನಾ ಕಾಮತ ಸೌಂದಯ ದೃಷ್ಟಿಯಿಂದ ಕಲಾ ಸಂಗ್ರಾಹಕರು. ರೇಖ ಬರೆದ ಚಿತ್ರಗಳನ್ನು ಪ್ರಥಮ ಪ್ರದರ್ಶನ ಮೊದಲನೆಯ ದಿನವೇ ಆಯ್ದುಕೊಳ್ಳಬೇಕೆ ದಿದ್ದರಂತೆ. ಆಗಲಿಲ್ಲ. "ನಮ್ಮ ಯಜಮಾನರ ಮೈ ಹುಶಾರಿರಲಿಲ್ಲ. ಇನಾಗ್ಯುರೇಶನ್ ದಿ ಇರಲಾಗಲಿಲ್ಲ. ನಾನು ಆಯ್ದುಕೊಳ್ಳಬಹುದ ಗಿದ್ದ ಎರಡು ಚಿತ್ರಗಳು ಆಗಲೇ ಮಾ ಹೋದವು. ಇನ್ನೆರಡು ಚಿತ್ರಗಳು ನನ ಮೆಚ್ಚಿಗೆಯಾದವು. ಆದರೆ ಅವು ದೊಡ್ಡವ ನನ್ನ ಕೈ ಹೆಚು ಉದ್ದವಲ್ಲ. ಹಾಗಾಗಿ ಈ ಸ ತುಂಡನ್ನು ಆರಿಸಿಕೊಂಡೆ" ಎಂದರು. ಸಂಗ್ರಾ ಹಕರಲ್ಲದೆ ಕ್ಯಾಲೆಂಡರ್ ಕಂಪನಿಗಳ ಗ್ರೀಟಿಂಗ್ ಕಾರ್ಡುಗಳ ವ್ಯಾಪಾರದವರ ಅವರ ಚಿತ್ರಗಳನ್ನು ಕೊಂಡುಕೊಂಡಿದ್ದಾ ಬರುವ ವರ್ಷದ 'ವಕೀಲ್ ರಿಪ್ರೊಡಕ್ಷನ್'ಗಳ ರೇಖಾ ಬರೆದ ಚಿತ್ರಗಳೂ ಇರುವವೆಂಬುದರ ಸಂಶಯವಿಲ್ಲ.



# ಕನ್ನಡಿಗರ ಅಡಿಗೆ, ಊಟ

ನಾನು ಹುಟ್ಟಿದುದು ಹಳ್ಳಿಯೂರಾದರೂ ಒಂದು ಬಗೆಯ ಸಂಸ್ಕೃತಿ-ಪರಂಪರೆಯನ್ನು ಕಾಯ್ದುಕೊಂಡು ಬಂದ ಮನೆತನಗಳಿಂದ ಕೂಡಿದ ಹಳ್ಳಿಯದು. ವರುಷ ವರುಷವೂ ಒಬ್ಬರಿಲ್ಲ ಒಬ್ಬರ ಮನೆಯಲ್ಲಿ, ಮದುವೆ-ಮುಂಜಿಗಳ ಸಮಾರಂಭಗಳು ನಡೆದೇ ನಡೆಯುತ್ತಿದ್ದವು. ಸಮಾರಂಭದ ಸವಿಯೂಟಗಳೆಂದರೆ, ಎಲ್ಲರ ಮನೆಗಳ ಒಲೆಗಳಿಗೂ ಔತಣ. ಅಂದಿನ ಸವಿಯೂಟದ ತಿಂಡಿ-ತಿನಿಸುಗಳು, ಅಲ್ಲಿಯ ಜನ ಜೀವನದಂತೆ, ಒಂದು ಸಂಪ್ರದಾಯಬದ್ಧವಾದುವುಗಳೇ ಇರುತ್ತಿದ್ದುವು. ಊಟಕ್ಕೆ ಕುಳಿತಾಗ ಶ್ಲೋಕ-ಪದ್ಯಗಳನ್ನು ಹೇಳುವ ಕಾರ್ಯಕ್ರಮ ನಡೆಯಲೇಬೇಕು. ನಾನು ಸಣ್ಣವನಿರುವಾಗ, ಎಂದರೆ, ಈ ಶತಮಾನದ ಪ್ರಾರಂಭ ದಶಕದಲ್ಲಿ, ಸಮಾರಂಭದ ಭೋಜನ ಸಮಯದಲ್ಲಿ ಪ್ರತಿಸಲವೂ ಈ ಪದ್ಯ ನನ್ನ ಕಿವಿಗೆ ಬೀಳುತ್ತಲಿದ್ದಿತು; ನಾನು ಕೂಡ ಈ ಪದ್ಯವನ್ನು ಆಗಾಗ ಹೇಳುತ್ತಲಿದ್ದೆ:





ಬುಂದೇ ಮಂಡಿಗೆ ಖೀರು ಕಾಗದೆ ಡಳೇ
ಮೇಲಾದ ಬೇಸನ್ನು ಬಾ-
ಸುಂದೀ ಸಾಖರ-ವಾಂಗಿಭಾತುಗಳು
ಮೋಣ್
ಶ್ರೀಖಂಡ-ಗುಳ್ಳೋರಿಗೆ ॥
ಅಂದಂಬೀರುವ ಚಕ್ಲಿ-ಕೋಡಬಳೆಗಳ್
ಪಾತ್ರಸ್ಥವಾಗಲ್ಕೆ ತಾಂ-
ಬಂದೊಂದೇ ಬಹುರಮ್ಯವಾಗಿ ಮೆರೆಗುಂ
ಆಂಬೋಡೆ ಚಿತ್ರಾನ್ನಗಳ್ ॥

ಅಂದಿನ ಸವಿಯೂಟದ ಸಮಾರಂಭಗಳಲ್ಲಿ ಮಾಡುತ್ತಲಿದ್ದ ವಿಶಿಷ್ಟ ಪಕ್ವಾನ್ನಗಳ ನಾಮ ಮಾಲಿಕೆ ಈ ಶಾರ್ದೂಲ ವಿಕ್ರೀಡಿತ ವೃತ್ತದಲ್ಲಿ ಹೆಣೆದುಕೊಂಡಿದೆ. ಕರ್ನಾಟಕದ ಉತ್ತರದ ಗಡಿಪ್ರದೇಶದ, ನಾಗರಿಕ ಸಮಾಜದ ಬಿದ್ದಿನೂಟದಲ್ಲಿಯ ತಿಂಡಿ-ತಿನಸುಗಳ ನೈಜ ಚಿತ್ರಣ ಈ ಪದ್ಯದಲ್ಲಿದೆ; ಆದರೆ ಈ ಮಾಲಿಕೆಯಲ್ಲಿಯ ಮಂಡಿಗೆ, ಗುಳ್ಳೋರಿಗೆ, ಚಕ್ಕುಲಿ, ಕೋಡಬಳೆ, ಆಂಬೊಡೆ, ಚಿತ್ರಾನ್ನ ಇವಿಷ್ಟು ಮಾತ್ರ ಕನ್ನಡಿಗರ ಪರಂಪರೆಗೆ ಸೇರಿದುವಾಗಿವೆ; ಮಿಕ್ಕ ಬುಂದೇ, ಖೀರು, ಕಾಗದೇ, ದಳೇ, ಬೇಸನ್,

ಬಾಸುಂದೀ ಮೊದಲಾದುವುಗಳು, ಕನ್ನಡಿಗರ ಅಡಿಗೆ-ಊಟಗಳ ಸಂಸ್ಕೃತಿಯ ಇತಿಹಾಸದಲ್ಲಿ ಕಂಡುಬರುವುದಿಲ್ಲ. ಬಹುಶಃ ಪುಣೆಯ ಪೇಶವೆಯರ ರಾಜ್ಯಶಾಸನದೊಂದಿಗೆ ಈ ಪಕ್ವಾನ್ನಗಳು ಉತ್ತರ ಕರ್ನಾಟಕದ ಪ್ರದೇಶದಲ್ಲಿ ಪ್ರಚಾರಕ್ಕೆ ಬಂದಿರುವುವು.

ಕನ್ನಡ ನಾಡು ಅನೇಕ ರಾಜ್ಯ-ಸಾಮ್ರಾಜ್ಯಗಳನ್ನು ಕಟ್ಟಿ, ಹಲವಾರು ಧರ್ಮಪೀಠ-ದೇವಮಂದಿರಗಳನ್ನು ಪ್ರತಿಷ್ಠಾಪಿಸಿ, ಸಾವಿರಾರು ವರ್ಷಗಳಿಂದಲೂ ತನ್ನ ಸಾಮಾಜಿಕ ಸಂಸ್ಕೃತಿ-ಸಭ್ಯತೆಗಳನ್ನು ಬೆಳೆಯಿಸಿಕೊಂಡು ಬಂದ ಪುರಾತನ ಇತಿಹಾಸದಿಂದ ಕೂಡಿದುದಾಗಿದೆ. ಇಲ್ಲಿ ಅರಮನೆಯ ಪಾಕಶಾಲೆಗಳಲ್ಲಿಯ ಪಾಕ-ವೈವಿಧ್ಯ ಒಂದು ಶಾಸ್ತ್ರವೆನಿಸುವಂತೆ ಬೆಳೆದು ಬಂದಿದೆ; ಮಠ-ಮಂದಿರಗಳಲ್ಲಿಯ ಭೋಗಶಾಲೆಗಳಲ್ಲಿಯೂ ಪ್ರಸಾದವೈವಿಧ್ಯ ಅದನ್ನೊಂದು ಶಾಸ್ತ್ರವನ್ನಾಗಿ ರೂಪಿಸಿದೆ. ಎಂತಲೇ ಕನ್ನಡದ ಪ್ರಾಚೀನ ಸಾಹಿತ್ಯ ಪ್ರಪಂಚದಲ್ಲಿ 'ಸೂಪ ಶಾಸ್ತ್ರ' 'ಪಾಕಶಾಸ್ತ್ರ' ಎಂಬ ಹೆಸರಿನ ಗ್ರಂಥಗಳು ಹುಟ್ಟಿಕೊಂಡಿವೆ.

## ಜಯಬಂಧುನಂದನನ ಸೂಪಶಾಸ್ತ್ರ*

ಕ್ರಿ. ಶ. ೮ನೆಯ ಶತಮಾನದಲ್ಲಿಯೇ 'ಜಯಬಂಧುನಂದನ' ಎಂಬ ಕವಿಯು, ಚಂಪೂ ಶೈಲಿಯಲ್ಲಿ 'ಸೂಪಶಾಸ್ತ್ರ' ಎಂಬ ಗ್ರಂಥವನ್ನು ಬರೆದಿದ್ದಾನೆ. ಇದು ಅಚ್ಚಾಗಿ ಇನ್ನೂ ಬೆಳಕಿಗೆ ಬಂದಿಲ್ಲ. ಬಂದರೆ, ೮ನೆಯ ಶತಮಾನದ ಕನ್ನಡಿಗರ ಅಡಿಗೆಯ ವೈವಿಧ್ಯ, ಪಾಕಪದ್ಧತಿ ಎಲ್ಲರಿಗೂ ಗೊತ್ತಾಗಬಹುದು. ಕನ್ನಡಕವಿಚರಿತಕಾರರು ಮಾದರಿಗಾಗಿ ಕೊಟ್ಟ ಮೂರು ಪದ್ಯಗಳಲ್ಲಿ ಆ ಕಾಲದ 'ಲಡ್ಡುಗೆ' 'ಇಡ್ಡರಿಗೆ' 'ಪಾಲುಂಡೆ' ಎಂಬ ಸವಿತಿನಿಸುಗಳ ಕೃತಿಪದ್ಧತಿಯು ನಮ
ಗೊತ್ತಾಗುವುದು.

### ಲಡ್ಡುಗೆ

ಕಾಸಿದ ಪಾಲೊಳಿಕ್ಕಿ ಮೊಸರಂ ನೆ
ಪೊಳ್ತಿಸೆವಂತೆ ಮತ್ತೆಯುಂ
ಕಾಸಿ, ಘೃತಾನ್ವಿತಂ ಕಳಮಚೂರ್ಣವ
ನಿಕ್ಕಿ ಬಳಿದ್ದೆ ಸೀರೆಯೊಳ
ಮಾಸರಮಾಗೆ ಸೇವಗೆಯನೊಳತ್ತಿ
ಸಿತೋದಕದಿಂದೆ ಮತ್ತೆ ಸಂ
ವಾಸಿಸಿ ಮಾಳ್ಕೆ ಲಡ್ಡುಗೆಯನೀತೆರದಿ
ಜಯಬಂಧುನಂದನ

ಕನ್ನಡಿಗರ ಪದ್ಧತಿಯಲ್ಲಿ 'ಲಡ್ಡುಗೆ' ಎಂ
ಹೆಸರು, ಎಂದಿನಿಂದಲೂ ಪ್ರಚಾರದಲ್ಲಿದ್ದು ಇದು
ವರೆಗೂ ನಡೆದುಕೊಂಡು ಬಂದಿದೆ. ಉಪ
ಯನವಾದ ದಿನ, ಬ್ರಹ್ಮಚಾರಿಗೆ ಹಾಕು
ಮಾತೃಭಿಕ್ಷೆಯ ಭಕ್ಷ್ಯಗಳಲ್ಲಿ 'ಲಡ್ಡುಗೆ' ಇರಲ
ಬೇಕೆಂಬ ನಿಯಮವನ್ನು ಇದುವರೆಗೂ ನ
ಯಿಸಿಕೊಂಡು ಬಂದಿದ್ದಾರೆ; ಆದರೆ ಇಂದಿ
ಲಡ್ಡುಗೆಗೆ ಜಯಬಂಧುನಂದನನು ವಿಧಿಸಿದಂ
'ಕಳಮ ಚೂರ್ಣ'ವನ್ನು ಬಳಸುವುದಿಲ್ಲ; ಕಡ
ಬೇಳೆಯ ಹಿಟ್ಟನ್ನು ಬಳಸುತ್ತಾರೆ.

### ಇಡ್ಡರಿಗೆ

ಅರಿದುರ್ದಿನ ಬೇಳೆಯನೊಂ । ದಿ
ಮೊಸರಲಿ ನೀರುಳಿಂಗು ಜೀರಗ
ಕೊತ್ತುಂ
ಬರಿ ಮೆಣಸಲ್ಲಂ ಬೆರಸಿ । ಡ್ಡರಿಗೆಯ
ನಡೆ ಕಂಪನಿಂಪುಮಂ ತಳೆದಿರ್ಕುಂ ।



* ಇದು ೧೨ನೆಯ ಶತಮಾನದ ಚಾವುಂಡರಾಯನೆಂಬವನ ಕೃತಿಭಾಗವೆಂದೂ ಕೆಲವರು ಹೇಳುತ್ತಾರೆ. —ಶೇ.

ಇಂದಿನ ಇಡ್ಲಿ(ಗೆ) ಯಂತೆ ಈ ಕವಿಯು ಹೇಳಿದ 'ಇಡ್ಡರಿಗೆ'ಯಲ್ಲಿ ಅಕ್ಕಿಯ ರವೆಯು ಕೂಡಿರುವುದಿಲ್ಲ. ಮೆಣಸಿನ ಬದಲು ಇಂದಿನವರು ಹಸಿಯ ಮೆಣಸಿನಕಾಯನ್ನು ಬೆರಸುತ್ತಾರೆ. ಕನ್ನಡಿಗರ ಹಳೆಯ ಕಾಲದ ಪಾಕ ಪದ್ಧತಿಯಲ್ಲಿ ಮೆಣಸಿನಕಾಯಿಗೆ ಸ್ಥಾನವೇ ಇಲ್ಲ. ಜಯಬಂಧುನಂದನನ ಇಡ್ಡರಿಗೆಗಳ ವಿಧಾನವನ್ನು ನೋಡಿದರೆ ಅವು 'ಮಸಾಲೆ ಇಡಲಿಗೆ'ಗಳಾಗಿದ್ದಂತೆ ತೋರುವುದು.

## ಹಾಲುಂಡೆ

ಇದನ್ನು ಮಾಡುವ ರೀತಿಯನ್ನು ಹೇಳುವ ಪದ್ಯ, ಅಕ್ಷರಸ್ಖಾಲಿತ್ಯದ ಮೂಲಕ ಸ್ಪಷ್ಟಾರ್ಥ ಬೋಧಕವಾಗಿಲ್ಲ. ತುರು ಅಥವಾ ಎಮ್ಮೆಯ ಹಾಲಿನಲ್ಲಿ ತುರುವೆಯ ಬೇರನ್ನು ಹಾಕಿ ಅರ್ಧ ಅಟ್ಟಿಸುವಂತೆ ಚೆನ್ನಾಗಿ ಮರಳಿಸಬೇಕಂತೆ. ಆ ಮೇಲೆ ಅಳತೆಯರಿತು ತುಪ್ಪವನ್ನು ಅದರಲ್ಲಿ ಬೆರಸಬೇಕಂತೆ. (ಸಕ್ಕರೆಯಂತೂ ಬೇಕೇ ಬೇಕು.) ಬಳಿಕ ಏಲಕ್ಕಿ, ಜಾಜಿಕಾಯಿ, ಜಾಜಿಪತ್ರೆಗಳ ಚೂರ್ಣವನ್ನು ಬೆರಸಬೇಕಂತೆ. ಬಳಿಕ ಹದದ ಕಂಪನ್ನು ಅರಿತುಕೊಂಡು ಉಂಡೆಗಳನ್ನು ಮಾಡಬೇಕಂತೆ. ಇದರ ರುಚಿ ಅಮೃತಕ್ಕೆ ಸಮಾನವಾದುದು— ಎಂದು ಕವಿಯು ಬಣ್ಣಿಸುತ್ತಾನೆ. ಇಂದಿನ ಪೇಢೆಯು ಈ ಹಾಲುಂಡೆಯ ಆಧುನಿಕ ರೂಪವಾಗಿರಬಹುದು.

## ಮಾನಸೋಲ್ಲಾಸ

ಕಲ್ಯಾಣ ರಾಜ್ಯ ಸಿಂಹಾಸನದ ಮೇಲೆ ಕುಳಿತು ರಾಜ್ಯವಾಳಿದ ಉತ್ತರ ಚಾಲುಕ್ಯ ವಂಶದ ದೊರೆ ಇಮ್ಮಡಿ ಸೋಮೇಶ್ವರನು (೧೨ನೆಯ ಶತಮಾನ) 'ಮಾನಸೋಲ್ಲಾಸ' ಎಂಬ ಹೆಸರಿನಿಂದ, ಸರ್ವಜ್ಞಾನ ಸಂಗ್ರಹದಂತಹ ಸಂಸ್ಕೃತ ಮಹಾಗ್ರಂಥವೊಂದನ್ನು ಬರೆದಿದ್ದಾನೆ. ಅದರಲ್ಲಿ ಪಾಕ ವಿಜ್ಞಾನಕ್ಕಾಗಿಯೇ ಒಂದು ವಿಭಾಗವಿದೆ. ಕನ್ನಡ



ರಾಜ ಸೋಮೇಶ್ವರನು ಕ್ಷತ್ರಿಯನಾದುದರಿಂದ, ತನ್ನ ಪಾಕಪದ್ಧತಿಯಲ್ಲಿ ಶಾಕಾಹಾರ, ಮಾಂಸಾಹಾರ ಎರಡರ ಬಗೆಗೂ ವಿವರ-ವಿವರವಾಗಿ ಹೇಳಿದ್ದಾನೆ. ಶಾಕಾಹಾರ ಪಾಕಪದ್ಧತಿಯಲ್ಲಿ ಅವನು ತನ್ನ ಕಾಲದ ಕನ್ನಡಿಗರ ಅಡಿಗೆಗಳೆಲ್ಲವನ್ನೂ ತೆಗೆದುಕೊಂಡಿದ್ದಾನೆ. ಇಷ್ಟೇ ಅಲ್ಲ, ಕೇವಲ ಕನ್ನಡ ನಾಡಿನ ವಿಶೇಷಡಿಗೆಗಳಾದ ಮಂಡಿಗೆ, ದೋಸೆ, ಇಡ್ಲಿಗೆ, ಮಜ್ಜಿಗೆ ಇವುಗಳನ್ನು 'ಮಂಡಕ' 'ದೋಸಕ' 'ಇಡ್ಡಲಕ' 'ಮಜ್ಜಿಕಾ' ಎಂಬ ಹೆಸರುಗಳಿಂದ ಸಂಸ್ಕೃತೀಕರಿಸಿದ್ದಾನೆ. ಈತನು ಹೇಳಿದ ರಾಜಾನ್ನ, ಶಾಲ್ಯನ್ನ, ಅಂಗಾರಪೋಲಿಕಾ, ಲಡ್ಡುಕ, ಪೂರಕ, ಮೊದಲಾದ ಭಕ್ಷ್ಯ-ಭೋಜ್ಯ ಪದಾರ್ಥಗಳು, ಕನ್ನಡ ಪರಂಪರೆಯವೇ ಆಗಿವೆ. ಹುಳಿಗಾಗಿ ಬಳಸುವ ಪದಾರ್ಥಗಳಲ್ಲಿ ಇವನು ಹುಣಿಸೆ, ಕವಳಿ, ಅಂಬಟೆಕಾಯಿ, ಲಿಂಬೆ, ಮಂಗರವಳ್ಳಿ, ಹುಣಿಚಿಕ್ಕು ಇವೆಲ್ಲವುಗಳನ್ನೂ ಹೇಳಿರುತ್ತಾನೆ. ಖಾರಕ್ಕಾಗಿ ಶುಂಠಿ, ಮೆಣಸು, ಕಾರಗೆಣಸು ಇವುಗಳನ್ನೇ ಬಳಸಲು ಹೇಳಿದ್ದಾನೆ.

## ಮಂಗರಸನ ಸೂಪಶಾಸ್ತ್ರ

ಕ್ರಿ. ಶ. ೧೬ನೆಯ ಶತಮಾನದಲ್ಲಿ ಬದುಕಿ ಬಾಳಿದ ಮೂರನೆಯ ಮಂಗರಸನು ವಿಜಯನಗರದ ಸಮ್ರಾಟರ ವೈಭವ ಜೀವನವನ್ನು ಕಣ್ಣಾರೆ ಕಂಡವನಲ್ಲದೆ, ತಾನೂ ಒಂದು ಅರಸುಮನೆತನದಲ್ಲಿ ಹುಟ್ಟಿ ಬೆಳೆದವನು. ಎಂತಲೇ ಈ ಕವಿಗೆ ಅನೇಕ ಬಗೆಯ ಸವಿಯಡಿಗೆಯ ಪ್ರತ್ಯಕ್ಷ ಪರಿಚಯವಿದೆ. ಜೈನತತ್ತ್ವ ಶಾಸ್ತ್ರದಲ್ಲಿ ಇವನ

ಪರಿಣತನಿದ್ದಂತೆ ಪಾಕಶಾಸ್ತ್ರದಲ್ಲಿಯೂ ಆಳವಾದ ಜ್ಞಾನವನ್ನು ಪಡೆದಿದ್ದಾನೆ. 'ಸೂಪಶಾಸ್ತ್ರ' ಎಂಬ ಹೆಸರಿನಿಂದ ಇವನೂ ಒಂದು ಪದ್ಯಮಯ ಗ್ರಂಥವನ್ನು ಬರೆದಿದ್ದಾನೆ. ಪಿಷ್ಟ ಪಾಕ, ಪಾನಕ, ಕಳಮಾನ್ನ ಪಾಕ, ಶಾಕ ಪಾಕ, ದಂಶಕ ಪಾಕ ಮೊದಲಾದ ಬೇರೆ ಬೇರೆ ಷಡ್ರಸವಿಪಾಕ ಭೇದಗಳನ್ನು ವಿವರ ವಿವರವಾಗಿ ಹೇಳಿದ್ದಾನೆ. ೩೫೬ ವಾರ್ಧಿಕಷಟ್ಪದಿಗಳನ್ನೊಳಗೊಂಡ ಇವನ ಸೂಪಶಾಸ್ತ್ರವು ಆರು ಅಧ್ಯಾಯಗಳಲ್ಲಿ ವಿಭಾಗಿತವಾಗಿದೆ.

"ರಸನೇಂದ್ರಿಯದ ತುಷ್ಟಿ" ಇಹ-ಪರ ಸೌಖ್ಯಗಳನ್ನೂ ಒದಗಿಸುವುದೆಂದು ಈ ಕವಿಯ ಅಭಿಪ್ರಾಯ. ಇದು ಸರಿಯಾದ ಮಾತು. ಒಳ್ಳೆಯ ಆಹಾರ, ಒಳ್ಳೆಯ ಮನಸ್ಸು-ಬುದ್ಧಿ-ಹೃದಯಗಳ ವಿಕಾಸಕ್ಕೆ ಕಾರಣವಾಗುವುದು. ಅಂತಹ ಮನಸ್ಸು, ಬುದ್ಧಿ, ಹೃದಯಗಳು ಮಾನವರ ಜೀವನ ಸಂಸ್ಕೃತಿಗೆ ಕಾರಣವಾಗುವುವು. ಯಜ್ಞಭಾವನೆಯಿಂದ ಸೇವಿಸುವ ನಿತ್ಯಾಹಾರವು ಮಾನವರ ಪರದ ಸಾಧನೆಗೆ ಅತಿ ಅವಶ್ಯಕವಾದುದು. ಈ ಕವಿಯು ತನ್ನ ಕೃತಿಯನ್ನು ಕುರಿತು :

"ಇದು ಪಾಕವಂ ಮಾಳ್ಪನೆಂದು
ಜಜ್ಜಗಂ ಮಾಳ್ಪ
ಚದುರೆಯರ ಕೈಗೆ ನವರತ್ನಮುದ್ರಿಕೆ
ಎನಿಸಿತು"

ಎಂದು ಹೊಗಳಿಕೊಂಡದು ವಾಸ್ತವ ವಿವರಣೆಯೇ ಹೊರತು, ಸ್ವಪ್ರಶಂಸೆಯ ಬಣ್ಣದ ಮಾತುಗಳೇನೂ ಅಲ್ಲ. ಇದುವರೆಗೆ ಕತ್ತಲೆಯ ಪ್ರಪಂಚದಲ್ಲಿಯೇ ಕೊಳೆಯುತ್ತಿದ್ದ ಇದನ್ನು



ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥ ಪ್ರಕಾಶನ ವಿಭಾಗದವರು ಬೇಗನೆ ಬೆಳಕಿಗೆ ತರಲಿರುವರೆಂಬುದು ಸಂತೋಷದ ಸಂಗತಿ.

ಉತ್ತರ ಕರ್ನಾಟಕದ ಇಂದಿನ ಭೋಜನ ರಸಿಕರ ಕಿವಿಗೆ ಅಪರಿಚಿತವೆನಿಸುವಂತಹ ಅನೇಕ ಪಾಕಪದಾರ್ಥಗಳ ಕೃತಿ ರೀತಿಯನ್ನು ಮಂಗರಸ ಸರಲವಾದ ಭಾಷೆಯಲ್ಲಿ ವಿವರಿಸಿದ್ದಾನೆ. ಮಾದರಿಗಾಗಿ ಕೆಲವು ಪಾಕಗಳ ರೀತಿ-ರುಚಿಗಳನ್ನು ಕುರಿತ ಮಾತುಗಳನ್ನು ಇಲ್ಲಿ ಹೇಳುತ್ತಲಿದ್ದೇನೆ.

## ಪುರಿವಿಳಂಗಾಯಿ

ನಮ್ಮ ನಾಡಿನ ರಾಮಾನುಜೀಯ ಸಂಪ್ರದಾಯದವರಲ್ಲಿ ಈ ಪಕ್ವಾನ್ನ ಪದಾರ್ಥವು ಈಗಲೂ ಪ್ರಚಾರದಲ್ಲಿದೆ. ಆದರೆ ಮಂಗರಸನು ಹೇಳುವ ಪುರಿವಿಳಂಗಾಯಿಯ ರಚನೆ-ರುಚಿ-ರೂಪಗಳು ಸ್ವಲ್ಪ ಭಿನ್ನ ಪ್ರಕಾರದುವುಗಳಾಗಿ ಕಾಣುತ್ತವೆ.

ಹುರಿದ ತೆಂಗಾಯಿ ನಸು ಬೆಂದ
ಬೇಳೆಯ ಹೆಸರು
ಹುರಿದು ಬೇಯಿಸಿದ ಸೊಜ್ಜಿಗೆಯಿವನು
ಕೂಡಿ ಸ-
ಕ್ಕರೆಯಿಕ್ಕಿ ಕರ್ಪೂರವನು ತಳೆದು
ಪಿಂಡವಂ
ಮಾಡಿಯೇ ಸಣ್ಣನಾಗಿ ॥
ಅರಿದಕ್ಕಿಯೊಳಗದ್ದಿ ಹೊಚ್ಚಹೊಸ
ತುಪ್ಪದೊಳು
ಹಿರಿದು ಹಸನಾಗಿ ಬೇಯಿಸಿ ತೆಗೆದು
ತುಪ್ಪವಿಡೆ-
ಪುರಿವಿಳಂಗಾಯೆಂದು ಪೆಸರ್ವಡೆದು
ನಾಲಗೆಯು
ಕೊನೆಗೆ ಪೀಯೂಷವಾಯ್ತು ॥

ಹಳೆಯ ಕಾಲದುದಾದರೂ ನಮಗಿಂದು ಹೊಸತರದ ಪಕ್ವಾನ್ನವಿದು. ಅನುಕೂಲತೆಯಿದ್ದ

ವರು ಇದನ್ನು ಮಾಡಿನೋಡಿ ತಿಂದು ತಣಿಯ ಬೇಕು.

## ಹಾಲಗಾರಿಗೆ

ಧಾರವಾಡ ಜಿಲ್ಲೆಗೆ ಸೇರಿದ ಮಲೆನಾಡಿನ ಪ್ರದೇಶದಲ್ಲಿ ಈಗಲೂ ಈ ಪಾಕವು, ನಾಗರಿಕ ಸಮಾಜದಲ್ಲಿ ಪ್ರಚಾರದಲ್ಲಿದೆ. ನಾನಿದನ್ನು ತಿಂದು ಸಂತೃಪ್ತಿಯನ್ನು ಪಟ್ಟಿದ್ದೇನೆ. ಈಗ ಬಹುಜನ ಪರಿಚಿತವಾದ 'ಗಾರಿಗೆ'ಗಿಂತ 'ಹಾಲ ಗಾರಿಗೆ' ರುಚಿ-ರೂಪಗಳಲ್ಲಿ ಭಿನ್ನರೀತಿಯ ದಾಗಿರುವುದು.

ಉತ್ತಮದ ಸೊಜ್ಜಿಗೆಯ ನೆನಸಿ ನೀರಂ
ಹಿಂಡಿ
ಮತ್ತದಕೆ ಬಟ್ಟವಾಲ್-ಶಿಳಿದುಪ್ಪವುಂ
ತಳಿದು
ಮೆತ್ತನಪ್ಪಂತು ಮಿದಿದಿರಿಸಿಯದರರ್ಧ
ಹಾ-
ಲೊಳಗುಕ್ಕರಿಸಿದಕ್ಕಿಯ ॥
ಒತ್ತಿ ಹಾಲಿಂದೆರೆದು ಸವೆದ ಕಣಿಕ
ದೊಳು ಬೆರ-
ಸುತ್ತ ಸಕ್ಕರೆಯ ಪಾಕದೊಳಿಕ್ಕಿ ಪರಿ
ಮಳದ
ನೊತ್ತರಿಸಿ ತುಪ್ಪದೊಳು ಬೇಯಿಸಿದ
ಹಾಲಗಾ-
ರಿಗೆ ಪಿರಿದು ಸವಿದೋರದೇ? ॥

ಇಷ್ಟೊಂದು ಒಳ್ಳೆಯ ಪದಾರ್ಥಗಳನ್ನು ಸೇರಿಸಿ, ತುಪ್ಪದಲ್ಲಿ ಕರಿದುಮಾಡಿದ ಹಾಲಗಾರಿಗೆಯು ಸವಿಯಾಗಿರದೇನು ಮಾಡುವುದು? ಆದರೆ ಇದನ್ನು ಹದವರಿತು ಮಾಡುವ ಚದುರೆಯರಿಗೇ ಅಭಾವವೀಗ. ಜೋಳ-ಸಜ್ಜೆ-ಗೋದಿಗಳ ರೊಟ್ಟಿಗಳನ್ನು ಸಾಮಾನ್ಯವಾಗಿ ಎಲ್ಲರೂ ಮಾಡುವರು. ಆದರೆ ಮಂಗರಸ ಕವಿಯು ಹೇಳಿದಂತೆ 'ಸವಡಿರೊಟ್ಟಿ'ಯನ್ನು ಮಾಡುವ ಗರತಿಯರು ಈಗ ಎಲ್ಲಿಯಾದರೂ ಇರುವರೇ?

## ಸವಡಿರೊಟ್ಟಿ

ಒಮ್ಮೆಲೇ ಜೋಡು ಜೋಡಾಗಿ ರೊಟ್ಟಿಗಳು ಸಿದ್ಧವಾಗುವುದರಿಂದ ಇದಕ್ಕೆ 'ಸವಡಿರೊಟ್ಟಿ' ಎಂಬ ಹೆಸರು ಬಂದಿರಬಹುದಾಗಿದೆ.

"ನವನೀತವುಂ ಕೆನೆಯುಮಂ ಬೆರಸಿ
ಕಣಿಕವುಂ
ಸವೆನಂತೆ ಕುಟ್ಟಿ ಬಟ್ಟಲವಾಡಿ
ಹಪ್ಪಳದ
ಸಮನಾಗಿಯೊತ್ತಿಯಿಂವ್ಮೈಗೆ ಬೆಣ್ಣೆಯ
ತೊಡೆದು ನಾಲ್ಕೈದು ಕಲ್ಲಡಕಿ ಕಲ್ಲ ॥
ಅವರೆರಡು ವ್ಮೈಗೆ ಪಿಟ್ಟಿಯ ಬಟ್ಟಲಂ
ಸವಿಸಿ
ಹವಣರಿದು ಹಂಚಿನೊಳು ಸುಟ್ಟು
ಪಿಟ್ಟಿಯನು ತೆಗೆ-
ದವಕೆ ತುಪ್ಪವನಿಕ್ಕಲವು ಸವಡಿರೊಟ್ಟಿ
ವೆಸರಂ ಪಡೆದು ರಂಜಿಸುವುವು!"

ಇಂದಿನ ನವನಾಗರಿಕರಿಗೆ ಕೆನೆಗಟ್ಟುವ ಬೆಣ್ಣೆ ಬರುವ ಹಾಲೇ ಸಿಕ್ಕದಿರುವಾಗ, ಕೆನೆ-ಬೆಣ್ಣೆ-ತುಪ್ಪಗಳನ್ನು ಸಮೃದ್ಧವಾಗಿ ಹಾಕಿ ಅಣಿಗೊಳಿಸಬೇಕಾದ ಈ 'ಸವಡಿರೊಟ್ಟಿ'ಯ ರುಚಿಯನ್ನು ಎಲ್ಲರ ನಾಲಿಗೆಯೂ ಹೇಗೆ ಕಾಣಬೇಕು? ಆದರೆ ಅನುಕೂಲತೆಯಿರುವವರಾದರೂ ಈ ರೊಟ್ಟಿಗಳನ್ನು ಮಾಡಿ, ನಮ್ಮ ಅಡಿಗೆಯ ಪರಂಪರೆಯನ್ನು ಕಾಯ್ದುಕೊಳ್ಳಬೇಕು. ಪೇಯವರ್ಗದಲ್ಲಿ ಬರುವ ಪಾನಕಗಳನ್ನು ಈಗ ನಮ್ಮ ಜನರು ಪೇಟೆಯಿಂದ ಕೊಂಡುತರುವುದೇ ಹೆಚ್ಚು. ಮಂಗರಸ ಕವಿಯು ಹೇಳಿರುವಂತೆ, 'ಹಿಮಾಂಬುಪಾನಕ'ವನ್ನು ಮನೆಯಲ್ಲಿಯೇ ನಮ್ಮ ಗರತಿಯರು



ಮಾಡಿ ಒದಗಿಸಿದರೆ, ಅದಕ್ಕೆ ಶುಚಿ-ರುಚಿಗಳೆಷ್ಟು ಹೆಚ್ಚಬಹುದು ?

## ಹಿಮಾಂಬುಪಾನಕ

ಈ ಪಾನಕದ ರಚನಾರೀತಿಯನ್ನು ಓದುತ್ತಿರುವಾಗಲೇ, ಸವಿಗಾರರ ನಾಲಗೆಗೆ ನೀರೂರಬಹುದು;

"ಉದಕದೊಳಗರ್ಧ ಸಕ್ಕರೆಯಿಕ್ಕಿ
ಕರಗಿಸುವ
ಹದನರಿದು ದಾಳಿಂಬ-ಮಾದಳದ
ಹುಳಿಯಿಕ್ಕಿ
ಸದರೆ-ದೇಲಕ್ಕಿ ಹಸಿಯುಲ್ಲಮುಂ
ಹಾಕಿ ಬೆಂ-
ಡೆಯು ಬೇರಿನಿಂದ ತಿರುಹಿ ॥
ಕದಡಿ ಪನಿನೀರ ಸೇವಂತಿಗೆಯ
ಹೂವಿಕ್ಕಿ-
ಯುದನು ಸೇವಂತಿಯುಂ ಪೊರೆದ
ಮಡಕೆಯೊಳಿರಿಸಿ
ಚದುರರಂತದಕೆ ಸತಿ ಸೊಗಯಿಪ
ಹಿಮಾಂಬು ಪಾ-
ನಕವೆಂದು ಹೆಸರಿಡುವದು ! ॥"

ಈ ಪಾನಕವನ್ನು ಮಾಡಿನೋಡಬೇಕೆಂದು ಅನೇಕ ಜನ ಗರತಿಯರ ಮನಸ್ಸು ಕುಣಿದಾಡಬಹುದು. ಆದರೆ 'ಉದಕದ ಅರ್ಧ'ದಷ್ಟು ಹಾಕಲು ಅವರೀಗ ಸಕ್ಕರೆಯನ್ನು ಎಲ್ಲಿಂದ ತರಬೇಕು ?

ಕನ್ನಡ ಕವಿಗಳು, ತಮ್ಮ ಕೃತಿಗಳಲ್ಲಿ ಸಂದರ್ಭವನ್ನು ಒದಗಿಸಿಕೊಂಡು, ಅಲ್ಲಲ್ಲಿ ಒಂದೊಂದು ಅಡಿಗೆಯ ರಚನಾರೀತಿಯನ್ನು ಹೇಳಿ, ಪಾಕಶಾಸ್ತ್ರ ವಿಷಯಕವಾದ ತಮ್ಮ ನೈಪುಣ್ಯವನ್ನು ತೋರಿಸದೆ ಬಿಟ್ಟಿಲ್ಲ. ಕ್ರಿ. ಶ. ೧೧೭೦ ರಲ್ಲಿ ಆಗಿಹೋದ ನೇಮಿಚಂದ್ರನೆಂಬ ಕವಿಯು, 'ಲೀಲಾವತೀ ಪ್ರಬಂಧ' ಎಂಬ ಕೃತಿಯಲ್ಲಿ, 'ಕಲಸುಗೂಳು' ಎಂದರೆ ಮೊಸರನ್ನವನ್ನು ಕುರಿತು ಹೇಗೆ ವಿವರಿಸಿರುವನು ನೋಡಿ-

## ಕಲಸುಗೂಳು

'ಕೂಳು' ಎಂಬುದು ಇಂದಿನ ನಮ್ಮ ಭಾಷೆಯಲ್ಲಿ ವಿಪರೀತಾರ್ಥವನ್ನು ಹೊಂದಿರುವುದಾದರೂ ಇದರ ಅಭಿಧಾನಾರ್ಥ ಮೂಲದಲ್ಲಿ 'ಅನ್ನ'ಎಂದು. 'ಕಲಸುಗೂಳು' ಎಂಬುದು, ಈ ನಮ್ಮ ಅಡಿಗೆಯ ಪದಾರ್ಥಗಳಲ್ಲಿ ರೂಢವಾಗಿರುವ' ಕಲಸನ್ನ (ಚಿತ್ರಾನ್ನ)' ಅಲ್ಲ.

"ಬಗಿದಗುಳೊಂದದಂತೆ ತೆಗೆದಾರಿಸಿ
ದೋಗರದೊಳ್ ಪೊದಳ್ದ ಕ-
ಮ್ಮಗೆ ಕೆನೆಗೊಂಡ ಗೆಡ್ಡೆಮೊಸರಂ
ಸರ್ಗೆ ದೇಲೆಯು ಚೂರ್ಣಮಿಕ್ಕಿ ಪೊ-
ಯ್ದೊಗುವಿಂಗೆ ಬೇಳೆಗೆಯ್ದು ಮೆಳಸಂ
ತಳಿದಲ್ಲದ ಚಿಲ್ಲಿಯುಂ ಪವಣ್
ಬುಗೆ ಕಲಸಿರ್ದ ತಣ್ಣಲಸುಗೂಳನಿಳಾ
ಪತಿಗಿತ್ತನಳ್ತಿಯುಂ ॥"

ಬಿಸಿಲಲ್ಲಿ ಅಲೆದು ಬಳಲಿ ಬಸವಳಿದ ಆ ಇಳಾಪತಿಗೆ, ಈ ತಣ್ಣಲಸುಗೂಳು ತುಂಬ ತಣಿಯನ್ನು ಉಂಟುಮಾಡಿದ್ದೀತು. ಇದು ಹಿಂದಿನ ಕಾಲದ ಮಾತು. ಈಗ ಕೆನೆಗೊಂಡ ಗಡ್ಡೆ ಮೊಸರನ್ನು ಕೊಡಬಹುದಾದ ಎಮ್ಮೆಗಳು ಇವೆಯೆಲ್ಲಿ ?

## ಬದನೆಯಕಾಯಿ ಬಜ್ಜಿ

ತೆರಕಣಾಂಬಿ ಬೊಮ್ಮರಸ (೧೫ ನೆಯ ಶತಮಾನ) ಎಂಬ ಕವಿಯು ತನ್ನ 'ಸನತ್‌ಕುಮಾರ ಚರಿತೆ' ಎಂಬ ಕಾವ್ಯದಲ್ಲಿ ನಿರ್ಮಿಸಿರುವ ಒಂದು ಭೋಜನ ಪ್ರಸಂಗದಲ್ಲಿ ಬದನೆಯಕಾಯಿ ಬಜ್ಜಿಯನ್ನು ಅಣಿಗೊಳಿಸಿದ ರೀತಿಯನ್ನು ಹೀಗೆ ಹೇಳಿದ್ದಾನೆ :

"ತಿಲದ ಮಾಷಾದ್ಯಖಿಲ ಚೂರ್ಣಂ
ಗಳನು ತೆಂಗಿನಕಾಯಿ ತುರಿಯನು

ಲಲನೆಯರು ಕರಿಬೇವಿನೆಲೆಯೆೞಲಕ್ಕಿ
ಗಳ ಬೆರಸಿ ॥
ಹಿಳಿದು ಜಂಬೀರೋದಕವ ಹದ-
ಗೊಳಿಸಿ ಲವಣದಿ ಕರ್ಪುರದಿ ಪರಿ-
ಮಳಿಪ ಬದನೆಯಕಾಯ ಬಜ್ಜಿಯ
ತಂದು ಬಡಿಸಿದರು ॥"

'ಜಂಬೀರೋದಕ' ಎಂದರೆ ಲಿಂಬೆಹಣ್ಣಿನ ರಸ, ಎಳ್ಳು-ಉದ್ದಿನಬೇಳೆಗಳ ಚೂರ್ಣವನ್ನೂ ತೆಂಗಿನಕಾಯ ಹೆರಕಲನ್ನೂ ಈ ಬಜ್ಜಿಗೆ ಹಾಕಬೇಕಂತೆ. ಈ ನಮ್ಮ ಪರಂಪರೆಯ ಬದನೆಯ ಕಾಯ ಬಜ್ಜಿಯನ್ನು ಮತ್ತೆ ಪ್ರಚಾರದಲ್ಲಿ ತರಬೇಕಲ್ಲವೆ ?

## ತಾಳಿದಗಳು

ಕಾಯಿ-ಪಲ್ಲೆಯಗಳನ್ನು ಕೇವಲ ಎಣ್ಣೆಯಲ್ಲಿಯೇ ಬೇಯಿಸಿಮಾಡುವುದಕ್ಕೆ 'ತಾಳಿದ' ಎಂದು ಹೆಸರು. ಏಳೆಂಟು ನೂರು ವರ್ಷಗಳ ಹಿಂದಣ ನಮ್ಮ ಜೀವನದಲ್ಲಿಯೂ 'ತಾಳಿದ' ಎಂಬ ಪದಾರ್ಥ ಪರಿಚಯದ್ದಾಗಿದ್ದಿತು. ಕ್ರಿ. ಶ. ೧೬ ನೆಯ ಶತಮಾನದ ಪಂಚಬಾಣನೆಂಬ ಕನ್ನಡ ಕವಿಯು ತನ್ನ 'ಭುಜಬಲಿ ಚರಿತೆ' ಎಂಬ ಕೃತಿಯಲ್ಲಿ ಈ 'ತಾಳಿದ'ಗಳ ವಿಧಾನವನ್ನು ತುಂಬ ಚೆನ್ನಾಗಿ ವಿವರಿಸಿದ್ದಾನೆ :

"ಜೀರಗೆಯುದ್ದಕ್ಕಿ ಮೆಂತೆಯಕರಿಬೇವು
ಕಾರೆಳ್ಳು ಮೆಣಸು ಸಾಸವೆಯು ॥
ಹಾರದಿ ಹುರಿನ ಸಂಬರವಿಟ್ಟು
ಕಾಯೊನ್ನಾಡಿ
ಭೋರನೆ ತಳಿದು ತುಪ್ಪದೊಳು ॥
ಒಗ್ಗರಿಸಿಯೆ ಅಟ್ಟಬಾಳೆ ಬದಣೆತೊಂಡೆ
ಹೆಗ್ಗುಂಬಳ ಹೀರೆ ಹಲಸು ॥
ನುಗ್ಗೆ ಮಗ್ಗೆಯ ಹಲವು ಬಗೆಯ
ತಾಳಿದಗಳ
ಹಿಗ್ಗಿನ ಬಡಿಸಿದರಂದು ॥

'ಸಂಬರವಿಟ್ಟು' ಎಂದರೆ ಮಸಾಲೆಯ ಪುಡಿ. ದಕ್ಷಿಣ ಕರ್ನಾಟಕ ಜನರಿಗೆ ಈ ತಾಳಿದದ ಪದ್ಧತಿ ಈಗಲೂ ಪರಿಚಯದ್ದಾಗಿದೆ. ಇವೇ ಕಾಯಿ-ಪಲ್ಲೆಯಗಳನ್ನು ಬೇರೆ ಬಗೆಯ ಮಸಾಲೆಯನ್ನು ಬೆರಸಿ ರಸಪಲ್ಲೆಯನ್ನು ಮಾಡುತ್ತಾರೆ. ಇಂತಹ ಪಲ್ಲೆಯಗಳನ್ನು 'ಮೇಲೋಗರ' ಎಂಬ ಹೆಸರಿನಿಂದ ನಮ್ಮ ಹಿರಿಯರು ಕರೆದಿದ್ದಾರೆ. 'ಓಗರ' ಎಂದರೆ ಅನ್ನ; ಅನ್ನದ ಮೇಲೆ ಹಾಕಿ ಕಲಸುವುದು ಮೇಲೋಗರ :

"ಹಾಗಲ ಹೀರೆಯು ಸವತಿ ಹಂದರದ
ವರೆ ಚ-
ವಳಿ ಬಾಳೆ ಬೆಂಡಿ ಕುಂಬಳವು ॥
ಮಾಗದ ಹಲಸಿನ ಕಲಸುಮೇಲೋಗರ
ಗೆಣಸು ಗುಳ್ಳಲ ಬಜ್ಜಿಗಳು

ಮಂಗರಸನ ಮತದಂತೆ 'ತಾಳಿದ' 'ಮೇಲೋಗರ' 'ಬಜಿ' ಇವೆಲ್ಲ ಶಾಕ ವಿಭಾಗದಲ್ಲಿ ಬರುತ್ತವೆ. ಸಾರು, ಸಂಬಾರ, ಹುಳಿ, ಪಳಿದ್ಯ— ಇವು ಕೂಡ ಮೇಲೋಗರಗಳೇ ಎನಿಸಿಕೊಳ್ಳುತ್ತವೆ.

## ವಿವಿಧ ಭಕ್ಷ್ಯ-ಭೋಜ್ಯಗಳು

ಕ್ರಿ. ಶ. ೧೬ ನೆಯ ಶತಮಾನದ ಕೊನೆಯ ಭಾಗದಲ್ಲಿ ಜೀವಿಸಿದ್ದ ಅಣ್ಣಾಜಿ ಎಂಬ ಕವಿಯು 'ಸೌಂದರ ವಿಳಾಸ' ಎಂಬ ಕೃತಿಯಲ್ಲಿ, ತಿಂಡಿ-ತಿನಿಸುಗಳ ಅಂಗಡಿಗಳನ್ನು ವರ್ಣಿಸುತ್ತಾನೆ. ಆ ಅಂಗಡಿಗಳಲ್ಲಿ ಎಷ್ಟೊಂದು ಬಗೆಯ ತಿಂಡಿಗಳು ?

" ಕರಜಿಗೆಯ ಕಾಯಿಂಯತಿರಸವುದ್ದಿ-
ನೊಡೆಯು ಹಿಮ
ಕರನಂತೆ ರಾಜಿಸುವ ಇಡ್ಡಲಿಗೆ
ಯೆಳ್ಳುಂಡೆ
ತರಣಿಮಂಡಲದಂತೆಯೆಸೆವ ಒಬ್ಬಟ್ಟು
ಗಾರಗೆಯು ಚಕ್ಕುಲಿ ಸೇವಗೆ—
ಹೊರಿಯು ಪೇಣೆಯು ಮನೋಹರ
ದುಂಡೆ ತರಗು ಸ

ಕ್ಕರೆ ಬುರುಡೆ ಹಾಲುಂಡಲಿಗೆಯು
ಸ್ವಾದಿಸಲಮೃತ
ಸರಳಿನಿಂ ನಿರ್ಮಿಸಿದ ಲತೆಯಂತೆ
ಜಿಲ್ಲಬಿಯು
ಅಂಗಡಿಗಳೆಸೆದಿರ್ದುವು !॥ ”

‘ಜಿಲ್ಲಬಿ’ ಹದಿನಾರನೆಯ ಶತಮಾನದಲ್ಲಿಯೇ ಕನ್ನಡಿಗರಿಗೆ ಪರಿಚಿತವಾಗಿದ್ದಿತೆಂಬುದು ಈ ಕವಿಯ ಮಾತಿನಿಂದ ಗೊತ್ತಾಗುವುದು. ‘ಅತಿ ರಸ’ ಎಂಬ ಖಾದ್ಯವು ಉತ್ತರ ಕರ್ನಾಟಕದಲ್ಲಿ ‘ಅನಾರಸ’ ಎಂಬ ಹೆಸರಿನಿಂದ ಪ್ರಚಾರದಲ್ಲಿವೆ.

## ಉದ್ದಿನ ಕಡುಬು–ಇಡ್ಡಲಿಗೆ

ಇಡ್ಡಲಿಗೆಯ ಹಿರಿಯಣ್ಣನಾದ ಉದ್ದಿನ ಕಡುಬನ್ನು ತೆರಕಣಾಂಬಿಯ ಬೊಮ್ಮರಸ ಕವಿಯು ಹಲವು ಉತ್ಪ್ರೇಕ್ಷೆಗಳೊಂದಿಗೆ ಹೊಗಳಿ ಹಾಡಿದ್ದಾನೆ; ಆದರೆ ಅಣ್ಣಾಜಿ ಹೇಳಿದ ಉದ್ದಿನೊಡೆ ಉದ್ದಿನ ಕಡುಬಿನಿಂದ ಭಿನ್ನವಾದುದು. ಇಡ್ಡಲಿಗೆಯನ್ನು ಮಾಡುವ ವಿಧಾನವನ್ನು ಜಯಬಂಧುನಂದನ, ಮಂಗರಸ ಕವಿಗಳು ಚೆನ್ನಾಗಿ ಹೇಳಿದ್ದಾರೆ. ಆದರೆ ಇಡ್ಡಲಿಗೆಯ ಸೌಂದರ್ಯವನ್ನೂ, ಸ್ವಾರಸ್ಯವನ್ನೂ ಕುರಿತು ಅನೇಕ ಕವಿಗಳು ಕೊನೆದು ಕೊಂಡಾಡಿದ್ದಾರೆ; ಮಾದರಿಗಾಗಿ ಕಮಲಭವ (೧೨೩೫) ಕವಿಯ ‘ಶಾಂತೀಶ್ವರ’ ಪುರಾಣದಲ್ಲಿಯ ಈ ಕಂದ ಪದ್ಯವನ್ನು ನೋಡಬಹುದು:

“ ಸುರಸಿಂಧು ಫೇನ ಪಿಂಡೋ
ತ್ಕರ ಮಿವೆನಲ್ ಕಾಂತಿವೆತ್ತು ನಗಣದ
ತೆರದಿಂ ॥
ಪಿರಿದುಂ ಲಘುತ್ವದಿಂ ಬಿ-
ತ್ತಂಪಿಡ್ಡಲಿಗೆಗಳನಂತವರ್
ಬಡ್ಡಿಸಿದರ್ ” ॥

ಹೆಣ್ಣುಮಕ್ಕಳ ಹಾಡುಗಳಲ್ಲಿ ಬರುವ ‘ಹೊಯ್‌ಗಡುಬು’ ಮಂಗರಸ ಹೇಳುವ ‘ಎರೆಯಪ್ಪ’ ಇವು ಕೂಡ ಇಡ್ಡಲಿಗೆಯ ವಂಶಕ್ಕೇ ಸೇರಿದುವು.

ಮಂಡಗೆಯು ಕನ್ನಡ ನಾಡಿನದೊ
ವೈಶಿಷ್ಟ್ಯಪೂರ್ಣವಾದ ಸವಿದಿನಿಸು. ಮಂಡಗೆ
ಅಂದ-ಚೆಂದಗಳನ್ನು ಬಣ್ಣಿಸಿ ಹೇಳಿದವ
ಅನೇಕ ಜನರು.

## ಮಂಡಗೆ

ಅಂಗರವೋಳಿಗೆಯನ್ನೂ ಹೂರಿಗೆಯನ
ಹೊಗಳಿದ ೧೨ ನೆಯ ಶತಮಾನದ ಪಾ
ಪಂಡಿತನು, ತನ್ನ ಕೃತಿಯೊಂದರಲ್ಲಿ ಮ
ಗೆಯ ಬಗೆಗೆ ಹೀಗೆ ಹೇಳಿದ್ದಾನೆ:

ನೀಳ್ಪು ಬೆಳ್ಪುಂ ತೆಳ್ಪುಂ ।
ತಳೆವೊಂದಿರ್ದರೆ ಸುಗ್ಗಿಯಚ್ಚ
ವೆಳ್ದಿಂಗಳ
ಗಳ್ವೊರೆಯೆತ್ತಿದರೆಂಬಂ-
ತೊಳ್ಪಂ ಗೆಡೆಗೊಂಡು ಸೊಗಯಿಸ
ಮಂಡಗೆಯ

ಶರತ್ಕಾಲದ ಹೊಸ ಬೆಳುದಿಂಗಳಿಂದ
ಯನ್ನಿತ್ತಿ ಮಾಡಿರುವರೇನೋ ಎಂಬಂತಿ
ಬೆಳುಪಾದ ತಿಳುವಾದ ಮಂಡಗೆಯು
ಕನ್ನಡಿಗರಿಗೆ ಪಾಕಪ್ರಪಂಚದ ಸಮ್ರಾಟನಿದ್ದ

## ಪಾಯಸಗಳು

ಸರ್ವಜ್ಞ ಕವಿಯು ‘ತುಯ್ಯಲಿಲ್ಲದ ಉ
ವನ್ನು ತೆಗಳಿ ನುಡಿದಿದ್ದಾನೆ. ತುಯ್ಯಲು ಎ
ಪಾಯಸ ಪಾಯಸದ ಪ್ರಶಸ್ತಿಯನ್ನು ಹಾ
ಕನ್ನಡ ಕವಿಗಳು ಅನೇಕ ಜನ. ಸೇ
ಗವಲಿ, ಪರಡಿಗಳ ಪಾಯಸಗಳನ್ನು ಹೆಸರಿ
ವರು ಬಹು ಜನರು; ಸಣ್ಣಕ್ಕಿಯ ಪ
ಸೊಜ್ಜಿಗೆಯ ಪಾಯಸದ ಹೆಸರನ್ನೂ ಹೇ
ವರುಂಟು; ಆದರೆ ಶಾಂತೀಶ್ವರ ಪುರಾ
ಕಮಲಭವ ಕವಿಯು ಹೇಳಿರುವ ಮಣಿ
ವಳಿಗೆಯ ಪಾಯಸವು, ಈ ಕಾಲದಲ್ಲಿ
ಬಹುಜನರಿಗೆ ಅಪರಿಚಿತವಾದುದು. ಕು

ವ್ಯಾಸನು 'ಪರಡಿಯ ಸೇವಗೆಯ ಪರಿಪರಿಯ ಪಾಯಸಗಳನ್ನು ಹೇಳಿರುವನಾದರೂ 'ಮಣಿ ಸರವಳಿಗೆಯ ಪಾಯಸವನ್ನು ಹೆಸರಿಸಿಲ್ಲ. ಕಮಲಭವನು ಇದನ್ನು ಎಂತಹ ಸರಸವಚನ ದಲ್ಲಿ ಹೇಳಿದ್ದಾನೆ ನೋಡಿ:

" ಪೊಳೆವ ಶರಚ್ಚಂದ್ರಿಕೆಯೊಳ್
ಮುಳುಂಕಿ ನಸುದೋರ್ವ ತಾರೆಗಳ
ತೆರದಿಂಕಂ ॥
ಗೊಳಿಸಿ ಮಗಮಗಿಪ ಮಣಿಸರ
ವಳಿಗೆಯ ಪಾಯಸಮುಸದಳಂ
ಬಡ್ಡಿಸಿದರ್ ॥ "

ಕೇಸರಿಯ ಬಣ್ಣದಿಂದ ಕೂಡಿದ ಚಿನಿವಾಲು ಶರಚ್ಚಂದ್ರಿಕೆಯ ಉಪಮೆಯನ್ನೂ ಅವುಗಳಲ್ಲಿ ಅರೆಮುಳುಗಿ ಮೇಲೆ ನಸುವೆ ಕಾಣುವ ಮಣಿ ಸರವಳಿಗೆಗಳು ತಾರಗೆಗಳ ಉಪಮೆಯನ್ನೂ ಪಡೆದಿವೆ.

ಪಾಯಸದೊಂದಿಗೆ 'ಪರಮಾನ್ನ'ವನ್ನು ಬಣ್ಣಿಸಿದ ಕವಿಗಳೂ ಇದ್ದಾರೆ. ಇದೂ ಒಂದು ಸಿಹಿ ತಿನಿಸು. ಪರಮಾನ್ನದಲ್ಲಿ ಪಾಯಸದಂತೆ ಹಾಲು ಬಲೂಯಿಷ್ಠವಾಗಿರುವುದಿಲ್ಲ.

## ಹೋಳಿಗೆ-ಹೂರಿಗೆ

ಗೋದಿಯ ಹಿಟ್ಟಿನಿಂದ ಮಾಡಿ ಹಂಚಿನ ಮೇಲೆ ಬೇಯಿಸಿ ತೆಗೆದುದು 'ಹೋಳಿಗ' ಎನಿಸುವುದು. 'ಅಂಗರವೋಳಿಗ' 'ಪೊಲ್ಲಿಗೆ' ಎಂಬ ಬೇರೆ ನಾಮವೂ ಇದಕ್ಕಿದೆ. ಗೋದಿಯ ಕಣಕದಲ್ಲಿ ಬೆಲ್ಲ-ಸಕ್ಕರೆಗಳ ಹುದುವನ್ನು ಸೇರಿಸಿ ಲಟ್ಟಿಸಿ ಬೇಯಿಸಿದುದು ಹೂರಿಗೆ ಎನಿಸಿಕೊಳ್ಳುವುದು. 'ತನಿಬೆಲ್ಲ ವಿಕ್ಕಿದ ಹೂರಿಗೆ' 'ಎಣ್ಣೂ-ರಿಗ'ಗಳನ್ನು ಕವಿ ಕುಮಾರವ್ಯಾಸ ಹೇಳಿರುವನು. ಕಡಲೆ ಬೇಳೆ ಹೂರಣ ಹೋಳಿಗೆಯು ಇಂದಿನವರಿಗೆಲ್ಲ ಪರಿಚಿತ ಪ್ರಿಯ ಭಕ್ಷ್ಯ. ಹೂರಿಗೆಗಳನ್ನು ಮಾಡಿ ಮಾರಿ ಜೀವಿಸುತ್ತಿದ್ದ 'ಕಲ್ಲುರಿಗ'ನ ಕಥೆಯು ಪಂಪ ಕವಿಯ ಆದಿ ಪುರಾಣದಲ್ಲಿಯೂ ಬಂದಿದೆ. ಕೈಯಿಂದ ತಟ್ಟಿ ಮಾಡುವ ಒಬ್ಬಟ್ಟು, ಹರಿದಾಸರು ಶ್ರೀಕೃಷ್ಣನ ಬಾಲ ಮೂರ್ತಿಗೆ ಗೋಪಿಯರಿಂದ ತಿನ್ನಿಸಿದ ಅಪ್ಪಾಲು, ಸಜ್ಜಿಗೆಯಪ್ಪಾಲು ಇವು ಕೂಡ ಹೂರಿಗೆಯ ಜಾತಿಗೇ ಸೇರಿದುವುಗಳು.

## ದಂಶಕಗಳು

ಊಟದ ಮುಖ್ಯ ಪದಾರ್ಥಗಳೊಂದಿಗೆ, ಬಾಯ ರುಚಿಯನ್ನು ಬದಲಿಸಿಕೊಳ್ಳುವುದೆಂದು ಇರುವ ನಂಜಿಕೊಳ್ಳುವ ಪದಾರ್ಥಗಳೇ ದಂಶಕಗಳೆನಿಸುವುವು. ಇವುಗಳಲ್ಲಿ ಚಟ್ಟಣಿ, ಕೋಸುಂಬರಿ, ಕಚ್ಚರಿ, ಪಚ್ಚಡಿ, ಉಪ್ಪುಗಾಯಿ, ಬಾಳಕ, ಹಪ್ಪಳ, ಸಂಡಿಗೆ- ಇವು ಪ್ರಮುಖವಾದವುಗಳು. ಕನ್ನಡಿಗರಿಗೆ ಇವು ಸಾವಿರಾರು ವರ್ಷಗಳಿಂದಲೂ ಗೊತ್ತು. ೧೧ ನೆಯ ಶತಮಾನದ ಶಾಂತಿನಾಥನು 'ಲಾವಣಕ' ಎಂದರೆ ಉಪ್ಪುಗಾಯಿಗಳಲ್ಲಿಯ ವೈವಿಧ್ಯವನ್ನು ಚೆನ್ನಾಗಿ ವಿವರಿಸಿರುವನು:

## ಲಾವಣಿಕ (ಉಪ್ಪಿನಕಾಯಿ)

ಎಳಮಾವಿನ ಮಿಡಿ, ಮಾಗುಳಿ,
ಮೆಣಸಿನ ಕರೆ, ಬೆತ್ತಲಟ್ಟೆ,
ಈಳೆಯ ಗೊಲೆಯಿಂ-॥
ದಳವಟ್ಟಿರೆ ಲಾವಣಕಂ-
ಗಳ ನಿಕ್ಕಿದ ರಾಗಳಳ್ತಿಯಿಂದಂ-
ಗನೆಯರ್ ॥

ತೆಂಕಣಾಂಬಿಯ ಬೊಮ್ಮರಸನು ನಂಜಿಕೊಳ್ಳುತ್ತ ಊಟ ಮಾಡುವ ರಸಪೂರ್ಣವಾದ ಶಬ್ದ ಚಿತ್ರವನ್ನೇ ಬರೆದಿದ್ದಾನೆ:

"ನುಡಿದು ಹುಳಿಮೋಲೋಗರ ಚ-
ಪ್ಪರಿದು ಉಪ್ಪಿನ ಕಾಯ ಕೈಯಲಿ
ಮುರಿದು ಹಪ್ಪಳಗಳನು ಮೆಲುತೊಲ-
ವಿಂದ ಪಚ್ಚಡಿಯ ॥
ನೆರೆ ಸವಿಯುತಾ ತಾಳಿದಂಗಳ
ತೆರನರಿದು ಸಾಧಿಸುತಲಾ ನೆಲ-

ದೆರೆಯುರೂಟವ ಮಾಡುತಿದ್ದರು
ಜಿಹ್ವೆ ತಣಿವಂತೆ ॥

ಕವಿ ಅಣ್ಣಾಜಿಯು 'ತೊಟ್ಟಿನೊಳು ಪಸುರಡಗದಿರ್ದ ಉಪ್ಪಿನಕಾಯಿ!' ಎಂದು ಅದರ ಒಳ್ಳೆಯ ಲಕ್ಷಣವನ್ನು ಹೇಳಿರುವನಲ್ಲದೆ 'ಕಟ್ಟಳೆಯ ಲವಣಾಮ್ಲದಿಂದಾದ ಶಾಕ' ಮುಂತಾದುವುಗಳನ್ನೂ ಹೇಳಿರುವನು.

ಕ್ರಿ ಶ. ೧೭ ನೆಯ ಶತಮಾನದಲ್ಲಿ ಬದುಕಿ ಬಾಳಿದ ಚಂದ್ರಮನೆಂಬ ಕವಿಯು, ಈ ನಂಜಿಕೊಳ್ಳುವ ಪದಾರ್ಥಗಳನ್ನು ಕುರಿತು ಹೀಗೆ ಹಾಡಿದ್ದಾನೆ:

"ತುಪ್ಪದೊಳಗೆ ಹದವರಿದು ತಾಳಿಸಿ
ಕಮ್ಮ-
ನಪ್ಪ ಹಪ್ಪಳ ಸಂಡಗೆಗಳ
ಒಪ್ಪಲಿಡೆಯೊಳಿಕ್ಕಿ ಪಳಿದ್ಯವ ಬಡಿಸಲು
ಚಪ್ಪರಿದುಣುತಿದ್ದರಾಗ ?"

ಇದೇ ಶತಮಾನಕ್ಕೆ ಸೇರಿದ ಸೋಮನಾಥನೆಂಬ ಕವಿಯು ತನ್ನ 'ರುಕ್ಮಾಂಗದ ಚರಿತ್ರೆ' ಯಲ್ಲಿ ಹೀಗೆ ಹೇಳಿದ್ದಾನ ನೋಡಿ:

"ನೆಲ್ಲಿಯಕಾಯಿ ಮಾಗುಳಿ
ಬೇಲಿಳೆದಪ್ಪ
ಬೆಲ್ಲವತ್ತದ ಕಾಯಿಂಕಳಿಲೆ ॥
ಚಳ್ಳೆಯ ಕಾಯಿಕ್ಕೆ ಮಾದಲ
ಪಾಪಟಿ-
ಯೆಲ್ಲವನುಣಿ ಬಡಿಸಿದರು ?"

'ಉಪ್ಪೇರಿ' 'ಚಕ್ಕುಲಿ' 'ಕೋಡಬಳೆ' ಇವು ಕೂಡ ದೀಶಕ ವರ್ಗದಲ್ಲಿಯೆ ಬರುವುವು. ಇದುವರೆಗೆ ಊಟದಲ್ಲಿ ಬಳಸುವ ಭಕ್ಷ್ಯ, ಉಪಪಾಕ, ಅನುಪಾಕ ಪದಾರ್ಥಗಳನ್ನು ಪರಿಚಯ ಮಾಡಿಕೊಡಲಾಯಿತು. ಇನ್ನು ಮುಖ್ಯ ಭೋಜ್ಯ ಪದಾರ್ಥವಾದ 'ಕಳಮಾನ್ನ'ವನ್ನು ಕುರಿತು ನಮ್ಮ ಕವಿಗಳು ಏನೇನು ಹೇಳಿದ್ದಾರೆ ನೋಡುವ !

## ಕಳಮಾನ್ನ ವೈವಿಧ್ಯ

'ಮಾನಸೋಲ್ಲಾ"ಸದ ರಾಜಕವಿ ಚಾಲುಕ್ಯ ಸೋಮೇಶ್ವರನು, ಅಕ್ಕಿಯನ್ನವನ್ನು ಮಾಡುವ ವಿಧಾನವನ್ನು ಆದ್ಯಂತವಾಗಿ ವಿವರಿಸಿರುವನು; ಆದರೆ ಅವನು ಹೇಳಿರುವ ವಿಧಾನವು 'ರಾಜಾನ್ನ'ದ ಕೃತಿವಿಧಾನವು,'ಕಳಮಾನ್ನ' 'ರಾಜಾನ್ನ' 'ಶಾಲ್ಯನ್ನ,' 'ಸಣ್ಣಕ್ಕಿಯನ್ನ' 'ಓಗರ', 'ಮಲ್ಲಿಗೆಯರಳಂತಹ' 'ಬಿಜ್ಜೋಗರ,' ಕಲಸಗೂಳು, ಕಲಸೋಗರ, ಕಟ್ಟೊಗರ, ಪುಳ್ಗಿ, ಕಿಚ್ಚಡಿ—ಮೊದಲಾಗಿ ನಾನಾ ಪ್ರಕಾರಗಳನ್ನು ಹೇಳಲಾಗಿದೆ. ಕಳಮ ಎಂದರೆ ಸಾಮಾನ್ಯವಾದ ನೆಲ್ಲು, ಶಾಲಿಯೆಂದರೆ ಸಣ್ಣಕ್ಕಿಯ ನೆಲ್ಲು. ಅಕ್ಕಿಯಲ್ಲಿ ಬೇಳೆಗಳನ್ನು ಬೆರಸಿ ಮಾಡುವ ಅನ್ನವು 'ಪುಳ್ಗಿ' 'ಕಿಚ್ಚಡಿ' ಎಂದು ಕರೆಯಿಸಿಕೊಳ್ಳುವುವು. ಪರದೇಶಿಯರ ಪ್ರಭಾವದಿಂದ ಈ ಕಳಮಾನ್ನ ಪಾಕವು, ಮಸಾಲೆ-ಸಕ್ಕರೆಗಳ ಸಂಬಂಧವನ್ನು ತಂದುಕೊಂಡು ಬೇರೆ ಬೇರೆ ನಾಮ—ರುಚಿಯ ಭಾತುಗಳಾಗಿರುವುವು: ಸಬ್‌ಜಾ ಭಾತು, ವಾಳುಕ ಭಾತು, ವಾಂಗಿ ಭಾತು, ಪುಳಿಯೋಗರ, ಸಾಖರಭಾತು, ಭಾಕಳ ಭಾತು, ಬಿಸಿಬೇಳೆ ಹುಳಿಯನ್ನ...ಇತ್ಯಾದಿ.

ಅಣ್ಣಾಜಿ ಕವಿಯೂ 'ಕಟ್ಟೋಗರ' 'ಕಲಸೋಗರಗಳನ್ನೆತ್ತಿ ಹೇಳಿರುವನು. ಕನಕದಾಸನು 'ಮಲ್ಲಿಗೆಯರಳಂತ ಬಿಜೋಗರ' ಎಂದು ಹೇಳಿರುವನು. ಮಲ್ಲರಸ ಕವಿಯು ಕೂಡ 'ಅನ್ನಂ ರಾಜಾನ್ನಂ ಪರಮಾನ್ನಂ ಪರಿಪರಿಯ ಕಲಸದನ್ನಂಗಳುಮಂ' ಎಂಬುದಾಗಿ, ಕಳಮಾನ್ನ ಪಾಕವನ್ನು ವಿವಿಧ ನಾಮಗಳಿಂದ ಬಣ್ಣಿಸಿರುವನು.

## ಹಾಲು-ಹಯನು

ಮೊದಲನ್ನಕ್ಕೆ ಸಾರು, ಹುಳಿಸಂಬಾರ, ಪಳಿದ್ಯಗಳು ಬೇಕಾಗುವಂತೆ ತುಪ್ಪದ ಅಗತ್ಯವಿರುವುದು. ಅಣ್ಣಾಜಿ ಕವಿಯು ತುಪ್ಪವನು

ಮೂರು ಬಗೆಯಲ್ಲಿ ಹೇಳಿದ್ದಾನೆ:

"ನಿಟ್ಟಿಸಲು ಗೋತೋಧಿಕದ
ಸಾರವೆಂದೆನಿಪ
ಬಟ್ಟಬಟ್ಟಲದಿ ತುಂಬಿಸಿವ
ಸದ್ಯೋಘೃತವು
ಹೆರೆದುಪ್ಪವಕ್ಕಿದುಪ್ಪ"

ಸದ್ಯೋಘೃತ ಎಂದರೆ ಆಗತಾನೇ ಕಾಸಿದ ಕಮ್ಮನೆಯ ತುಪ್ಪವನ್ನು ಸರಸವಾಗಿ ಬಣ್ಣಿಸಿದವರು ಅನೇಕರು. ತುಪ್ಪದಂತೆಯೆ ಹಾಲು ಮೊಸರುಗಳೂ ಊಟದಲ್ಲಿ ಆವಶ್ಯಕ ಪದಾರ್ಥಗಳು. ಚಿಲುಪಾಲು, ತಂಬಾಲು, ಪನಿವಾಲು, ಬಟ್ಟವಾಲು ಎಂಬುದಾಗಿ ಹಾಲಿನ ಬಗೆಗಳನ್ನು ನಮ್ಮ ಕವಿಗಳು ಹೇಳಿದ್ದಾರೆ. 'ಮುಟ್ಟಿ ಬೊಟ್ಟಿಡುವಂತೆ ಕಾಸಿರ್ದ ಚಿನಿಪಾಲು' ಎಂದು ಹೇಳಿದ್ದಾರೆ.

ಬಾಳ್ಮೊಸರು, ಕೆನೆಮೊಸರು, ಗೆಡ್ಡೆಮೊಸರು ಕಟ್ಟುಮೊಸರು— ಎಂಬುದಾಗಿ ಮೊಸರಿನ ನಾನಾ ನಾಮ-ರೂಪಗಳನ್ನು ನಮ್ಮ ಸಾಹಿತ್ಯದಲ್ಲಿ ಹೇಳಲಾಗಿದೆ.

ಮೊಸರಿನ ಮಕ್ಕಳೇ ಆದ ಕಳಿಲು, ಗಟ್ಟಿ ಮಜ್ಜಿಗೆ ನೀರ್ಮಜ್ಜಿಗೆಗಳೂ ಕನ್ನಡಿಗರ ಊಟದಲ್ಲಿ ಪೇಯಪದಾರ್ಥಗಳಾಗಿ ವರ್ಣಿತವಾಗಿವೆ. ಚಾಲುಕ್ಯ ಸೋಮೇಶ್ವರನು ಹೇಳಿದ 'ಮಜ್ಜಿಕಾ' ಎಂಬುದು, ನಮ್ಮಲ್ಲಿ ಈಗಲೂ ಪ್ರಚಾರದಲ್ಲಿರುವ ಒಗ್ಗರಣೆಯ ಮಜ್ಜಿಗೆಯಾಗಿದೆ

## ಶಿಖರಿಣಿ-ರಸಾಯನ

ಊಟದ ಕೊನೆಯ ಭಾಗದಲ್ಲಿ ನೀರ್ಮಜ್ಜಿಗೆಗಿಂತ ಮೊದಲು, ಕನ್ನಡಿಗರು ಇನ್ನೊಂದು ಪೇಯ ಪದಾರ್ಥವನ್ನು ಕುಡಿಯುವ ಪದ್ಧತಿಯಿದ್ದಿತು ಆ ಪದಾರ್ಥವೆಂದರೆಯೆ 'ಶಿಖರಿಣಿ' ಅಥವಾ 'ರಸಾಯನ'ಗಳು. ಹಣ್ಣುಗಳ ರಸ, ಹಾಲು, ಸಕ್ಕರೆ, ಪರಿಮಳವಸ್ತು ಇವುಗಳನ್ನೆಲ್ಲ ಹದವರಿತು ಬೆರಸಿ, ಶಿಖರಿಣಿಗಳನ್ನು ಮಾಡುತ್ತಿದ್ದರು. ಈಗ ರೂಢಿಯಲ್ಲಿರುವ 'ಸೀಕರಣೆ'ಯೇ ಸಾಹಿತ್ಯದಲ್ಲಿ 'ಶಿಖರಿಣಿ' ಯಾಗಿರಬಹುದು. ಹಯನು ಮತ್ತು ಪಾನಕಗಳನ್ನು ಕುರಿತು ಹೇಳುವಾಗ, ಶಾಂತಿನಾಥ ಕವಿಯು 'ಶಿಖರಿಣಿ' ಯನ್ನೂ ಹೇಳಿದ್ದಾನೆ.

"ಇದು ಬಾಳ್ಮೊಸರು ಕಳಿಲಿಂ-
ತಿದು ರುಚಿವೆತ್ತಿರ್ದ ಪಾನವಿದು
ಮಜ್ಜಿಗೆ ತಾಂ ॥
ಇದು ಶಿಖರಿಣಿಯೆನುತಂ ತಂ
ಬಿದುಂಬಿ ತಂದೆರೆದರಬಲೆಯರ್
ಸಿಪ್ಪುಗಳಿಂ ॥

ಶಿಖರಿಣಿಯ ಪಾನವಾದ ಮೇಲೆ ಮಜ್ಜಿಗೆಯ ಪಾನ; ಬಳಿಕ ಊಟದ ಮುಕ್ತಾಯ. ಈ ಬರೆಹದಲ್ಲಿ ಕನ್ನಡಿಗರು ಊಟಕ್ಕಾಗಿ ನಿರ್ಮಿಸಿಕೊಂಡ ಪಾಕಪದಾರ್ಥಗಳನ್ನು ವಿವರಿಸಿ ಆಯಿತು.

*



ಶತ್ರುಗಳೊಡನೆ ನೀವು ಮಾಡಿದ ಹೋರಾಟಕ್ಕೆ ಮೆಚ್ಚಿ ಇನ್ನು ಮೂರು ಪ್ರಶಸ್ತಿ ಮೆಡಲುಗಳು ಬಂದಿವೆ... ಎಲ್ಲಿಗೆ ಚುಚ್ಚಲೀ ಕಮ್ಯಾಂಡರ್...

# ಮಂಗಳೂರ ಸಮಾಚಾರ

ಶ್ರೀನಿವಾಸ ಹಾವನೂರ

೧೮೪೩-೪೪ ರ ಸುಮಾರಿಗೆ ಪ್ರಕಟವಾಗಿದ್ದ 'ಕಂನಡ' ಅಥವಾ 'ಮಂಗಳೂರ ಸಮಾಚಾರ' ವೆಂಬುದೆ ಕನ್ನಡದ ಮೊತ್ತ ಮೊದಲಿನ ಪತ್ರಿಕೆಯಾಗಿರಬೇಕೆಂಬ ಬಗ್ಗೆ ಅಲ್ಲಿ ಇಲ್ಲಿ ಉಲ್ಲೇಖಗಳು ದೊರೆಯುತ್ತಿದ್ದುವು. ಅದರ ವಿಷಯವೇನು, ಲೇಖಕ/ಸಂಪಾದಕರು ಯಾರು, ಅದರ ಪ್ರಸಾರ ಹೇಗೆ ಆಗುತ್ತಿದ್ದಿತು-ಇವೇ ಮುಂತಾದ ಕುತೂಹಲಜನಕ ಅಂಶಗಳು ಏನೊಂದೂ ತಿಳಿದಿರಲಿಲ್ಲ. ೧೫೦ ವರ್ಷಗಳಷ್ಟು ಹಳೆಯದಾದ ಈ ಪತ್ರಿಕೆಯ ಪ್ರತಿಯು ಭಾರತದ ಎಲ್ಲಿಯೂ ಸಿಗುವಂತಿರಲಿಲ್ಲ. ಅದರಅವತರಣಿಕೆಗಳು ಯಾವ ಕನ್ನಡ ಗ್ರಂಥ/ಪತ್ರಿಕಾ ಲೇಖನಗಳಲ್ಲಿಯೂ ತೋರಿ ಬಂದಿಲ್ಲ ಆ ಪತ್ರಿಕೆಯ ಲಭ್ಯತೆಯ ಬಗ್ಗೆ ಯುರೋಪಿನ ಪ್ರಾಚ್ಯ ಪುಸ್ತಕಾಲಯಗಳಲ್ಲಿ ವಿಚಾರಿಸುತ್ತಿದ್ದಾಗ, ಕೊನೆಗೊಮ್ಮೆ ದೊರಕಿತು. ಈ ಪತ್ರಿಕೆಯ ಸಂಪೂರ್ಣ ಸಂಪುಟದ ಮೈಕ್ರೋಫಿಲ್ಮ್‌ನ್ನು ಇಂಗ್ಲಂಡಿನಿಂದ ತರಿಸಿಕೊಂಡು ಅದರ ಪರಿಚಯ ಮಾಡಿಕೊಡುತ್ತಿದ್ದೇವೆ.

"ಈ ದೇಶವೆಂಬ ಮನೆಯಲ್ಲಿ ವಾಸಿಸುವ ಜನರು ಇಂಡಿನ ಪರಿಯಂತರ ಹೊರಗಿನ ದೇಶಸ್ಥರ ಸಮಾಚಾರ ಮಾರ್ಗ ಮರ್ಯಾದೆಗಳಂನು ತಿಳಿಯದೇ ಕಿಟಕಿಯಿಲ್ಲದ ಬಿಡಾರದಲ್ಲಿ ವುಳಕೊಳ್ಳುವವರ ಹಾಗೆ ಯಿರುತ್ತಾಬಂದರು. ಅದು ಕಾರಣ ಹೊರಗಿನ ಕಾರ್ಯಗಳನ್ನು ಕಾಣುವ ಹಾಗೆಯೂ ವೊಳಗೆ ಸ್ವಲ್ಪ ಬೆಳಕು ಬೀಳುವ ಹಾಗೆಯೂ ನಾಲ್ಕು ದಿಕ್ಕಿಗೆ ಕಿಟಕಿಗಳನ್ನು ಮಾಡುವ ಈ ಸಮಾಚಾರ ಕಾಗದವನ್ನು ಪಕ್ಷಕ್ಕೆವೊಂದು ಸಾರಿ ಶಿದ್ಧಮಾಡಿ ಅದನ್ನು ಓದಬೇಕೆಂದಿರುವೆಲ್ಲರಿಗೆ ಕೊಟ್ಟರೆ ಕಿಟಕಿಗಳನ್ನು ಮಾಡಿದ ಹಾಗಾಗಿರುವದು. ಈ ಕಾಗದವನ್ನು ಬರೆಯುವವರಿಗೂ ಓದುವವರಿಗೂ ದೇವರು ಬುದ್ಧಿಯನ್ನು ಕೊಡಲಿ." (ಮೊದಲ ಸಂಚಿಕೆ)

ಹೀಗೆ ಪ್ರಪಂಚದ ಪರಿಚಯವನ್ನು, ನಿರ್ವ್ಯಾಜ ಬುದ್ಧಿಯಿಂದ ಮಾಡಿಕೊಡುವ ಉದ್ದೇಶದಿಂದ ಈ ಪತ್ರಿಕೆಯ ಉದಯವಾಯಿತು. ಜೊತೆಗೆ ಮಂಗಳೂರ ಜಿಲ್ಲೆಯ ಸುದ್ದಿಗಳೂ ಇರುತ್ತಿದ್ದುವು. ಈ ಪತ್ರಿಕೆ ಹೊರಡುವುದಕ್ಕೆ ಮುಂಚೆ ಅಲ್ಲಿಯ ಜನ ಸುದ್ದಿಯನ್ನು ಹಬ್ಬಿಸುವ ಬಗೆಯನ್ನು ನೋಡಿ:

"ಬೆಳಿಗ್ಗೆ ಬಂದ್ರದಲ್ಲಾಗಲಿ ಕಚೇರಿ ಹತ್ತರವಾಗಲಿ ಒಬ್ಬನು ಬಾಯಿಗೆ ಬಂದ ಹಾಗೆ ಒಂದು ವರ್ತಮಾನದ ಹಾಗೆ ಮಾತಾಡಿದರೆ ಅದನ್ನು ಬೇರೊಬ್ಬನು ಆಶ್ಚರ್ಯದಿಂದ ಕೇಳಿ ಇನ್ನೊಬ್ಬನಿಗೆ ಹೇಳಿ ಸಾಯಂಕಾಲ ಪರಿಯಂತರ ಸುಳ್ಳು ಸುದ್ದಿಯಿಂದ ಊರೆಲ್ಲ ತುಂಬಿಸುತ್ತಾನೆ. ಮರುದಿವಸ ನಿನ್ನಿನ ವರ್ತಮಾನ ಸುಳ್ಳುಯಂತಾ ಕಾಣುವಷ್ಟರೊಳಗೆ ಎಮ್ಮೆ ಮೊಲೆಯಂತೆ [?] ಮತ್ತೊಂದು ಹುಟ್ಟಿ ಆತು. ಈ ಪ್ರಕಾರ

ವಾಗಿ ಬಹಳ ಜನರು ಕಾಲಕ್ರಮೇಣ ಮಾಡುತ್ತಾರೆಂದು ಕೆಲವು ವರ್ಷದಿಂದ ಇಲ್ಲಿ ವಸ್ತಿಯಾಗಿದ್ದ ಕೆಲವರು ತಿಳುಕೊಂಡು ಇದರಲ್ಲಿ ಪ್ರಯೋಜನವಿಲ್ಲವೆಂದು ಈ ಮನುಷ್ಯರ ಸಮಾಚಾರ ಆಸರಕ್ಕೆ ಯೋಗ್ಯವಾಗಿ ಪೂರೈಸಬೇಕೆಂದು ಆಲೋಚನೆ ಮಾಡಿದ್ದರಿಂದ ನಿಜ ಸಮಾಚಾರದ ಸಂಗ್ರಹವನ್ನು ಕೂಡಿಸಿ ಪಕ್ಷಕ್ಕೆ ಒಂದು ಕಾಗದವನ್ನು ಛಾಪಿಸಿ ಸ್ವಲ್ಪ ಕ್ರಯಕ್ಕೆ ಜನರ ಕೈಯಲ್ಲಿ ಸೇರಿಸಬೇಕೆಂಬುದಾಗಿ ನಿಶ್ಚಯಿಸಿ ಅದೆ." (ಮೊದಲ ಸಂಚಿಕೆ).

ಹಾರಿಕೆಯ ಸುದ್ದಿಯಿಂದ 'ಏನೂ ಪ್ರಯೋಜನವಿಲ್ಲ'ವೆಂದು 'ತಿಳುಕೊಂಡ'ಜನ ಇನ್ನಾರೂ ಅಲ್ಲ; ಜರ್ಮನ್ ಇವ್ಯಾಂಜೆಲಿಕಲ್ (ಬಾಸೆಲ್) ಮಿಶನ್‌ನವರು. ೧೮೩೪ ರಂದು ಮಂಗಳೂರಲ್ಲಿ ಅವರು ಕಾಲಿರಿಸಿ, ಕೆಲವು ವರ್ಷಗಳು ಸಂದಿದ್ದುದು ನಿಜ. ಮುದ್ರಾಯಂತ್ರದ ಸ್ಥಾಪನೆಯಾದ ಮರುವರ್ಷವೆ, ಈ ನಾಲ್ಕು ಪುಟದ ಪಕ್ಷ ಪತ್ರಿಕೆಯ ಅಕ್ಷರಗಳನ್ನು ಕಲ್ಲಿನ ಮೇಲೆ ತಿರುವುಮುರುವಾಗಿ ಬರೆದು ಮುದ್ರಿಸ ತೊಡಗಿದರು.. ಬಿಡಿ ಸಂಚಿಕೆಯು ಬೆಲೆ ಕೇವಲ ಒಂದು ದುಡ್ಡು—ಎಂದರೆ ಇಂದಿನ ೪ ಪೈಸೆ. ಇದರಲ್ಲಿ ಅಂಚೆ ವೆಚ್ಚವು ಸೇರಿದ್ದಿತು!

ಪತ್ರಿಕೆಯ ಸ್ವಾಮಿತ್ವವು ಬಾಸೆಲ್ ಮಿಶನ್‌ನವರಿಗೆ ಸೇರಿತ್ತಾದರೂ ಮಿಶನ್ನಿನ ಹೆಸರನು ಯಾವ ಸಂಚಿಕೆಯಲ್ಲಿಯೂ ಕೊಟ್ಟಿಲ್ಲ. ಮಿಶನ್ನಿನಲ್ಲಿ ಪ್ರಮುಖನಾಗಿದ ರೆವರೆಂಡ್

H.Moegling Editor

ಹರ್ಮನ್ ಮೊಗ್ಲಿಂಗನು ಮಾತ್ರ ಸಂಪಾದಕ/ಪ್ರಕಾಶಕನಾಗಿ ಕಾಣಿಸಿಕೊಂಡಿದ್ದಾನೆ. ಪತ್ರಿಕೆಯ ಸಮಗ್ರ ಬರವಣಿಗೆಯು ಅವನದೇ ಆಗಿದ್ದಿತು. ತಾನು ಕೊಡಬೇಕೆಂದಿದ್ದ ವಿವಿಧ ಸಮಾಚಾರಗಳ ಸ್ವರೂಪವನ್ನು ಹೀಗೆ ವಿವರಿಸಿದ್ದಾನೆ :

೧. 'ಊರ ವರ್ತಮಾನ'ಗಳು-ಉದ್ದೇಶ; ಇತರ ಜನರ ಒಳ್ಳೆಯ ನಡತೆಗಳನ್ನು ಅನುಕರಿಸಬೇಕು, ಕೆಟ್ಟ ನಡತೆಗಳ ಕಾರಣದಿಂದ ಒದಗಿದ ಕೋರ್ಟಿನ ಶಿಕ್ಷೆಯನ್ನು ಕಂಡು, ಭಯಗೊಳ್ಳಬೇಕು.

೨. ಸರಕಾರೀ ನಿರೋಪಗಳು/ಕಾನೂನುಗಳು.

೩. ಸುಬುದ್ಧಿಯನ್ನು ಹೇಳುವ ಸಾಮತಿಗಳು, ಪದಗಳು

೪. ಕಥೆಗಳು.

೫. 'ಸರ್ವರಾಜ್ಯ ವರ್ತಮಾನ'ಗಳು.

ಮೇಲಣವುಗಳಲ್ಲಿ ನಗರ ವರ್ತಮಾನಕ್ಕೆ ಸ್ವಾಭಾವಿಕವಾಗಿಯೇ ಮಹತ್ವ ಬಂದು, ಪ್ರತಿ ಸಂಚಿಕೆಯಲ್ಲಿಯೂ ಇಂಥ ಮೂರು-ನಾಲ್ಕು ಸುದ್ದಿಗಳು ತಪ್ಪದೇ ಪ್ರಕಟವಾಗುತ್ತ ನಡೆದುವು. ಆದರೆ ಊರ ಜನರ ಒಳ್ಳೆಯ ನಡತೆಗಳ ಯಾವೊಂದು ಅಂಶವೂ ಬಾರದೇ, ತಮ್ಮ ದುರ್ವರ್ತನೆಯಿಂದ ಕೋರ್ಟಿನಲ್ಲಿ ಶಿಕ್ಷೆಗೊಳಗಾದವರ ಸಮಾಚಾರಗಳು ಕಾಣಿಸಿಕೊಂಡವು. ಕೆಲವು ಮಾದರಿಗಳನ್ನು ಇಲ್ಲಿ ಕೊಡುತ್ತೇವೆ.

ಮುದ್ದೆ ಮಂಗಳೂರ ಶಾಹಾರ ಪೈಕಿ ಲೈನ ಬಜಾರಿನಲ್ಲಿರುವ ಡಾಕ್ತರ ಸಾಹೇಬರ ಮೇಟಿ [?] ಯಾದವನ ಹೆಂಡತಿಯಾದ ಚಉರಂಮ [ಚೌರಮ್ಮ] ಯಂಬವಳಿಗೆ ತಾನು ಯಿಟ್ಟುಕೊಂಡಿದ್ದೇನೆ ಯಂತ ಮೇಜಖಾನೆಯಲ್ಲು ಚಾಕರನಾಗಿ ಯಿರುವ ಲಚುಮಾ ಯಂಬವನು ಸದರಿ ಹೆಂಗಸಿನ ಮೇಲೆ ಸುಳ್ಳು ಕೂರಾಮತಿ ಹಾಕಿದ ಸಂಮಂಧ ಈ ವಿಷಯ ದರ್ಯಾಸ್ತು ಮಾಡಿ ಈತಗೆ ೭ ರೂಪಾಯಿ ಜುರುಮಾನೆ ವಿಧಿಯಿಸಿರುತ್ತಾರೆ. (೩ ನೇ ಸಂಚಿಕೆ)

ಬೇರೊಬ್ಬ ಹೆಂಗಸನ್ನು ಇಟ್ಟುಕೊಂಡಿದ್ದೇನೆಂದು ಸುಳ್ಳು ಹೇಳುತ್ತಿದ್ದುದಕ್ಕಾಗಿ ಈ ದಂಡ

ನೆಯೆ? ಅವಳ ಗಂಡ ಅಷ್ಟರ ವರೆಗೆ ಏನು ಮಾಡುತ್ತಿದ್ದ? ಅದರ ಸತ್ಯ ಸಂಗತಿಯನ್ನು ಶಿಕ್ಷೆ ವಿಧಿಸಿದ್ದ ನ್ಯಾಯಾಧೀಶನೇ ಬಲ್ಲ!

ಮಂಗಳೂರಲ್ಲಿರುವ ಪಟಾಲಮಿನ ಲಉಡಸ್ ಸಾಹೇಬರವರ ಬೆಳ್ಳಿ ಗಡಿಯಾರವನ್ನು ಚೋರಿಯಾಗಿ ಅದೆ. ಆದದರಿಂದ ಕಳ್ಳನಿಗೆ ಹಿಡಿದು ತಂದರೆ ಸದರಿ ಸಾಹೇಬರಿಂದ ೩೦ ರೂಪಾಯಿ ಇನಾಮ್ ಸಿಕ್ಕತೆಂತಾ ಇಸ್ತಿಹಾರು ಪ್ರಕಟವಾಗಿ ಅದೆ. (ಸಂಚಿಕೆ ೫).

ಮರು ಸಂಚಿಕೆಯಲ್ಲಿ ಇನ್ನೊಬ್ಬ ಸಾಹೇಬನ ಗಡಿಯಾರವು ಕಳುವಾದ ಸಮಾಚಾರವು ಪ್ರಕಟವಾಯಿತು. ಗಡಿಯಾರಗಳು ಅಂದು ಅಪೂರ್ವ ವಸ್ತುಗಳಾಗಿದ್ದುದರಿಂದ, ಜನಕ್ಕೆ ಅದನ್ನು ಕದಿಯುವ ಆಸೆ ಹುಟ್ಟಿದುದು ಸಹಜ. ಗಡಿಯಾರವನ್ನು ತಮ್ಮ ಕೋಟಿನ ಜೇಬಿನಲ್ಲಿ ಸರಪಣಿಯಿಂದ 'ಬಂಧಿಸಿ' ಇಡುತ್ತಿದ್ದರೂ ಈ ಸ್ಥಿತಿ!

ಶೆಷ್ಷಂ [ಶೆಶನ್ಸ್] ಜಡ್ಜರ ಕೋರ್ಟು—ಸನ್ ೧೮೪೩ ನೆ ಇಸವಿ ಕ್ರಿಮಿನಲ್ ನಂಬ್ರು ೩ ನೆ ಮುದ್ದೆ ಸರಕಾರ ಬಂದಿವಾನ ಬಂಟವಾಳ ತಾಲೂಕು ಪುತ್ತೂರಲ್ಲಿರುವ ಸೂರಾ ಎಂಬನು ರೂ. ೯, ಆಣೆ ೬ ಕ್ರಯದ ಸರಜುಡಿ ತಂಬಾಕು ಮಣ ೧೦, ರಾತಲು ೨ ಚೋರಿಯಿಂದ ಆಮದ ಮಾಡಿದ ತಪ್ಪು ರುಜು ಆದದರಿಂದ ೨೮ ರೂಪಾಯಿ ೨ ಆಣೆ ಜುರುಮಾನೆ ಕೊಡಬೇಕು ಇಲ್ಲವೆ ೬ ತಿಂಗಳು ಬೇಡಿ ನಿಶಿ ಬಂಧನ ಕಷ್ಟ ಅನುಭವಿಸಬೇಕುಯಂತ ಫಿತವೆ ವಿಧಿಯಿಸಿರುತ್ತಾರೆ. (೯ ನೇ ಸಂಚಿಕೆ).

ಮಂಗಳೂರ ತಾಲೂಕಿನಲ್ಲಿರುವ ನಾರ್ಣಾಚಾರಿ ಬಂದಿವಾನ ಕ್ಷವರಿಗ ಪರಮೇಶ್ವರನು ದಸ್ತೈವಜಿನಲ್ಲಿ ಚಿತ್ತುಮಾಡಿದಾಅಂತ ಫಿರ್ಯಾದಿ ಪಟ್ಟು ರುಜು ತೋರಿದರಿಂದ ೧೫೦ ಕೊರ್ಡೆ ಹೊಡಿಸಿ ೪ ವರ್ಷ ಬಂಧನ ಕಷ್ಟ ಮಾಡಬೇಕಂತ ಫಿತವೆ ವಿಧಿಯಿಸಿರುತ್ತಾರೆ. (೧೧ ನೇ ಸಂಚಿಕೆ)

ಅಂತೂ ಸರಕಾರೀ ರೆಕಾರ್ಡುಗಳನ್ನು, ಲಂಚ ತಿಂದು, ತಮಗೆ ಬೇಕಾದ ಹಾಗೆ ತಿದ್ದುವ ಮನೋವೃತ್ತಿಯು ಹಿಂದಣವರಿಂದ ಬಳುವಳಿಯಾಗಿ ಬಂದುದೆನ್ನಬೇಕು ಅಂತರ ಇಷ್ಟೇ-ಆಗಿನವರು ಸಿಕ್ಕಿಬಿದ್ದು ಶಿಕ್ಷೆಗೆ ಒಳಗಾಗುತ್ತಿದ್ದರು—ಅದೂ ಉಗ್ರವಾದ ಶಿಕ್ಷೆ: ಚರ್ಮದ ಚಾಬೂಕಿನಿಂದ ೧೫೦ ಪೆಟ್ಟುಗಳು ಮಾತ್ರವಲ್ಲದೆ, ೪ ವರ್ಷದ ಸಶ್ರಮ ಜೇಲುವಾಸ!

ಕ್ರಿಮಿನಲ್ ನಂಬ್ರ ೨೬ ನೇ ಮುದ್ದೆ ಸರಕಾರ ಬಂದಿವಾನಳು ಸದರಿ ತಾಲೂಕಿನಲ್ಲಿರುವ ಬಿಲ್ಲವಾಣಿ ಹೆಂಗಸು ಯಿದೇ ಇಸವಿ ನವಂಬರ ತಾರೀಕು ೨೮ ರಲ್ಲಿ ಕಾನೂನು ವ ಹುಕುಮಿಗೆ ವಿರೋಧವಾಗಿ ಒಟ್ಟಿಯಿಟ್ಟು ೪ ಬಾಟ್ಲೆ ಶೆಂದಿ ಶರಾಬು ಪಕಾಯಿಸಿದ ತಪ್ಪು ರುಜು ಆದುದರಿಂದ ೩ ರೂಪಾಯಿ ರುಜುಮಾನೆ ಕೊಡಬೇಕು. ಆ ಪ್ರಕಾರ ಕೊಡದೇಯಿದ್ದರೆ ೧ ತಿಂಗಳು ಕೈದಿನಲ್ಲಿ ಕಾಮಗಿರಿ ಮಾಡಿಸುವಂತೆ ಫಿತವೆ ವಿಧಿಸಿರುತ್ತಾರೆ. (೧೨ ನೇ ಸಂಚಿಕೆ).

ಆಗಿನ ಇಂಗ್ಲಿಶ್ ಶಾಲೆಯಲ್ಲಿ ಓದುತ್ತಿದ್ದ ಮೂವರು ಬ್ರಾಹ್ಮಣರು, ಕ್ರೈಸ್ತ ಮತವನ್ನು ಅವಲಂಬಿಸಿದಾಗ, ಊರಲ್ಲಿ ವಿಶೇಷ ಗಲಾಟೆಯಾಯಿತು. ಬಾಸೆಲ್ ಮಿಶನ್ನಿನವರ ಪ್ರಥಮ ಮತಾಂತರ ಕಾರ್ಯವಿದು. ಅವರನ್ನು ಪುನಃ ಹಿಂದೂ ಧರ್ಮಕ್ಕೆ ತಿರುಗಿಸಬೇಕೆಂದು ಊರವರು ತುಂಬಾ ಪ್ರಯತ್ನ ಮಾಡಿದರಾದರೂ ಮತಾಂತರ ಹೊಂದಿದ ಈ ತರುಣರು ವಿಮುಖರಾಗಲಿಲ್ಲವಂತೆ. ಆಗ "ಈ 'ದುಷ್ಟ' ಜನರು ಊರಲ್ಲಿ ಏನಾದರೂ ಗುಬಾರುಯೆಬ್ಬಿಸಬೇಕೆಂಬ ಉಮೇದಿಯಿಂದ ಮುಸಲಮಾನರ ಜುಂಮ್ಮಾ ಮಹಜೀದಿಯ ಕೆರೆಯಲ್ಲಿ ಮುಹಂಮ್ಮದಿ ಮತದವರಿಗೆ ಅತಿ ವಿರೋಧವಾಗಿರುವಂಥ ಹಂದಿಯನ್ನು ರಾತ್ರಿ ಹೊತ್ತಿನಲ್ಲಿ ಕೊಂದುಹಾಕಿದರು." ಆಗ ಜಿಲ್ಲಾ ಮೆಜಿಸ್ಟ್ರೇಟ್ ಸಾಹೇಬನು ಕೂಡಲೇ ಈ ರೀತಿಯ ಪ್ರಕಟನೆ

ಯನ್ನು ಹೊರಡಿಸಿದನು :

> .. ಮುಸಲಮಾನ ಜನರಿಗೆ ಚಾಳಿಸುವ ಇರ್ಷ್ಯಾದೆಯಿಂದ ಈ ಕೆಟ್ಟ ಕೃತ್ಯಾ ಮಾಡಿರುತ್ತಾರೆ ಎಂಬುದರಲ್ಲಿ ಏನೂ ಅನುಮಾನವಿಲ್ಲ. ಈ ವಿಷಯದಲ್ಲಿ ಕುಲಂಕುಶ ತನಖಿ ಕುಡ್ಲೆ ಮಾಡಲಾದೀತು. ಈ ದುಸ್‌ಕೃತ್ಯಾ ನಡಸಿದ ವಾ ತಲಾಶಿಗೆ ಸಾಕಾಗುವ ವರ್ತಮಾನ ಯಾರಾದರು ಕೊಟ್ಟದ್ದಾದರೆ ಅಂಥ ಮನುಷ್ಯನಿಗೆ ಐದು ನೂರು ರೂಪಾಯಿ ಕೊಡಲಾದೀತು. ಆದುದರಿಂದ ಮುಸಲ್ಮಾನ ಜಾತಿ ಯಾವತ್ತೂ ಜನರು ದುರಾಲೋಚನೆ ಜನರ ದಗೆ ಬೋದನೆಗೆ ಒಳಗಾಗದೆ ನಿಧಾನದಲ್ಲಿ ಇರಬೇಕು ಯಂತ ಅಪೇಕ್ಷಿಸುತ್ತೇವೆ. ಆ ಪ್ರಕಾರ ಸಮಾಧಾನ ಮಾಡದೆ ತಂಟಿ ಏನಾದರು ನಡೆಸಿದ್ದಾದರೆ ವ್ಯರ್ಥ ಬಹಳ ದಣಕೊಳ್ಳಬೇಕಾದೀತು. (!)

ಕಂಪನಿ ಸರಕಾರದ ಅಧಿಕಾರಿಗಳು ಜಾತೀಯ ಗಲಭೆಗಳಿಗೆ ವಿಶೇಷತ: ಮುಸಲ್ಮಾನರಿಗೆ ಸಂಬಂಧಿಸಿದ್ದವುಗಳಿಗೆ ಬಹಳ ಹೆದರುತ್ತಿದ್ದುದಕ್ಕೆ ಇದೊಂದು ನಿದರ್ಶನ. ಮೆಜಿಸ್ಟ್ರೇಟ್ ಬ್ಲೆಅರ್ ಸಾಹೇಬರು ಅಷ್ಟಕ್ಕೆ ಮುಗಿಸದೆ, ಮುಸಲ್ಮಾನರ ಹಾಗೂ ಮಾಪಿಳ್ಳೆಯವರ ಮುಖಂಡರನ್ನು ಕರೆದು, ಅಪರಾಧಿಯನ್ನು ಎಂತಿದ್ದರೂ ಹುಡುಕುವುದಾಗಿಯೂ, ಆ ಕೆರೆಯನ್ನು ಸರಕಾರದ ವತಿಯಿಂದ 'ಸಾಫು' ಮಾಡಿಸಿಕೊಡುವುದಾಗಿಯೂ ಆಶ್ವಾಸನವಿತ್ತರೆಂಬ ಅಂಶವನ್ನು ತಿಳಿಸುತ್ತ ಸಂಪಾದಕನು ಹೀಗೆ ಮುಗಿಸಿದ್ದಾನೆ:

> ಆ ಮಾತುಗಳನ್ನು ಅವರು ಬುದ್ಧಿಯಾಗಿ ತಿಳುಕೊಂಡು ಅಂಗೀಕರಿಸಿ ಒಡಂಬಟ್ಟರು ಆ ಹಂದಿ ಕಡದು ಹಾಕಿದ ಮನುಷ್ಯನು ಯಿಾಗ ಶಿಕ್ಕಿದ್ದಾನೆಂಬ ವರ್ತಮಾನಯಿರುರುತ್ತದೆ.

ಆದರೆ ಮೇಲಣ ಮತಾಂತರಗಳಿಂದ ಸಿಟ್ಟಿಗೆದ್ದ ಜನ ಅದಕ್ಕೆ ಪ್ರತಿಯಾಗಿ ಮುಸಲ್ಮಾನರನ್ನು ರೊಚ್ಚಿಗೇಳಿಸುವ ಉಜ್ಜುಗಕ್ಕೆ ತೊಡಗಿದುದೇಕೆ ಎಂಬುದು ನಮಗೆ ಅರ್ಥವಾಗುತ್ತಿಲ್ಲ. ಬ್ಲೆಅರ್ ಸಾಹೇಬನಂಥ ಅಧಿಕಾರಿಗಳು ಪರ್ಯಾಯವಾಗಿ ಮತಾಂತರಗಳಿಗೆ ಸಹಾನುಭೂತಿಪರರಾಗಿಯೆ ಇದ್ದರೆಂಬುದನ್ನು ಈ ಸಂದರ್ಭದಲ್ಲಿ ನಾವು ಗಮನಿಸತಕ್ಕದಾಗಿದೆ.

ಹೀಗೆ, ಇವೆಲ್ಲ ಊರ ಸುದ್ದಿಗಳನ್ನು ಓದಿದಾಗ, ಆಗಿನ ದಕ್ಷಿಣ ಕನ್ನಡ ಜಿಲ್ಲೆಯ ಜನಜೀವನದ ಒಂದು ಪಾರ್ಶ್ವದ ಚಿತ್ರಣ ಕಣ್ಣಿಗೆ ಕಟ್ಟುತ್ತದೆ. ಇಂಥ ಸುದ್ದಿಗಳೆಲ್ಲ ಕೋರ್ಟು-ಕಚೇರಿಗಳಿಗೆ ಹೆಚ್ಚಾಗಿ ಸಂಬಂಧಿಸಿದವುಗಳು. ಆ ನಿಮಿತ್ತದಿಂದ ಕಾನೂನುಗಳ ಪರಿಚಯವನ್ನು ಪತ್ರಿಕೆಯಲ್ಲಿ ಮಾಡಿಕೊಡುವ ಪ್ರಯತ್ನವು ನಡೆಯಿತು. ವಿವಿಧ ಕೋರ್ಟುಗಳ ಪುನರ್ಘಟನೆಯ ಬಗ್ಗೆ ೧೮೪೩ ರಲ್ಲಿ ಮದ್ರಾಸಿನಿಂದ ಪಾಸಾದ 'ಕೋರ್ಟ್ ಆ್ಯಕ್'ನ ಸಾರವನ್ನು ಪತ್ರಿಕೆಯ ಮೊದಲ ಸಂಚಿಕೆಯಿಂದ ಆರಂಭಿಸಿ, ಕೊನೆಯದರ ವರೆಗೂ ಮುಂದುವರಿಸಲಾಯಿತು. ಅಲ್ಲದೆ, ಮದ್ರಾಸ್ ಪ್ರಾಂತದ ಗೆಜೆಟಿನಲ್ಲಿ ಬರುತ್ತಿದ್ದ ಸರಕಾರೀ ಅಧಿಕಾರಿಗಳ ವರ್ಗಾವರ್ಗಿಯನ್ನೂ ಕೊಡಲಾಗುತ್ತಿತ್ತು. ಮಹತ್ವದ ಸರಕಾರೀ ಹುಕುಮುಗಳನ್ನೂ ಚುಟುಕಿನಲ್ಲಿ ಕೊಡಲಾಗಿದೆ. ಸರಕಾರೀ ನೌಕರರು ಅದು ವರೆಗೆ ಬೇರೆ ವ್ಯಾಪಾರ ವಹಿವಾಟುಗಳಲ್ಲಿಯೂ ತೊಡಗಿರುತ್ತಿದ್ದರೆಂದು ಕಾಣುತ್ತದೆ. ಅದನ್ನು ತಡೆಗಟ್ಟುವ 'ಇಸ್ತಿಹಾರು' ೧೩ ನೆಯ ಸಂಚಿಕೆಯಲ್ಲಿ (ಜನವರಿ ೧, ೧೮೪೪) ಪ್ರಕಟವಾಗಿದ್ದು ಮಂಗಳೂರಿನಲ್ಲಿದ್ದ ಅನೇಕ ನೌಕರರ ಜೀವನ ಕ್ರಮವನ್ನು ವಿಪರ್ಯಸ್ತಗೊಳಿಸುವಂತಹದಾಗಿದೆ.

'ಮಂಗಳೂರ ಸಮಾಚಾರ'ದ ಬರವಣಿಗೆಯನ್ನೆಲ್ಲ ಒಬ್ಬರೇ ಮಾಡುತ್ತಿದ್ದರಾದರೂ ಓದುಗರು ತಮ್ಮ ಸ್ಥಳದ ಯಾವುದೊಂದು ವರ್ತಮಾನವನ್ನು ಕಳುಹಿಸುವುದಕ್ಕೆ ಸ್ವಾಗತವಿದ್ದಿತು.

ಒಂದನೇ ವರ್ತಮಾನ ಕಾಗದದ ೮ ನೇ

ಕಲಮಿನಲ್ಲಿ ಯಾರಾದರು ವೊಂದು ವರ್ತಮಾನವು ಸಮಾಚಾರ ಕಾಗದಲ್ಲಿ ಸೇರಿಸಿ ಛಾಪಿಸಬೇಕೆಂತ ಬರದು ಕಳುಹಿಸಿದರೆ ಸೇರಿಸಬಹುದಾಗಿ ಮುಂಚೆ ಪ್ರಕಟಮಾಡಿದ ಪ್ರಕಾರ ಮೈಸೂರಿನಿಂದ ಒಂದು ಕಾಗದ ಬಂದದೆ. ಆದರೂ ಅದು ಇಂಥವರು ಬರದ್ದು ಎಂಬ ಹೆಸರು ಮುಂತಾಗಿರುವದಿಲ್ಲವಾಗಿದ್ದಾಗ್ಯೂ ಈ ಕಾಗದವು ವೊದಲು ಸೇರಿದಾದ ಕಾರಣ ಆ ವರ್ತಮಾನ ಛಾಪಿಸಲಿಕ್ಕೆ ನಿಶ್ಚೈಸಿ ಅದೆ. ಯಿನ್ನು ಮುಂದೆ ಯಾರಾದರೂ ಒಂದು ವರ್ತಮಾನ ಸೇರಿಸಬೇಕೆಂತ ಬರದು ಕಳುಹಿಸುವದಾದರೆ ಯಿಂಗ್ಲೀಷ್‌ನು ಸವಿವರ ಮರ್ಯಾದೆ ಪ್ರಕಾರ ಅವರ ಹೆಸರು ಊರು ಮುಂತಾಗಿ ನಮಗೆ ತಿಳಿಯುವ ಹಾಗೆ ಮಾತ್ರ ಬರದು ಟಪಾಲ ದಸ್ತುರಿ ಕೊಟ್ಟು ಕಳಿಸಿದರೆ ಆ ಸಮಾಚಾರ ಛಾಪಿಸಬಹುದು. ಈ ವಿವರ ಸರ್ವರು ತಿಳಿದಿರತಕ್ಕದ್ದು. (೬ನೇ ಸಂಚಿಕೆ).

ಹೆಸರಿಲ್ಲದ ಓದುಗರ ಪತ್ರಗಳಿಗೆ ಗಮನವೀಯಲಾಗುವುದಿಲ್ಲ. ಬಹಿರಂಗವಾಗಿ ತಮ್ಮ ಹೆಸರು ಬೇಡವೆನ್ನುವವರು ಸಂಪಾದಕರಿಗಾದರೂ ಹೆಸರು-ದೆಸೆಗಳನ್ನು ತಿಳಿಸಬೇಕು ಮತ್ತು ಸಂಪಾದಕರು ಆ ಗುಟ್ಟನ್ನು ಕಾಯ್ದುಕೊಳ್ಳಬೇಕು—ಎಂಬುದು ಇಂದಿನ ಪತ್ರಿಕಾಧರ್ಮವಷ್ಟೆ. ಅದನ್ನು ೧೨೫ ವರ್ಷಗಳ ಹಿಂದೆ, ಕನ್ನಡದ ಆದ್ಯ ಪತ್ರಿಕೆಯಲ್ಲಿ ನಡೆಸಲಾಗುತ್ತಿದ್ದಿತೆಂಬುದು ಗಮನಾರ್ಹವಾಗಿದೆ. ಅಂದು ಮೈಸೂರಿನಿಂದ ಸುದ್ದಿ ಕಳಿಸಿದವರು-'ಕಣ್ಣಿಂದ ಕಂಡವರು'. ಯಾರದೇ ಟೀಕೆಯನ್ನು ಮಾಡಬೇಕೆಂದು ವಿನಾಮರಾಗಿ ಅವರು ಉಳಿದುದಲ್ಲ: ಅದು ಮೈಸೂರಿನ ಮುಮ್ಮಡಿ ಕೃಷ್ಣರಾಜರನ್ನು ಕುರಿತುದುದಾಗಿದೆ:

'ಜೂನ್ ತಿಂಗಳಲ್ಲಿ ಈ ಊರು ದೊರೆಗಳವರ ಮಕ್ಕಳ ವಿವಾಹ ಮಹೋತ್ಸವವು ಆಯಿತು. ಯೀ ಪ್ರಸ್ತದಲ್ಲಿ ಧೊರೆಗಳವರು ಬ್ರಾಂಹ್ಮರೇ(ವೊದಲಾದ ಸಮಸ್ತ ಜಾತಿಯವರಲ್ಲಿ ಅಬಾಲ ಉೃದ್ದರಿಗೆ ಭೋಜನವನ್ನು ಮಾಡಿಸಿ ಅವರವರ ಯೋಗ್ಯತಾನುಸಾರವಾಗಿ ಶಾಲು, ವಲ್ಲಿ, ಧೋತ್ರ . ವೊದಲಾದ ಉಡುಗೊರೆಗಳನ್ನು ಕೊಟ್ಟು ಸಮಸ್ತರನ್ನು ತೃಪ್ತಿಪಡಿಸಿದರು. ಆ ಉಡುಗೊರೆಗಳು ಈ ಊರಲ್ಲಿ ಎಲ್ಲಾ ಕಡೆಯಲ್ಲಿಯೂ ಭರಿತವಾಗಿರುವ ಕಾರಣ ಯಾವ ಸ್ಥಳದಲ್ಲಿ ನೋಡಿದರೂ ಅವರ ಉದಾರ ಕ್ಷಮಾ ಕೊಂಡಾಡಲ್ಪಟ್ಟಿದೆ. ಇದಲ್ಲದೆ ಅತ್ಯಂತ ಶ್ರಮೆಯನ್ನು ಅನುಭವಿಸುತ್ತಿದ್ದ ಕೆಲವು ಜನರಿಗೆ ಸಂಬಳವನು ಮಾಡಿಸಿಕೊಟ್ಟು ಇನ್ನೂ ಕೆಲವರ ಸಂಬಳವನ್ನು ಹೆಚ್ಚು ಮಾಡಿಸಿದರು ಯಿದೇ ಪ್ರಕಾರವಾಗಿ ಈ ಧೊರೆಯವರು ಅನೇಕರನ್ನು ಸಂರಕ್ಷಿಸಿ ಅವರ ಪುತ್ರ ಪೌತ್ರರು ಅವರ ಉಪಕಾರವನ್ನು ಸ್ಮರಿಸುವ ಹಾಗೆ ಮಾಡಿದ್ದಾರೆ. ಯಿವರ ದಾತೃತದ ನಿದರ್ಶನಗಳು ಅನೇಕವಾಗಿವೆ.— ಕಣ್ಣಿನಿಂದ ಕಂಡವರು. (೬ನೇ ಸಂಚಿಕೆ).

ತನ್ನ ಹೆಸರನ್ನು ಹೇಳದೆ, ನಿರ್ಹೇತುಕ ಬುದ್ಧಿಯಿಂದ ಮುಮ್ಮಡಿಯವರ ಔದಾರ್ಯವನ್ನು ಕೊಂಡಾಡಿದ ಈ ಸಮಕಾಲೀನ ದಾಖಲೆಯು ವಿಶೇಷ ಐತಿಹಾಸಿಕ ಮಹತ್ವವುಳ್ಳದ್ದಾಗಿದೆ.

ಮಿಶನರಿಗಳು ಈ ಪತ್ರಿಕೆಯನ್ನು ಸ್ವಮತ ಪ್ರಸಾರಕ್ಕಾಗಿ ಬೇಕಾದ ಹಾಗೆ ಬಳಸಿಕೊಳ್ಳಬಹುದಿತ್ತು. ಹಾಗೆ ಮಾಡದ್ದರಿಂದ ಕನ್ನಡದ ಈ ವೊದಲ ಪತ್ರಿಕೆಯು ಜಾತ್ಯತೀತವಾದ, (Secular) ಸಮಸ್ತ ಕನ್ನಡಿಗರನ್ನುದ್ದೇಶಿಸಿದ ಪತ್ರಿಕೆಯಾಗಿ ನಿಂತಿತು. ಕ್ರಿಶ್ಚಿಯನ್ ಮತ ವಿಚಾರಗಳು ವ್ಯಕ್ತವಾದ ಸಂದರ್ಭಗಳೆಂದರೆ-ದಾಸರ ಪದ ಹಾಗೂ ಸಂಸ್ಕೃತ ಶ್ಲೋಕಗಳನ್ನು ಕೊಡುತ್ತ ಅದಕ್ಕೆ ಸಮನಾದ ಬೈಬಲ್ ಉಕ್ತಿಗಳನ್ನು ವಿವರಿಸಿದುದು. ಆ ನಿಮಿತ್ತದಿಂದ ಪುರಂದರದಾಸರ ಕೆಲವು ಹಾಡುಗಳು

ಪ್ರಥಮತಃ ಮುದ್ರಣ ರೂಪದಲ್ಲಿ ಹೊರ ಬಂದುದು ಇಲ್ಲಿಯೇ.

'ಮರವು ತನ್ನನ್ನು ಕಡಿಯ ಬಂದವನ ಮೇಲೆ ಸಹ ನೆರಳನ್ನು ಕೊಡುವುದನ್ನು ಹೇಗೆ ನಿಲ್ಲಿಸುವುದಿಲ್ಲವೊ, ಹಾಗೆಯೇ ಸಜ್ಜನರು ಶತ್ರುವೆ ಆಗಲಿ ಮನೆಗೆ ಬಂದರೆ, ಆತಿಥ್ಯವನ್ನು ಕೊಡದೆ ಇರುವುದಿಲ್ಲ. ಚಂಡಾಲನ ಮನೆಯಾದರೇನಂತೆ, ಚಂದಿರನು ಅಲ್ಲಿಯೂ ಬೆಳಕನ್ನು ನೀಡುತ್ತಾನಷ್ಟೆ. ಹಾಗೆಯೇ ಸಾಧು ಜನರು ಗುಣರಹಿತರಲ್ಲಿಯೂ ದಯೆ ತೋರಿಸುತ್ತಾರೆ--- ಈ ಭಾವದ ಒಂದು ಪದ್ಯವು ಹಿತೋಪದೇಶದಲ್ಲಿ ಬರುತ್ತದೆ. ಆ ಮೂಲ ಶ್ಲೋಕವನ್ನು ಕೊಟ್ಟು, ಅದಕ್ಕೆ ಸಮನಾಗಿರುವ ಏಸುವಿನ ಈ ವಾಕ್ಯವನ್ನು ಉದ್ಧರಿಸಲಾಗಿದೆ.

> ನಾನು ನಿಮಗೆ ಹೇಳುವದೇನಂದರೆ ಶತ್ರುಗಳಿಗೆ ಪ್ರೀತಿ ಮಾಡಿರಿ; ನಿಮಗೆ ಶಪಿಸುವವರನ್ನು ಆಶೀರ್ವದಿಸಿರಿ. ನಿಮಗೆ ಹಗೆ ಮಾಡುವವರಿಗೆ ಉಪಕಾರ ಮಾಡಿರಿ, ನಿಮಗೆ ಹಿಂಸೆಯೂ ನಿಂದೆಯೂ ಮಾಡುವವರಿಗೋಸ್ಕರ ಪ್ರಾರ್ಥಿಸಿರಿ. (೯ನೇ ಸಂಚಿಕೆ)

ವಾಚಕರ ಮನರಂಜನೆಗೆ ಸಂಪಾದಕರು ವಿಶೇಷ ಪ್ರಾಶಸ್ತ್ಯವನ್ನು ಕೊಟ್ಟಂತೆ ತೋರುವುದಿಲ್ಲ. ಪುಟ ಸಂಖ್ಯೆಯ ಮಿತಿಯಿಂದಾಗಿಯೂ ಕಥೆಗಳಿಗೆ ವಿಶೇಷ ಅವಕಾಶ ದೊರೆಯದೆ ಹೋಯಿತು. ಪರತಂತ್ರ ಬುದ್ಧಿಯ ತಂದೆ ಮಗನೊಂದಿಗೆ, ಕತ್ತೆಯೊಂದನ್ನು ಮಾರಾಟ ಮಾಡಹೊರಟು, ಮಂದಿಯ ಮಾತನ್ನು ಕೇಳಿ, ಅದನ್ನು ಕಳೆದುಕೊಂಡ ಕಥೆ ಇದೆ. ಈ ಕಥೆಯು ವಿದೇಶದಿಂದ ನಮ್ಮಲ್ಲಿ ಪ್ರಚುರವಾಯಿತೆಂಬುದಾಗಿ ಸಂಪಾದಕರ ಮಾತಿನಿಂದ ತಿಳಿಯುತ್ತದೆ. ಇನ್ನೊಂದು 'ಕುರುಬನ ಕಥೆ'; 'ಜನಮರುಳೊ ಜಾತ್ರೆಮರುಳೊ'; ಹತ್ತರ ಕೂಡ ಹನ್ನೊಂದು, 'ಪರಸೆ ಕೂಡ ಗೋವಿಂದ' ಎಂಬ ಪಡೆನುಡಿಯನ್ನು ಮಂತ್ರಿಯೊಬ್ಬನು ಕುರುಬನ ಮುನಿವೇಷದ ಮೂಲಕ, ತನ್ನ ರಾಜನಿಗೆ ಮನಗಾಣಿಸಿ ಕೊಟ್ಟ ಕಥೆಯಿದು.

ಪತ್ರಿಕೆಯ ಬಹುಭಾಗವನ್ನು ಪಡೆದುದೆಂದರೆ ವಿವಿಧ ಪ್ರದೇಶಗಳ ಹಿಂದಿನ ಮತ್ತು ಅಂದಿನ ಸಮಾಚಾರಗಳು. ಹಿಂದುಸ್ತಾನದ ವಿವಿಧ ಸಂಸ್ಥಾನಗಳು ಬ್ರಿಟಿಶರೊಡನೆ ಹೋರಾಡಿ ಒಂದೊಂದಾಗಿ ಅಸ್ತಂಗತಗೊಳ್ಳುತ್ತಿದ್ದ ಕಾಲವದು. ಗ್ವಾಲಿಯರ್, ಲಾಹೋರ, ಸಿಂಧು ದೇಶ— ಇವುಗಳ ಆ ಕಾಲದ ಹೋರಾಟವನ್ನು 'ಮಂಗಳೂರ ಸಮಾಚಾರ'ವು ಚೊಕ್ಕಟವಾಗಿ, ಚಿತ್ರಿಸಿದೆ. ಬರಿಯೆ ಸೈನಿಕ ಚಲನವಲನಗಳು, ಯುದ್ಧದಲ್ಲಿ ಮಡಿದ ರಾಜರ ಹೆಸರು ಕೊಟ್ಟರೆ ಸಾಕೆ? ಸಾಮಾನ್ಯ ಜನತೆಗೆ, ಆ ಹೋರಾಟದ ಹಿಂದಿನ ವೃತ್ತಾಂತವನ್ನೂ ಕೊಡುವುದು ಅಗತ್ಯವೆಂಬುದನ್ನು ಸಂಪಾದಕರು ಮನಗಂಡಿದ್ದರು:

> ಲಾಹೂರ ಸಂಸ್ಥಾನವನ್ನು ಸ್ಥಾಪಿಸಿದ ಪ್ರಖ್ಯಾತಿಯುಳ್ಳ ಮಹಾರಾಜ ರಣಜಿತಶಿಂಗನು ೧೮೩೯ನೆ ವರ್ಷದ ಜೂನ್ ತಿಂಗಳ ೨೭ ನೇ ತಾರೀಕಿನಲ್ಲಿ ತೀರಿಹೋದ ಮೇಲೆ ಅವನ ಮಗನಾದ ಕರಣ್‌ಶಿಂಗನು ಸುಮಾರು ೧ ವರ್ಷ ರಾಜ್ಯವನ್ನು ನಡಿಸಿ ೧೮೪೦ ನೆ ವರ್ಷದ ನವಂಬರ್ ತಿಂಗಳ ೫ ನೆ ತಾರೀಕಿನಲ್ಲಿ ವಿಲಾಯಿತಿನವರ ಅವುಷಧ ಏನೂ ಬೇಡೆಂದು ತನ್ನ ಸ್ವಂತ ವೈದ್ಯರ ಅಜ್ಞಾನದಿಂದ ಜ್ವರ ಹತ್ತಿ ಸತ್ತುಹೋದನು. ಮರು ದಿವಸದಲ್ಲಿ ಇವನ ಶವವು ಸ್ಮಶಾನಕ್ಕೆ ಕೊಂಡು ಹೋಗಿ ತಿರುಗಾಬರುವಾಗ ಪಟ್ಟದ ಬಾಗಿಲಿಂದ ಒಂದು ಮರಬಿದ್ದು ತಾಗಿ ಅವನ ಮಗನಾದ ನವನಪಾಲ್‌ಶಿಂಗನು ಸತ್ತುಹೋದನು. ಮುಂಚೆ ಈ ರಣಜಿತ್‌ಶಿಂಗನ ಹೆಂಡರಲ್ಲಿ ಒಬ್ಬಳು ತಾನು ಕ್ರಯಕ್ಕೆ ತೆಗೆದುಕೊಂಡಿದ್ದ ಶೇರ್‌ಶಿಂಗ ಎಂಬವನಂನು ನಿನ್ನಿಂದ ಹುಟ್ಟಲ್ಪಟ್ಟ ಮಗನೆಂದು ಗಂಡನಿಗೆ ಒಪ್ಪಿಸಿದಾಗ್ಯೆ ಅವನು ಈ ಮಾತು ನಂಬದಿದರೂ ಒಬ್ಬ ಸರದಾರನಾಗಿರಲೆಂದು ಕಾಶ್ಮೀರ ದೇಶದ ಅಧಿಕಾರವನ್ನು ಕೊಟ್ಟ

ದ್ದನು. ಈ ಶೇರ್‌ಶಿಂಗನೂ ಇವನ ಮಗನಾದ ಪ್ರತಾಪಶಿಂಗನೂ ಕಳೆದ ಸೆಪ್ಟಂಬರ್ ತಿಂಗಳ ಶುಮಾರು ೧೦ ನೇ ತಾರೀಕಿನಲ್ಲಿ ತಂನ ಪ್ರಧಾನಿಯಾದ ಧ್ಯಾನಶಿಂಗನ ಕೈಯಿಂದ ಕೊಲ್ಲಲ್ಪಟ್ಟನು. ತ್ರಾಣವುಳ್ಳ ಸರದಾರನಾದ ಈ ಮಂತ್ರಿಯು ತನ್ನ ಸ್ವಜನರ ಕೈಯಿಂದ ಮರುದಿವಸದಲ್ಲಿಯೆ ಸಹಾ ಮರಣಹೊಂದಿದ ನೆಂಬ ವರ್ತಮಾನವುಂಟು. ಹಾಗಿರಲಿಕ್ಕಾಗಿ ಪೂರ್ವ ಅರಸರ ಸಂತಾನವೆಲ್ಲಾ ತೀರಿ ಹೋದದರಿಂದಲೂ ಈ ಬಲಾತ್ಕಾರ ಮಾಡಿದ ಪ್ರಧಾನಿ ಸಹಾ ಕ್ಷಣದಲ್ಲಿ ನಾಶವಾದದ ರಿಂದಲೂ ಆ ಸಿಕ್ಕರ ಸಂಸ್ಥಾನದಲ್ಲಿ ಮಹಾ ಗಲಿಬಿಲಿವುಂಟಾಗೆದೆಂದು ಪ್ರಸಿದ್ಧಿಯಾಗಿದೆ.. (೮ ನೇ ಸಂಚಿಕೆ)

ಆಗಿನ ಮಂಗಳೂರು ಹಾಗೂ ಕನ್ನಡ ಜನ ರಿಗೆ ಸೀಖ್ ಜನಾಂಗದ ಪರಿಚಯು ಎಷ್ಟು ತಾನೇ ಇದ್ದೀತು? ಮೇಲಣ ಅವರ ವೃತ್ತಾಂತವು ಕನ್ನಡ ವಾಚಕರಿಗೆ ರುಚಿಕರವಾಗಿ ತೋರಿರ ಬೇಕು. ಇದರಲ್ಲಿ ಸಂಪಾದಕರ ವಾರ್ತಾಪ್ರಜ್ಞೆ ಯನ್ನೂ ಗಮನಿಸುವ ಹಾಗಿದೆ. ಇದೇ ವೃತ್ತಾಂ ತದ ಮುಕ್ತಾಯ ಭಾಗವನ್ನು ನೋಡಿ:

ಅದರ ಅಂತ್ಯವು ಏನಾಗುವದೊ ತಿಳಿಯ ಕೂಡದು. ಆದಾಗ್ಯೂ ಪೇಶಾವರ ಸೀಮೆಯ ಮೇಲೆ ಅಪೇಕ್ಷಿತರಾಗಿರುವ ಕಾಬುಲ್ ಜನರು ಅದನ್ನು ತೆಗೆದುಕೊಳ್ಳಲಿಕ್ಕೆ ಬಂದಾ ರೆಂದೂ ಮತ್ತು ಇಂಗ್ಲಿಷ್ ಸರಕಾರದವರ ಪ್ರಾಂತ್ಯದಲ್ಲಿ ಆ ರಾಜ್ಯ ಇರುವದರಿಂದ ಅವರು ಜಾಗ್ರತೆಯಾಗಿರುವರೆಂದೂ ಕಾಣು ತ್ತದೆ (ಪು. ೨೯).

ಅಂತೂ ಇಂದಲ್ಲ ನಾಳೆ ಅದು ಕಂಪನಿಯವರ ಕೈವಶವಾಗುವುದು ಅನಿವಾರ್ಯ ಎಂಬ ಮುನ್ಸೂಚನೆಯನ್ನು ಸಂಪಾದಕರು ಕೊಟ್ಟು ಬಿಟ್ಟಿದ್ದಾರೆ! ಇದರ ಕುರಿತು ಮುಂದಿನ ೨-೩ ಸಂಚಿಕೆಗಳಲ್ಲಿ ಏನೂ ವರ್ತಮಾನ ಬಾರ ದಿದ್ದಾಗ ಓದುಗರು ಪ್ರಶ್ನೆಮಾಡಿರಬೇಕು. ೧೧ ನೆಯ ಸಂಚಿಕೆಯಲ್ಲಿ ಕೆಳಗಿನ ವರದಿ ಪ್ರಕಟ ವಾಯಿತು.

ಗ್ವಾಲಿಯರ್ ದೇಶದಲ್ಲಿ ಮತ್ತು ಲಾಹೂ ರದಲ್ಲಿ ಸಹಾ ವುಂಟಾದ ಗಲಿಬಿಲಿ ಹಾಗೆಯೇ ಉಂಟು. ಅದರ ನಿಶ್ಚಯ ವರ್ತಮಾನ ಬಂದ ಮೇಲೆ ಪ್ರಕಟಮಾಡಬೇಕೆಂತ ನಿಶ್ಚೈಸಿ ಅದೆ. ಯಾತಕ್ಕಂದರೆ ಆರಂಭದ ಕಾಗದದಲ್ಲಿ ಸತ್ಯ ಮತ್ತು ಪ್ರಸಿದ್ಧಿಯಾದ ವಾರ್ತೆಯೇ ಬರಿಯೋಣಾದಿತ್ತಾಗಿ ತೋರಿ ಸಿರುವದರಿಂದಾಗಿರುತ್ತದೆ.

ಇಂದಿನ ವರದಿಗಾರರು 'ವಿಶ್ವಸನೀಯವಾಗಿ ತಿಳಿದು ಬರುತ್ತದೆ' ಎಂದು ಹೇಳುವ ಕ್ರಮ ವನ್ನು ಕನ್ನಡದ ಈ ಪತ್ರಿಕೆಯಲ್ಲಿಯೂ ಅನು ಸರಿಸಲಾಗುತ್ತಿದ್ದಿತು. ಗ್ವಾಲಿಯರ್ ದೇಶವನ್ನು ಕಂಪನಿಯವರು ೩೧ ಡಿಸೆಂಬರ್ ೧೮೪೩ರಂದು ವಶಪಡಿಸಿಕೊಂಡ ಅಧಿಕೃತ ವಿವರಗಳನ್ನು ೧-೨-೧೮೪೪ರ ಸಂಚಿಕೆಯಲ್ಲಿ ಹೇಳಿಯಾದ ಮೇಲೆ ಅದನ್ನು ಈ ರೀತಿ ಸಮಾರೋಪ ಮಾಡಿದ್ದಾರೆ:

ಈ ಪ್ರಕಾರ ಪೂರ್ವದ ಮಹಾರಾಜ ಶಿಂಧ್ಯಾ ಸರಕಾರವು ಕುಂಪನಿಯವರು ಸಾಧೀನ ಮಾಡಿಕೊಂಡದರಿಂದ ಅದಂನು ಹ್ಯಾಗೆ ನಡಶ್ಯಾರು ಎಂದು ಈ ವರೆಗೂ ನಿಶ್ಚಯವಿಲ್ಲ. ಆದರೆ ಗೌರ್ನರ ಜನರಲ್ ಬಹಾದೂರವರು ಅದಂನು ಮುಂಚಿನ ರಾಣಿಗೂ ಅವಳ ಸಾಕು ಮಗನಿಗೂ ರಾಜ್ಯಾ ಧಿಕಾರವನ್ನು ತಿರುಗಿ ಒಪ್ಪಿಸಿ ಅವರ ಅಧಿ ಕಾರವನ್ನು ಭದ್ರಪಡಿಸುವ ಬಗ್ಗೆ ತಕ್ಕವಾದ ಸೆಂನ್ಯವನ್ನು ಅದರಲ್ಲಿ ಇಟ್ಟಾರೆಂದು ಸಮಾ ಚಾರ ಇರುತ್ತದೆ. (೧೫ನೇ ಸಂಚಿಕೆ)

ನಮ್ಮ ದೇಶದ ಸುದ್ದಿಗಳಲ್ಲದೆ ಕಾಬೂಲ, ಚೀನಾ ದೇಶಗಳಲ್ಲಿ ನಡೆದ ಯುದ್ಧದ ಮತ್ತು ಇತರ ಹಿನ್ನೆಲೆಯ ವಿವರಗಳನ್ನು ಮಂಗಳೂರ ವಾಚಕರಿಗೆ ಒದಗಿಸಲಾಯಿತು. ಇಂದಿನಂತೆ ಪಿ. ಟಿ. ಐ., ರಾಯಿಟರ್ ಸುದ್ದಿ ಸಂಸ್ಥೆಗಳಾ ಗಲೀ, ಸಂತ ಸುದಿ ಗಾರರಾಗಲೀ ಇಲ್ಲದಿದ್ದಾಗ

ಇಷ್ಟೆಲ್ಲ ವಿವರಗಳನ್ನು ಕಲೆ ಹಾಕಿದ್ದುದು ಅಚ್ಚರಿಯೇ ಸೈ. ಆಗ ಅಂಚೆಯ ವ್ಯವಸ್ಥೆಯೂ ನಮ್ಮ ದೇಶದಲ್ಲಿ ವ್ಯಾಪಕವಾಗಿ, ವ್ಯವಸ್ಥಿತವಾಗಿ ರೂಪುಗೊಂಡಿರಲಿಲ್ಲ. ಈ ಸ್ಥಿತಿಯಲ್ಲಿ ಸುದ್ದಿಗಳನ್ನು ದೊರಕಿಸಲು ವಿಶೇಷ ಪರಿಶ್ರಮ ಪಡಬೇಕಾಗುತ್ತಿತ್ತೆಂಬುದರಲ್ಲಿ ಸಂದೇಹವಿಲ್ಲ.

ಈ ಅನ್ವೇಷಣೆಯಲ್ಲಿ ಒಮ್ಮೆ ಉತ್ತರ ಹಿಂದುಸ್ಥಾನದ ಮಿಡಿತೆಗಳೂ ಇವರ ಕೈಗೆ ಅಕಸ್ಮಾತ್ ಎಟುಕಿದುವು! "ಸಿಂಧು ದೇಶದಲ್ಲಿಯೂ ಮುಂಬೈಯ ಉತ್ತರ ಸೀಮೆಗಳಲ್ಲಿಯೂ ಶಿಮಲಾ ಎಂಬ ಊರಿನಲ್ಲಿ ಸಹಾ ಮಿಡಿತೆಗಳೆಂಬ ದೊಡ್ಡ ಪತಂಗ ಹುಳಗಳು ಆಕಾಶದ ಮೇಲೆ ಮೋಡಗಳ ಹಾಗೆ ಗುಂಪುಗುಂಪಾಗಿ ಕೆಳಗಿಳಿದುವಂತೆ."

ಇನ್ನೊಂದು ಸಂಚಿಕೆಯಲ್ಲಿ ಹಿಂದುಸ್ಥಾನದ ಅಂದಿನ ಖಾನೆಸುಮಾರಿಯನ್ನು ಕೊಡಲಾಗಿದೆ. ಆ ಪ್ರಕಾರ, ಬ್ರಿಟಿಶರ ನೇರ ಆಡಳಿತದಲ್ಲಿದ್ದ ಪ್ರದೇಶಗಳ ಕ್ಷೇತ್ರ ಹಾಗೂ ಜನಸಂಖ್ಯೆ ಈ ರೀತಿಯಾಗಿ ಇದ್ದಿತು :

| | ಚಚೌಕ ಮೈಲು | ಜನರು |
|---|---|---|
| ಬಂಗಾಳ ಕೊಸ್ತ | ೨೨೦೩೧೨ | ೬೯೭೧೦೦೭೧ |
| ಮದರಾಸ್ ,, | ೧೪೮೯೨೩ | ೧೩೫೦೮೫೩೫ |
| ಮುಂಬಯಿ ,, | ೫೯೪೩೮ | ೬೭೫೧೫೪೬ |

ಈ ಅಂಕಿಗಳ ನಿಕರ ಸ್ವರೂಪವನ್ನು ಗಮನಿಸಬೇಕು. ಅಲ್ಲಿಂದ ಬೇರೆ ಅರಸುಗಳ ಸೀಮೆಗಳಲ್ಲಿರುವ ಜನರ ಲೆಖ್ಖವನ್ನು ಒಂದೊಂದಾಗಿ ಕೊಟ್ಟು ಹಿಂದುಸ್ಥಾನದ ಒಟ್ಟು ಜನಸಂಖ್ಯೆ ೧೪ ಕೋಟಿ ೧೦ಲಕ್ಷ ಎಂಬುದಾಗಿ ಕಾಣಿಸಿದ್ದಾರೆ. ಅನೇಕ ಸಂಸ್ಥಾನಗಳು ಇನ್ನೂ ಕೈವಶವಾಗದಿದ್ದಾಗ, ಬೇರೆ ಆಕರಗಳಿಂದ ಈ ಅಂಕಿಗಳನ್ನು ದೊರಕಿಸಿದುದು ಗಣನೀಯವಾಗಿದೆ.

"ಹಿಂದೂ ಜನರಲ್ಲಿ ಅನೇಕರು ತಂಮ ದೇಶದ ಸರಕಾರದವರು ಮತ್ತು ಇಂಗ್ಲಾಂಡ್ ದೇಶದ ಸರಕಾರದವರು ಸಹಾ ಒಂದೇ ಎಂದು" ತಪ್ಪಾಗಿ ತಿಳಿದುದನ್ನು ಸರಿಪಡಿಸುವ ದೃಷ್ಟಿಯಿಂದ ಈಸ್ಟ್ ಇಂಡಿಯಾ ಕಂಪೆನಿಯು ಚರಿತ್ರೆಯನ್ನು ವಿವರವಾಗಿ ತಿಳಿಹೇಳುವುದು ಸಮಂಜಸವೇ ಆಗಿದ್ದಿತು. ೧೫೯೯ ನೇ ವರ್ಷದಲ್ಲಿ ಇಂಗ್ಲಾಂಡ ದೇಶದಲ್ಲಿದ್ದ ದೊಡ್ಡ ದೊಡ್ಡ ಸಾ[ವ]ಕಾರರು ಶುಮಾರು ೩೦ ಲಕ್ಷ ರೂಪಾಯಿ ಕೂಡಿಸಿ,...ಹಿಂದೂ ದೇಶಕ್ಕೆ ಹೋಗಿ ವ್ಯಾಪಾರ ನಡಸುತ್ತೇವೆಂದೂ ಆಗೋಸ್ಕರ ೩ ಹಡಗುಗಳು ಸಿದ್ಧ ಮಾಡಿ ಕಳಿಸುವ ಹಾಗೆ ಅಪ್ಪಣೆಯಾಗಬೇಕೆಂದು ಅರಸನಿಗೆ ಅರಿಕೆ ಮಾಡಿ"ದಂದಿನಿಂದ ಅವರ ಚರಿತ್ರೆಯು ಹಲವು ಸಂಚಿಕೆಗಳಲ್ಲಿ ಮುಂದುವರಿದಿದೆ. ಕೊನೆಯಲ್ಲಿ ಕಂಪನಿಯು ೧೮೩೯-೪೧ರ ಆದಾಯವನ್ನೂ ಕೊಡಲಾಗಿದೆ.

ಅದೇ ಸಂಚಿಕೆಯಲ್ಲಿ (ನಂ. ೧೦) ಇಂಗ್ಲಂಡ ದೇಶದ ಆದಾಯ-ವೆಚ್ಚಗಳನ್ನೂ ಹೇಳುವಾಗ ಆ ದೇಶಕ್ಕೆ ದೊಡ ಮೊತ್ತದ ಸಾಲವಿದೆಯೆಂಬ ಪ್ರಸಕ್ತಿ ಬಂತು. ಇಂಗ್ಲಂಡದಂಥ ಬಲಾಢ್ಯ ಸಾಮ್ರಾಜ್ಯವು ಬಡತನದ ಸ್ಥಿತಿಯಲ್ಲಿದೆಯೇ? ಎಂಬ ಕುತೂಹಲವು ವಾಚಕರಲ್ಲಿ ಮೂಡಿರಬಹುದೆಂದು ತಾನೇ ಊಹಿಸಿ, ಮರು ಸಂಚಿಕೆಯಲ್ಲಿ ಅದರ ವಿವರಣೆಯನ್ನು ಈ ರೀತಿಯಾಗಿ ಕೊಡಲಾಯಿತು.

೧೧ನೇ ಕಾಗದದಲ್ಲಿ ಇಂಗ್ಲಾಂಡ್ ರಾಜ್ಯದ ಮೇಲೆ ಸ್ವಲ್ಪ ಕಡಿಮೆ ೮ ನೂರು ಕೋಟಿ ರೂಪಾಯಿ ಸಾಲ ಇರುತ್ತದೆಯೆಂದು ಬರೆದಿದೆ. ಈ ಮಾತು ಮೋದಿದವನು ಆ ರಾಜ್ಯದ ಐಶ್ವರ್ಯಕ್ಕೆ ಕುಂದತ್ವ ಯೋಚಿಸಲಿಕ್ಕೆ ಕಾರಣವಿಲ್ಲ. ಯಾತಕ್ಕೆಂದರೆ ಅಂಥಾ ಸಾಲಕೊಟ್ಟು ಅದರ ಬಡ್ಡಿ ಪಡಕೊಳ್ಳುವವರು ಅದೇ ದೇಶಸ್ಥರಾಗಿರುತ್ತಾರೆ. ಹೀಗಿರಲಾಗಿ ಇಷ್ಟು ಸಾಲ ಇರುವದರಿಂದ ಅರಸ್ಥನಕ್ಕೆ ತ್ರಾಣ ವುಂಟಾಗುವದು. ಹ್ಯಾಗೆಂದರೆ ರಾಜ್ಯದಲ್ಲಿ ಏನಾದರೂ ಗುಬಾರು ಎದ್ದರೆ ತಂದು ಜೀವನಕ್ಕೆ ಅಪೋಹ [?] ವಾಗುವದೆಂದು ಹಣವಂದಿಕರು ತಿಳುಕೊಂಡು ಪೂರ್ಣ ಮಮತೆಯಿಂದ ಆಧರಿಸಬೇಕು. ಆ ಸಾಲ

ವಂನು ಕೊಟ್ಟವರು ಅರಸನಿಂದ ತಿರುಗ ಹೊಂದಲಿಕ್ಕೆ ಏನೇನು ಮನಸ್ಸಿಲ್ಲ. ಏನೆಂದರೆ ಸರಕಾರದವರ ಹಾಗೆ ಅಸಲಿಗೆ ಮೋಸವಿಲ್ಲದೆ ಬಡ್ಡಿ ಕೊಡುವವರು ಯಾರೂ ಇಲ್ಲ. ಆದಕಾರಣ ಆ ದೇಶವು ಐಶ್ವರ್ಯದಿಂದ ತುಂಬಿರುತ್ತದೆಯೆಂತ ತಿಳಕೊಳ್ಳಬೇಕು.

'ಮಂಗಳೂರ ಸಮಾಚಾರ'ವು ಆ ನಗರ ಅಥವಾ ಜಿಲ್ಲೆ ಮಾತ್ರ ಸೀಮಿತವಾಗದೆ ಎಲ್ಲ ಕನ್ನಡಿಗರನ್ನು ಉದ್ದೇಶಿಸಿ ಪ್ರಕಟವಾಗುತ್ತಿದ್ದಿತು ಅದರ ಸುದ್ದಿಯ ಹರಹು ಅಖಿಲ ಭಾರತ ಮಟ್ಟದಲ್ಲಿದ್ದಿತೆಂಬುದು ಮಾತ್ರವಲ್ಲ, ಜಗತ್ತಿನ ಇತರ ಹಲವು ಭಾಗಗಳನ್ನು ಬಳಸಿಕೊಂಡು ಇಂದಿನ ವಾರ್ತಾಪತ್ರಿಕೆಗಳಲ್ಲಿ ಕಂಡುಬರುವ ಅನೇಕ ಆಧುನಿಕ ಲಕ್ಷಣಗಳನ್ನು ಒಳಗೊಂಡಿದ್ದಿತು. ದಿನ ಪತ್ರಿಕೆಗಳ ಕೊನೆಯಚಿನ 'ಕಡೆಯ ಸುದ್ದಿ'ಯನ್ನು ಕೊಡುತ್ತಿದ್ದುದಕ್ಕೂ ಒಂದು ನಿದರ್ಶನವಿದೆ. ಕದಿರೆ ಗ್ರಾಮದ ಸಣ್ಣಪ್ಪ ಎಂಬವನ ಮೇಲೆ ಖೂನಿಯ ಆರೋಪದ ವಿಚಾರಣೆ ನಡೆದುದನ್ನು ಪ್ರಸ್ತಾಪಿಸಿದ ಬಳಿಕ ಅದೇ ಸಂಚಿಕೆಯ ಕೊನೆಯಲ್ಲಿ, "ಮೇಲೆ ಬರದಿರುವ ಕಲಂಡರ ನಂಬ್ರ ೭ನೇ ಬಂದಿವಾನ ಸಂಣಪ್ಪಗೆ ಕಳದ ನವಂಬರ್ ತಾರೀಖು ೨ ರಲ್ಲು ಗಲ್ಲಿಗೆ ಹಾಕಿರುತ್ತಾರೆ." (೧೧ನೆಯ ಸಂಚಿಕೆ.)

ಪತ್ರಿಕೆಯ ಭಾಷೆಯ ಬಗ್ಗೆ ಒಂದೆರಡು ಅಂಶಗಳನ್ನು ಪ್ರಸ್ತಾಪಿಸಬೇಕು. ಹೊಸಗನ್ನಡ ಗದ್ಯವೆಂಬುದು ಅದಾಗ ರೂಪುಗೊಳ್ಳುತ್ತಿದ್ದ ಕಾಲವದು. ನೇರವಾದ ನಿರೂಪಣೆಯ, ತಿಳಿಯಾದ ಗದ್ಯ ಸರಣಿಯು ೧೨೫ ವರ್ಷಗಳ ಹಿಂದೆ ಹುಟ್ಟಿರಲೇ ಇಲ್ಲವೆನ್ನಬಹುದು. ಮೈಸೂರಿನ ಆಗಿನ ಆಸ್ಥಾನದದಲ್ಲಿದ್ದ ಕನ್ನಡ ಪಂಡಿತರು ಸಂಸ್ಕೃತ ಭೂಯಿಷ್ಠವಾದ, ಪ್ರೌಢ ಶೈಲಿಯಲ್ಲಿ ಬರೆಯುತ್ತಿದ್ದರು ಜೊತೆಗೆ ಹಳಗನ್ನಡ ನಡುಗನ್ನಡಗಳ ಪದ್ಯ ಪರಂಪರೆಯೇ ಇನ್ನೂ ಪ್ರಬಲವಾಗಿತ್ತಲ್ಲದೆ, ಗದ್ಯದಲ್ಲಿ ಸಾಮಾನ್ಯ ಜನಕ್ಕೆ ತಿಳಿಯುವಂತೆ ಬರೆಯಬೇಕೆನ್ನುವ ಪ್ರವೃತ್ತಿಯು ೧೮೪೦ ದಶಕದ ದೇಶೀಯರಲ್ಲಿ ಹುಟ್ಟಿರಲಿಲ್ಲವೆನ್ನಬಹುದು. ಮಿಶನರಿಗಳೇ ತಮ್ಮ ಮತಪ್ರಸಾರದ ಪುಸ್ತಕಗಳಲ್ಲಿ ಇದನ್ನು ಆರಂಭಿಸಿದರು. ಈ ಪತ್ರಿಕೆಯ ಸಂಪಾದಕನು ಮಿಶನರಿಯಾದುದರಿಂದಲೂ, ಕೋರ್ಟು-ಕಚೇರಿ, ಮತ್ತಿತರ ವ್ಯವಹಾರಗಳಿಗೆ ಸಂಬಂಧಿಸಿದ ಸುದ್ದಿಗಳೇ ಪ್ರಾಧಾನ್ಯ ಪಡೆದುವಾದ್ದರಿಂದಲೂ, ಇಲ್ಲಿಯ ಬರವಣಿಗೆಯು ವಿಚಿತ್ರವಾಗಿ ತೋರಬಹುದಾದರೂ, ಮೇಲೆ ಹೇಳಿದ ಗದ್ಯೋದಯದ ಹಿನ್ನೆಲೆಯಲ್ಲಿ ನೋಡಿದಾಗ, ಇದರ ಭಾಷೆಯ ಬಗ್ಗೆ ಆಕ್ಷೇಪಣೆ ನಿಲ್ಲಲಾರದು.

ಪತ್ರಿಕೆಯ ಸಂಚಾಲಕರ ವ್ಯಾವಹಾರಿಕ ಚೊಕಟತನವನ್ನೂ ಗಮನಿಸಬೇಕು. ಪ್ರತಿ ಸಂಚಿಕೆಯಲ್ಲಿ, ಅದರ ಸಂಪುಟದ ಹಾಗೂ ಬಿಡಿ ಸಂಚಿಕೆಯ ನಂಬರು, ದಿನಾಂಕ ಇವನ್ನು ನಿಯಮಿತವಾಗಿ ಕೊಡಲಾಗುತ್ತಿದ್ದಿತು. ಕೊತ್ವಾಲ್ ಕಟ್ಟೆಯೆದುರು ಹಾಗೂ ತಾಲೂಕು ಕಚೇರಿಯ ಹತ್ತಿರ ಇದ್ದ ಅವರ ಇಂಗ್ಲೀಷ್ ಶಾಲೆ— ಈ ಸ್ಥಳಗಳಲ್ಲಿ ಮಾರಾಟಕ್ಕೆ ದೊರೆಯುತ್ತಿದ್ದುದನ್ನು ತಪ್ಪದೇ ಕಾಣಿಸುತ್ತಿದ್ದರು. ಪತ್ರಿಕೆಯು, ನಿರ್ದಿಷ್ಟ ತಾರೀಖಿಗೇ ಹೊರಡುತ್ತಿತ್ತೆಂದು ನಾವು ಊಹಿಸುತ್ತೇವೆ. ಯಾವದೊಂದು ಸಂಚಿಕೆ ತಡವಾದದ್ದಾದರೆ, ಆ ಕುರಿತು ವಿವರಣೆಯಿತ್ತು ವಾಚಕರ ಕ್ಷಮೆ ಕೇಳುವಷ್ಟು ಪ್ರಾಮಾಣಿಕತೆ ಅವರಲ್ಲಿದಿತ್ತು. ಪತ್ರಿಕೆಯು ಹೀಗೆ ವ್ಯವಸಿತವಾಗಿ ಮುಂದುವರಿದಿದ್ದಾಗ, ಅದರ ಸಂಚಾಲಕರು, ಅದರ ಮುದ್ರಣ ಕಾರ್ಯವನ್ನು ಬಳ್ಳಾರಿಗೆ ಸಾಗಿಸಬೇಕೆಂದು ನಿರ್ಧರಿಸಿದರು. ಅದರ ಕಾರಣ ಹೀಗಿದೆ:

ಮಂಗಳೂರು, ಮೈಸೂರು, ತುಮ್ಕೂರು, ಬಳ್ಳಾರಿ, ಶಿವಮೊಗ್ಗ, ಹುಬ್ಬಳ್ಳಿ, ಶಿರಸಿ, ಹೊಂನಾವರ ಮೊದಲಾದ ಸ್ಥಳಗಳಲ್ಲಿ ಕೆಲವು ನೂರು ಮಂದಿ ಈ ಕಾಗದವನ್ನು ಈ ವರೆಗೆ

ತೆಗೆದುಕೊಳ್ಳುತ್ತಾ ಬಂದರು. ಮೊದಲಿನ ನಂಬ್ರದ ಕಾಗದಗಳನ್ನು ಛಾಪಿಸಿ ಪ್ರಕಟ ಮಾಡುವಾಗ್ಯೆ ನಾವು ಮಾಡಿದ ಆಲೋಚನೆ ಈ ಕಾಲದಲ್ಲಿ ಈ ದೇಶಸ್ಥರೊಳಗೆ ನಡಿಯು ವದೋ ಏನೋ ಎಂದು ಸ್ವಲ್ಪ ಸಂದೇಹ ಪಡುತ್ತಿದ್ದೆವು. ಈಗ ಈ ದೇಶಸ್ಥರಲ್ಲಿ ಅನೇಕ ರಿಗೆ ಕನಡು ಭಾಷೆಯಲ್ಲಿ ಬರೆದ ಒಂದು ಸಮಾಚಾರ ಕಾಗದವನ್ನು ಓದುವದರಲ್ಲಿ ಮತಿ ಆಗುವದೆಂದು ನೋಡಿ ಸಂತೋಷ ದಿಂದ ಅದನ್ನು ವೃದ್ಧಿ ಮಾಡುವ ಪ್ರಯತ್ನ ದಿಂದ ಇನ್ನು ಮುಂದೆ ಅದನ್ನು ಕಲ್ಲಿನಲ್ಲಿ ಛಾಪಿಸದೆ ಬಳ್ಳಾರಿಯಲ್ಲಿ ಇರುವ ಅಕ್ಷರ ಛಾಪಖಾನೆಯಲ್ಲಿ ಅಚ್ಚು ಪಡಿ ಮಾಡಲಿಕ್ಕೆ ನಿಶ್ಚೈಸಿದ್ದೇವೆ. ಆಮೇಲೆ ಕನಡ ಶೀಮೆಯ ನಾಲ್ಕು ದಿಕ್ಕುಗಳಲ್ಲಿಯಿರುವವರು ಶುದ್ಧ ವಾದ ಮೊಳೆ ಅಚ್ಚುಗಳಿಂದ ಆಗುವ ಬರಹ ವನ್ನು ಶುಲಭವಾಗಿ ಓದಬಹುದು. ಇದಲ್ಲದೆ ಬಳ್ಳಾರಿಯಲ್ಲಿ ಆಗುವ ವರ್ತಮಾನದ ಒಂದು ಕಾಗದದಲ್ಲಿ... ಮೊದಲಿನ ಎರಡು ಕಾಗದ ದಷ್ಟು ಬರಹ ಪಡಿಯುವದರಿಂದ ಹೆಚು ವರ್ತಮಾನವಂನೂ ಚರಿತ್ರೆಗಳಂನೂ ವಿದ್ಯಾ ಪಾಠಗಳಂನೂ ಬುದ್ಧಿ ಮಾತುಗಳಂನೂ ಬರಿಯುವದಕ್ಕೆ ಸ್ಥಳ ಶಿಕ್ಕುವದು. ಈ ಹದಿ ನಾರನೆ ನಂಬ್ರದ ಕಾಗದವು ಮಂಗಳೂರಲ್ಲಿ ಛಾಪಿಸಿದ ತರುವಾಯ ಹದಿನೇಳನೆ ನಂಬ್ರದ ಕಾಗದವು ಮಾರ್ಚ್ ತಾರೀಕು ೧೭ಲ್ಲು ದೇವರ ಚಿತ್ತವಾದರೆ ಬಳ್ಳಾರಿಯಲ್ಲಿ ಛಾಪಿಸ ಲ್ಪಡುವದು.

—ಇಂತಿದು ಸ್ಥಳಾಂತರದ ಹಿನ್ನೆಲೆ. ಉತ್ತಮ ಮುದ್ರಣ, ಹೆಚ್ಚು ಮಾಹಿತಿ ಒದ ಗಿಸುವ ಕಾರಣದಿಂದ ಬಿಡಿ ಸಂಚಿಕೆಯ ಬೆಲೆ ಯನ್ನು ೨ ದುಡ್ಡಿಗೆ ಏರಿಸಬೇಕೆಂದಾಯ್ತು. ಕನ್ನಡ ಪತ್ರಿಕಾರಂಗದ ಈ ಚೊಚ್ಚಲು ಕೃತಿಯು ಹಸಿಬಿಸಿಯಾದ, ಎತ್ತುಗಡೆಯಾಗಿರದೆ ಆಧುನಿಕ ಪತ್ರಿಕೋದ್ಯಮದ ಭದ್ರ ತಳ ಹದಿಯ ಮೇಲೆ ನಿಂತಿತ್ತೆಂಬುದು, ಮೇಲಿನ ವಿವೇಚನೆಯಿಂದ ವಾಚಕರಿಗೆ ಮನದಟ್ಟಾಗಿ ರಲು ಸಾಕು. ಅತ್ಯಂತ ಮಹತ್ವದ ಮಾತೆಂದರೆ ಸಂಪಾದಕರಲ್ಲಿದ್ದ ಕನ್ನಡ ಪ್ರಜ್ಞೆ. ಮೈಸೂರು ಸಂಸ್ಥಾನದ ಕನ್ನಡಿಗರಿಗೂ, ಮುಂಬಯಿ ಕರ್ನಾಟಕದವರಿಗೂ ಆ ಕಾಲದಲ್ಲಿ ಬಳಕೆಯೇ ಇದ್ದಿರದಿದ್ದಾಗ, ನಾವು ಒಂದೇ ಭಾಷೆಯ ಬಾಂಧವರು ಎಂಬ ಭಾವನೆ ರವಷ್ಟಾದರೂ ಪರಸ್ಪರಲ್ಲಿ ಇದ್ದಿರಲಿಲ್ಲ. ಕನ್ನಡಿಗರು ಎಂಬ ಸಮಷ್ಟಿದೃಷ್ಟಿಯನ್ನು ಈ ಪತ್ರಿಕಾಕರ್ತರು ಮೊದಲಿನಿಂದ ಇಟ್ಟುಕೊಂಡಿದ್ದಲ್ಲದೇ, ಅದೇ ಭಾವನೆಯಿಂದ ಪತ್ರಿಕೆಯನ್ನು ವ್ಯಾಪಕವಾದ ರೀತಿಯಲ್ಲಿ ಹೊರತರಬೇಕೆಂದು ಬಯಸಿದರು. ಅಲ್ಲದೆ,

> 'ಮಂಗಳೂರು ಸಮಾಚಾರ ಎಂಬ ಹೆಸ ರನ್ನು ಬಿಟ್ಟು ಈ ಕಾಗದವು ಕನ್ನಡ ಭಾಷೆ ಯನ್ನಾಡುವ ಸಕಲ ಜನರಲ್ಲಿ ಪ್ರಸಿದ್ಧಿಯಾಗ ಬೇಕೆಂಬ ಇಚ್ಛೆಯಿಂದ' 'ಕಂನಡ ಸಮಾ ಚಾರ' ವೆಂಬ ಹೊಸ ಹೆಸರಿನಿಂದ ಪತ್ರಿಕೆ ಹೊರಡುವುದೆಂದು ಘೋಷಿಸಿದ್ದರಲ್ಲಿ, ಕನ್ನಡತ್ವಕ್ಕೆ ವೀಳ್ಯವನ್ನೆತ್ತಿದಂತಾಯ್ತೆಂದು ಹೇಳಬಹುದು.

ಇಂತು 'ಕನ್ನಡ ಸಮಾಚಾರವು' ಬಳ್ಳಾರಿ ಯಿಂದ ಪ್ರಕಟವಾಗತೊಡಗುವುದಕ್ಕೆ ದೇವರ ಚಿತ್ತವೇನೋ ಆಯಿತು. ಆದರೆ, ಸಂಪಾದಕರು ದೂರದ ಮಂಗಳೂರಲ್ಲಿ ಉಳಿದದ್ದರಿಂದಲೂ ಬಳ್ಳಾರಿಯಲ್ಲಿ ಕತೃತ್ವಶಕ್ತಿಯ ಮಿಶನರಿಯು ಇರದ್ದರಿಂದಲೂ ಪತ್ರಿಕೆಯು ೧೮೪೪ ನೆಯ ವರ್ಷಾಂತ್ಯದ ವರೆಗೆ ಮಾತ್ರ ಮುಂದುವರಿದು, ಅಲ್ಲಿಗೆ ನಿಂತು ಹೋಯಿತು. ಕನ್ನಡದ ದ್ವಿತೀಯ ಪತ್ರಿಕೆಯನ್ನು ಹೊರಡಿಸುವಲ್ಲಿಯೂ ಈ ಪತ್ರಿ ಕೆಯ ಸಂಪಾದಕನಾಗಿದ್ದ ಮೊಗ್ಲಿಂಗನೇ ಮುಂದುವರಿದನು. ೧೮೫೭ ರಂದು ಅವನ ಸಂಪಾದಕತ್ವದಲ್ಲಿ 'ಕಂನಡ ವಾರ್ತಿಕ'ವು ಮಂಗಳೂರಿನಿಂದಲೇ ಹೊರಬಂದಿತು. *

## ಮಿತ ಸಂತಾನವೇ ಸುಖ ಸಂಸಾರಕ್ಕೆ ಯೋಗ್ಯದಾರಿ

## ಎರಡು ಅಥವಾ ಮೂರು ಮಕ್ಕಳು ಸಾಕಲ್ಲವೇ?



**ಚಿಕ್ಕ ಸಂಸಾರ,**

**ಚೊಕ್ಕ ಭಂಗಾರ**

**ಎರಡು ಅಥವಾ ಮೂರು ಮಕ್ಕಳು ಸಾಕಲ್ಲವೇ?**

[DIT 1384]

# ನಗೆಮಲಿಗೆ

ಒಬ್ಬ— ವಿಪರೀತ ಕುಡಿಯುವುದರಿಂದ ಕಷ್ಟ ಪರಿಸ್ಥಿತಿ ಬರುತ್ತದೆ ಎಂದು ನಿಮಗೆ ಎಂದೂ ಗೊತ್ತಾಗಲಿಲ್ಲವೆ?

ಇನ್ನೊಬ್ಬ— ಗೊತ್ತಾಗಿತ್ತು ಒಮ್ಮೆ. ಆಗ ನಾನು ಕುಡಿದದ್ದರ ಬಿಲ್ಲು ಕೊಡಲು ಅಸಮರ್ಥನಾಗಿದ್ದೆ.

*

ನರ್ಸ— ಡಾಕ್ಟರರ ಹೆಂಡತಿಯಾಗುವದು ನಿಜಕ್ಕೂ ಕಷ್ಟವಾಗಿರಬೇಕು.

ಇನ್ನೊಬ್ಬ ನರ್ಸ— ಹೌದು. ನಾನೀಗ ಒಂದೂವರೆ ವರ್ಷದಿಂದ ಒಬ್ಬ ಡಾಕ್ಟರರ ಹೆಂಡತಿಯಾಗಬೇಕೆಂದು ಪ್ರಯತ್ನ ಮಾಡುತ್ತಿದ್ದರೂ ಇನ್ನೂ ಸಾಧ್ಯವಾಗಲೊಲ್ಲದು.

—ಅರವಿಂದ ಜೋಶಿ

*

ಆತ— ಸ್ವಾಮಿ, ನಮ್ಮ ಅನಾಥಬಾಲಿಕಾಶ್ರಮಕ್ಕೆ ತಾವು ಉದಾರಹೃದಯದಿಂದ ಸಹಾಯ ಮಾಡಬೇಕು.

ಈತ— ಅಗತ್ಯವಾಗಿ. ನಡೆಯಿರಿ. ನಾನೂ ನಿಮ್ಮ ಸಂಗಡ ಚಂದಾ ಎತ್ತಲು ಬರುತೇನೆ.

*

ಮಗ— (ಹೊಡೆಯಲು ಕೈಯೆತ್ತಿದ ತಂದೆಗೆ) ಅಪ್ಪ, ಅಜ್ಜ ನಿನ್ನನ್ನು ಹೊಡೆಯುತ್ತಿದ್ದರೆ?

ತಂದೆ- ಹೌದು.

ಮಗ— ಮುತ್ತಜ್ಜ ಅಜ್ಜನನ್ನು ಹೊಡೆಯುತ್ತಿದ್ದರೆ?

ತಂದೆ- ಹೌದು.

ಮಗ- ಈ ಕೆಟ್ಟ 'ಅಭ್ಯಾಸವನ್ನು ನಿಲ್ಲಿಸುವ ಕಾಲ ಇನ್ನೂ ಬಂದಿಲ್ಲೇನಪ್ಪಾ?

“ನಿಮಗೆ ಹತ್ತು ಸಾವಿರ ರೂ. ಬಹುಮಾನ ಸಿಕ್ಕರೆ ಮೊಟ್ಟಮೊದಲು ಏನು ಮಾಡುತ್ತೀರಿ?”

“ಇನ್ನೇನು? ಸರಿಯಾಗಿ ಎಣಿಸಿ ನೋಡುತ್ತೇನೆ.”

*

ಈಗ ಬಹಳ ಪ್ರಸಿದ್ಧರಾಗಿರುವ ವಕೀಲರೊಬ್ಬರು ತಮ್ಮ ಪ್ರಾರಂಭದ ವಕಾಲತ್ ದಿನಗಳನ್ನು ನೆನೆದುಕೊಂಡು ಹೇಳಿದ ಅನುಭವ ಇದು:

“ಎಲೆಲ್‌ಬೀ ಮಾಡಿ ಬಂದು ಈ ಊರಲ್ಲಿ ಆಫೀಸು ತೆರೆದಿದ್ದೆನಷ್ಟೇ. ಕಾಲಧರ್ಮಕ್ಕೆ ಸರಿಯಾಗಿ ಆಫೀಸು ಡೌಲಾಗಿರಬೇಕೆಂದು ಹೊಸತಾಗಿ ಟೆಲಿಫೋನ್ ಸಹಿತ 'ಹಾಕಿದ್ದೆ. ಆವೊತ್ತು ಮುಂಜಾನೆ ಆಫೀಸಿನಲ್ಲಿ ಬಂದು ಕುಳಿತ ಸ್ವಲ್ಪ ಹೊತ್ತಿನಲ್ಲಿ ನನ್ನ ಬಾಗಿಲ ಮುಂದೆ ನೆರಳು ಹಾದಹಾಗಾಯಿತು. ಮೊದಲನೇ ಕಕ್ಷಿಗಾರ ಅಂದುಕೊಂಡು ಅವನ ಮೇಲೆ ಇಂಪ್ರೆಶನ್ ಆಗಲಿ ಅಂತ ಟೆಲಿಫೋನ' ಎತ್ತಿ ಕಾಲ್ಪನಿಕ ಕಕ್ಷಿಗಾರನೊಡನೆ ಸಂಭಾಷಣೆ ಪ್ರಾರಂಭಿಸಿದೆ: ‘ಯಾರು, ಕೃಷ್ಣೇಗೌಡರೆ? ಹೌದು ಹೌದು ನಾನೇ ಮಾತಾಡ್ತಿರೋದು. ನಿಮ್ಮ ವಕಾಲತ ಫಾರ್ಮು ಬಂತು. ನೋಡಿ, ಬಹಳ ಕೆಲಸಾ ಇದೆ. ಜಿ—ಕಂಪನಿಯದು ದೊಡ್ಡ ಕೇಸು ವಹಿಸಿಕೊಂಡಿದ್ದೇನೆ. ರಾಮಪ್ಪನೋರು, ಇದೇ ಈಗ ಫೋನ್ ಮಾಡಿ ತಮ್ಮ ವಾರಸಾ ಕೇಸು ತಗೊಳ್ಳಿ ಅಂತ ಒತ್ತಾಯ ಮಾಡಿದ್ರು. ಆಗೊಲ್ಲ ಅಂದೆ. ನಿಮ್ಮದನ್ನ ಹೇಗಾದರೂ ನಿಸ್ತರಿಸಿ ಕೊಡ್ತೇನೆ—’ ಹೀಗೇ ಐದು ನಿಮಿಷ ಮಾತಾಡಿ ರಿಸೀವರ್ ಕೆಳಗಿಟ್ಟೆ. ಅಷ್ಟರಲ್ಲಿ ಕಕ್ಷಿಗಾರ ಒಳಗೆ ಬಂದು ನಿಂತಿದ್ದ. ನನ್ನ ಟೆಲಿಫೋನ್ ಸಂಭಾಷಣೆ ಮುಗಿದ ಕೂಡಲೆ ಹೇಳಿದ: ‘ನಮಸ್ಕಾರ ಸಾರ್. ಟೆಲಿಫೋನ್ ಇಲಾಖೆ ನೌಕರ ನಾನು. ನಿಮ್ಮ ಟೆಲಿಫೋನ್ ಕನೆಕ್ಟ ಮಾಡೋಕೆ ನನ್ನ ಕಳಿಸಿದ್ದಾರೆ’ ಎಂದ.”

"ಅಹಾ ! ಪ್ರಿಯೆ, ನಿನ್ನ ಬಿಟ್ಟು ಮನೆಗೆ ಹೇಗೆ ಹೋಗಲಿ " ?

"೨ನೇ ನಂಬರ ಸಿಟಿ ಬಸ್ಸಿನಿಂದ ಅಥವಾ ನಡೆದುಕೊಂಡು."

*

" ಇಷ್ಟೊತ್ತು ಎಲ್ಲಿ ಹೋಗಿದ್ದೆ ? " ಮಾಲಿಕ ಕೇಳಿದ.

"ಹೇರ್ ಕಟ ಮಾಡಿಸಿಕೊಳ್ಳೋಕ್ಕೆ," ಎಂದ ನೌಕರ.

" ಕೆಲಸದ ಸಮಯದಲ್ಲಿ ಹೇರ್ ಕಟ್ ಮಾಡಿಸಿಕೊಳ್ಳೋಕೆ ಹೇಗೆ ಹೋದೆ ? " ಎಂದ ಮಾಲಿಕ ಜೋರಾಗಿ.

" ಕೆಲಸದ ಸಮಯದಲ್ಲೇ ನನ್ನ ಕೂದಲು ಬೆಳದದ್ದಲ್ವೇ?" ಎಂದ ನೌಕರ ಶಾಂತವಾಗಿ.




"...ನನಗೆ ಕಾಣಿಸುವುದಿಲ್ಲ...
ನೀವು ದಯವಿಟ್ಟು ಇಲ್ಲಿ...
ಕುಳಿತು ಕೊಳ್ಳುತ್ತೀರಾ...!!"

" ಈ ಮನೆಯ ನೆರೆಹೊರೆಯವರಲ್ಲಿ ಬೊಗಳುವ ನಾಯಿಗಳಿವೆಯೆ ? "

"ಇಲ್ಲ ರಾಯರಿ."

" ಸರಿ ಹಾಗಾದರೆ. ಈ ಮನೆಯನ್ನು ನನಗೆ ಬಾಡಿಗೆಗೆ ಕೊಡಿ. ನನ್ನ ಬಳಿ ಇರುವ ಎರಡು ನಾಯಿಗಳು ವಿಪರೀತ ಬೊಗಳುತ್ತವೆ. ಅದಷ್ಟನ್ನೇ ಕೇಳಿ ಕಿವಿ ಗಡಚಿಕ್ಕಿದೆ. ಮೂರನೆ ನಾಯಿಯ ಬೊಗಳುವಿಕೆ ಕೇಳಿದರೆ ನಾನು ಕಿವುಡಾಗಿ ಹೋದೇನು."

*

ಮಾಜಿಸ್ಟ್ರೇಟ- ಅಲ್ಲೊ, ಈಗ ಮೂರು ವರ್ಷಗಳ ಹಿಂದೆ ಒಂದು ಕೋಟು ಕದ್ದಿದ್ದಕ್ಕಾಗಿ ನನ್ನ ಮುಂದೆ ಬಂದಿರಲಿಲ್ಲವೆ? ಈಗ ಮತ್ತೆ ಕೋಟು ಕದ್ದದ್ದಕ್ಕಾಗಿ—

ಆರೋಪಿ- ಏನು ಮಾಡಬೇಕು ಸ್ವಾಮಿ. ಒಂದು ಕೋಟು ಎಷ್ಟು ವರ್ಷ ಅಂತ ಬಾಳುತ್ತದೆ?

*

ಹೊಸ ಆಫೀಸ್ ಸುಪರಿಂಟೆಂಡೆಂಟ್ ಆರು ತಿಂಗಳು ಕೆಲಸ ಮಾಡಿದ ಮೇಲೆ ಕೆಲಸಗಾರರಲ್ಲಿ ತಾನು ಏನೂ ಜನಪ್ರಿಯನಾಗಿಲ್ಲವೆಂದು ಕಂಡುಕೊಂಡು ಒಬ್ಬ ಹಳೇ ಗುಮಾಸ್ತೆಯನ್ನ ಒಂದು ಬದಿಗೆ ಕರೆದು ಗುಟ್ಟಾಗಿ ಕೇಳಿದ.

" ರಾಮಯ್ಯನೋರೆ, ನಿಮ್ಮನ್ನ ಒಂದು ವಿಷಯ ಕೇಳಬೇಕೂಂತ ಕರೆದೆ. ಈ ಆಫೀಸಿನಲ್ಲಿ ಮಾತ ನನ್ನ ಕಂಡರೆ ಬಹಳ ಜನಕ್ಕೆ ಆಗೋಲ್ಲ ಅನ್ನಿಸ್ತಾ ಇದೆ. ಇದಕ್ಕೆ ಕಾರಣ ಏನು ಇರಬಹುದು? ನಾನು ಸುಪರಿಂಟೆಂಡೆಂಟ್ ಆಗಿದ್ದ ಹಿಂದಿನ ಆಫೀಸಿನಿಂದ ನಾನು ಬಿಟ್ಟು ಬಂದಾಗ ಕೆಲಸಗಾರರೆಲ್ಲ ಸೇರಿ ನನಗೆ ಬೀಳ್ಕೊಡೋ ಸಮಾರಂಭದಲ್ಲಿ ಬೆಳ್ಳಿ ತಟ್ಟೆ ಕಾಣಿಕೆ ಕೊಟ್ಟರು."

" ಅದೇನ್ಹೇಳ್ತೀರೀ ಸ್ವಾಮಿ" ಎಂದರು ರಾಮಯ್ಯನೋರು. " ನೀವು ಇಲ್ಲಿಂದ ಬಿಟ್ಟು ಹೋಗೋದಾದರೆ ಬಂಗಾರದ ತಟ್ಟೆ ಕೊಟ್ಟು ಕಳಿಸೋಕೆ ಸಿದ್ಧರಾಗಿದೀವಿ."

ರೋಮಾಂಚಕಾರಿಯಾದ ಬೇಟೆಯ ಕಥೆ

# ಆಯುಷ್ಯವೊಂದಿದ್ದರೆ

* ಕಾಕೆಮಾನಿ

ಘೋರಕಿಷ್ಪಿನ ದಟ್ಟವಾದ ಬಿದಿರುಮೆಳೆಗಳ ಮಧ್ಯೆ ಹರಿವ ಕಿರುದಾರಿಯಲ್ಲಿ ಸಿದ್ಧ ಜಾಗರೂಕನಾಗಿ ನಡೆಯುತ್ತಿದ್ದನು. ದಾರಿಯ ಇಬ್ಬದಿಯಲ್ಲಿ ಸೊಂಪಾಗಿ ಬೆಳೆದ ದಟ್ಟವಾದ ಹುಲ್ಲು ಆಳೆತ್ತರ ನಿಂತಿತ್ತು. ಸಿದ್ಧ ತನ್ನ ಕೈಯಲ್ಲೊಂದು ಕತ್ತಿ ಹಿಡಿದು, ಸುತ್ತುಮುತ್ತಲೂ ಸೂಕ್ಷ್ಮದೃಷ್ಟಿ ಬೀರಿ, ಏನನ್ನೋ ಹುಡುಕಿ ನಡೆಯುತ್ತಿದ್ದ.

ಸಿದ್ಧ ಮತ್ತು ಆತನ ಸಂಬಂಧಿಕರು ಫಾರೆಸ್ಟ್ ಇಲಾಖೆಯ ಕೂಲಿಕಾರರಾಗಿದ್ದರು. ಜನವಸತಿಯೇ ಇಲ್ಲದ ಆ ಫಾರೆಸ್ಟಿನಲ್ಲಿ ಸಿದ್ಧನ ಪಂಗಡವೇ ಪ್ರತಿ ಕೆಲಸಕ್ಕೂ ಬೇಕಿದ್ದರಿಂದ, ಫಾರೆಸ್ಟ್ ಅಧಿಕಾರಿಗಳು ಅವರಿಗೆ ಸಕಲ ಸವಲತ್ತುಗಳನ್ನು ಕೊಟ್ಟಿದ್ದರು. ಪರವಾನೆಯಿಲ್ಲದೆ ಫಾರೆಸ್ಟಿನಲ್ಲಿ ಶಿಕಾರಿಯಾಡುವದೆಂದರೆ ಈ ಪಂಗಡವೊಂದು ಮಾತ್ರ. ಸಿಕ್ಕಿದ ಬೇಟೆಯ ಕೆಲವಂಶವನ್ನು ಅಧಿಕಾರಿಗಳಿಗೆ ಉಣಿಸಿದರೆ ತೀರಿತು. ಇಷ್ಟಬಂದಾಗ ಫಾರೆಸ್ಟ್ ಅಧಿಕಾರಿಗಳಿಂದ ಬೇಕಾದ ಕೋವಿ, ತೋಟಿಗಳನ್ನು ಪಡೆದು, ಬೇಟೆಯಾಡುವ ಸಾಂಪ್ರದಾಯಿಕ ಹಕ್ಕನ್ನು ಸಿದ್ಧನ ಪಂಗಡದವರು ಪಡೆದುಕೊಂಡಿದ್ದರು. ನಾಯಿ, ಜನಬಲದೊಡನೆ ಪ್ರತಿನಿತ್ಯ ಬೇಟೆಯಾಡುವುದು ನಡೆಯುದ್ದರಿಂದ, ಪ್ರಾಣಿ ಬರುವ ಸ್ಥಳ, ಹಣ್ಣು ಮರಗಳಡಿಯಲ್ಲಿ ಅವಿತು ಕೊಂಡು (ಮರಸು ಬೇಟೆ) ಬೇಟೆಯಾಡುವುದೇ ಹೆಚ್ಚು.

ಅಂದು ರಾತ್ರಿ ಸಿದ್ಧ ಮತ್ತು ಆತನ ಭಾವ ಮೈದುನರಿಬ್ಬರೂ ಮರಸುಬೇಟೆಗೆ ಬಂದಿದ್ದರು. ಕೂತ ಕೆಲವೇ ನಿಮಿಷಗಳಲ್ಲಿ ಕೋಣನಷ್ಟು ಗಾತ್ರವಿರುವ ಒಂದು ಕಾಡುಹಂದಿಯು ಇವರ ಮುಂದೆ ಬಂದು ನಿಂತಿತು. ಸಿದ್ಧ, ಗುರಿನೋಡಿ ಹಂದಿಯ ತಲೆಗೆ ಗುಂಡು ಹೊಡೆದಿದ್ದನು. ಗುಂಡು ರಭಸದಿಂದಲೇ ಸಿಡಿಯಿತು. ಆದರೆ ಹಂದಿಯು ಮಾತ್ರ ಅಲ್ಲಿ ಬೀಳಲಿಲ್ಲ

"ಈಗಿನ ತೋಟಿಗಳೇ ಹಾಳು, ಮೊದಲಿನವುಗಳಾಗಿದ್ದರೆ ಹಂದಿ ಅಲುಗುತಿತ್ತೆ? ಎಲ್ಲಾ ನಕಲಿ ಮಾಲು"ಗಳೆಂದು ತನ್ನಲ್ಲೇ ಗೊಣಗಿದ-ಸಿದ್ಧ. ರಾತ್ರಿ ಹೊತ್ತಿನಲ್ಲಿ ಮತ್ತೇನೂ ಮಾಡಲು ಸಾಧ್ಯವಿಲ್ಲದ್ದರಿಂದ ಇಬ್ಬರೂ ಮನೆಗೆ ವಾಪಾಸಾದರು.

ಬೆಳಿಗ್ಗೆದ್ದು ಸ್ಥಳ ಪರೀಕ್ಷೆ ಮಾಡಿದಾಗ, ಹಂದಿಗೆ ಗುಂಡು ತಗಲಿತ್ತು. ರಕ್ತವು ಹೆಪ್ಪುಗಟ್ಟಿಬಿದ್ದಿತ್ತು. ಆದರ ರಕ್ತದ ಕಲೆಯನ್ನನುಸರಿಸಿ, ಸಿದ್ಧ ಹಂದಿಯನ್ನು ಹುಡುಕುತ್ತಾ ಜಾಗ್ರತೆಯಿಂದ ಮುಂದುವರಿದಿದ್ದ. ಕಾಡು ಹಂದಿಯು ಗಾಯಗೊಂಡಿದ್ದರೆ, ಪ್ರತ್ಯಕ್ಷ ಯಮನನ್ನು ಕೆಣಕಿ ಹಿಂಬಾಲಿಸಿದಂತೆಂದು ಸಿದ್ಧ ಬಲ್ಲ. ಇಬ್ಬರೂ ಬೇರೆ ಬೇರೆ ದಾರಿಯಿಂದ ಮುನ್ನ-

ನಡೆಯುತ್ತಿದ್ದರು.

ಸಿದ್ದನೊಬ್ಬನೇ ತುಂಬಾ ದೂರ ನಡೆದಿದ್ದ ಹಂದಿಯು ಏಳುತ್ತಾ, ಬೀಳುತ್ತಾ ಮುಗ್ಗರಿಸುತ್ತಾ ಒಂದು ದಟ್ಟವಾದ ಪೊದೆಗೆ ನುಗ್ಗಿತ್ತು. ಸಿದ್ದ ನುಗ್ಗಿ ನುಸುಳಿ, ಹೋಗುತ್ತಿದ್ದಾಗ, ಆತನಿಂದ ಕೇವೇ ಗಜಗಳಲ್ಲಿ ಯಾವುದೋ ಪ್ರಾಣಿಯು ಗೂರಲು ಧ್ವನಿ ಕೇಳಿತು. ಹಂದಿಯೇ ಆರಬಹುದೆಂದು ಹೆದರಿದ ಸಿದ್ದ, ಹಿಂದಕ್ಕೆ ಕೆಲವು ಗಜಗಳಷ್ಟು ಕಳ್ಳ ಹೆಜ್ಜೆ ಹಾಕಿ, ಹತ್ತಿರದ ಮರವನ್ನೇರಿದ. ಮರವೇರುವಾಗ ಮುರಿದ ಒಣಕು ಕಡ್ಡಿಗಳ ಶಬ್ದಕ್ಕೆ, ಆಳೆತ್ತರದ ಜಾಂಬವಂತ ಹಿಂಗಾಲಿನಲ್ಲಿ ನಿಂತು ಸಿದ್ದನನ್ನು ನೋಡುತಿತ್ತು. ಸಿದ್ದನ ಮೈ ಜುಮ್ಮೆಂದಿತು. ಮರದ ಮೇಲಮೇಲಕ್ಕೇರಿ ಸುರಕ್ಷಿತ ಸ್ಥಳವನ್ನು ಆತ ಹುಡುಕತೊಡಗಿದ. ಭಾವಮೈದುನನಿಗೆ ಕೋವಿಕೊಟ್ಟು ತಾನು ಬರಿಗೈಯಲ್ಲಿ ಬಂದದ್ದೇ ತಪ್ಪಾಯಿತೆಂದುಕೊಂಡ.

ಹಿಂಗಾಲಲ್ಲಿ ನಿಂತು ನೋಡುತ್ತಿದ್ದ ಕರಡಿಯು ತನ್ನ ಮರಿಗಳೊಡನೆ ಚಕ್ಕಂದವಾಡುತ್ತಿತ್ತು. ಸ್ವಭಾವತಃ ಕರಡಿಗಳು ಮನುಷ್ಯದ್ವೇಷಿಯಲ್ಲ. ಮನುಷ್ಯರನ್ನು ಕಂಡರೆ ಹೂಂಕರಿಸಿ ಓಡುವ ಕರಡಿಗಳನ್ನು ಸಿದ್ದ ಅದೆಷ್ಟೋ ಕಂಡಿದ್ದ. ಹಾಗೆಯೇ ಮರಿಹಾಕಿದ ಕರಡಿಗಳು ತುಂಬಾ ಭಯಂಕರವೆಂದೂ ತಿಳಿದಿದ್ದ. ಇಂದು, ಮರಿ ಕರಡಿಯು ಕೋವಿಯಿಲ್ಲದೆ ಅಸಹಾಯಕ ಸ್ಥಿತಿಯಲ್ಲಿರುವಾಗಲೇ ಎದುರು ಬೀಳಬೇಕೆ?

ಕರಡಿಯು ಸಿದ್ದನನ್ನು ದುರದುರನೆ ನೋಡಿ, ಚಿಂ ಚಿಂಮ್ಮೆಂದು ಶಬ್ದಮಾಡಿ, ಮರಿಗಳಿಗೆ ಕರಡಿ ಭಾಷೆಯಲ್ಲೇನೊ ಹೇಳಿದಂತೆ ಮಾಡಿ, ನಾಗಾಲೋಟದಿಂದ ಸಿದ್ದ ಹತ್ತಿದ ಮರದಡಿಗೆ ಬಂತು. ಸಿದ್ದನ ಜಂಘಾಬಲವೇ ಉಡುಗಿತು. ತನ್ನ ಶಕ್ತಿಮೀರಿ ಕೂಗಿಕೊಂಡು ಕರಡಿಯನ್ನು



ಹೆದರಿಸಲು ನೋಡಿದ. ಆದರೆ ಆ ಕರಡಿಯು ಯಾವುದೇ ಬೆದರಿಕೆಗೆ ಮಣಿಯದೆ ಮರವನ್ನು ಸರಸರನೆ ಏರತೊಡಗಿತು. ತನ್ನ ಭಾವ ಮೈದುನನಿಗೆ ಕೇಳಲಿ, ಕೋವಿ ತರಲಿಯೆಂದು ಮತ್ತೂ ಕೂಗಿಕೊಂಡ.

ಕರಡಿಯು ಮರಹತ್ತಿ ನಿಮಿಷಮಾತ್ರದಲ್ಲಿ ಸಿದ್ಧನು ಕೂತಿದ್ದ ಕೊಂಬೆಯ ಮೇಲೆಯೇ ಬಂತು. ಸಿದ್ಧ ತನಗುಳಿಗಾಲವಿಲ್ಲವೆಂದು ಕೊಂಡ. ತನ್ನ ಕತ್ತಿಯನ್ನು ಸೊಂಟದಿಂದೆಳೆದು ಹಿಡಿದುಕೊಂಡ. ಆದರೂ ಅದನ್ನೆದುರಿಸಲು ಆತನಿಗೆ ಧೈರ್ಯಬಾರದು. ಸಿದ್ಧನಿಗೆ ಮತ್ತಾವ ದಾರಿಯೂ ಕಾಣದಾಯಿತು. ಕರಡಿಯು ಹೂಂಕರಿಸುತ್ತಾ ಸಿದ್ಧನ ಮೇಲೆರಗಲು ಯತ್ನಿಸುತ್ತಿತ್ತು.

ಸಿದ್ಧ, ಜೀವದಾಸೆಯಿಂದ ಕೊಂಬೆಯ ತುದಿಗೆ ಸರಿದು, ಒಮ್ಮೆಗೆ ಇಪ್ಪತ್ತು ಅಡಿ ಎತ್ತರದಿಂದ ನೆಲಕ್ಕೆ ಧುಮುಕಿದ. ಆತನಿಗೆ ಕೆಳಗೆ ಬಿದ್ದು, ಓಡುವುದೊಂದೇ ದಾರಿಯಿತ್ತು. ಬಿದ್ದವನು ಏಳಲು ಅಷ್ಟು ಸುಲಭವಿರಲಿಲ್ಲ. ಎತ್ತರದಿಂದ ಆತುರದಲ್ಲಿ ಹಾರುವಾಗ ಕೆಳಗಿದ್ದ ಮುಳ್ಳು ಪೊದೆಯನ್ನು ಕಾಣಲಿಲ್ಲ. ಬಿದ್ದ ರಭಸದಿಂದ ಚೇತರಿಸಿಕೊಂಡು, ಮುಳ್ಳಿಗೆ ತನ್ನ ದಪ್ಪವಾದ ಕಾಲುಕೋಟು ಸಿಕ್ಕಿದ್ದನ್ನು ಬಿಡಿಸಿಕೊಳ್ಳಲು ಅಷ್ಟು ಸುಲಭವಾಗಲಿಲ್ಲ. ಅಂತು, ಸಿದ್ಧ ಸರ್ವ ಶಕ್ತಿಯಿಂದೆದ್ದು ಓಡತೊಡಗಿದ. ಅಷ್ಟರಲ್ಲಿ ಕರಡಿಯೂ ಕೆಳಗೆ ಧುಮುಕಿತ್ತು. ನಾಲ್ಕಾರು ಗಜಗಳ ದೂರ ಓಡುವಷ್ಟರಲ್ಲಿ ಸಿದ್ಧನ ಮೇಲೊಂದು ಪರ್ವತವೇ ಬಿದ್ದಂತಾಯಿತು. ಕರಡಿಯು ಸಿದ್ಧನನ್ನು ನೆಲಕ್ಕೆ ಕೆಡವಿಹಾಕಿತು. ತನ್ನ ಕೈಯಲ್ಲಿದ್ದ ಕತ್ತಿಯಿಂದ ಆತ ಅಸಹಾಯಕ ಸ್ಥಿತಿಯಲ್ಲಿ ಕರಡಿಯ ಮುಖದತ್ತ ಬೀಸಿದ. ಆದರೆ, ಅದಕ್ಕೆ ಅದೇನೂ ಆದಂತಿರಲಿಲ್ಲ. ಕೆಳಗೆ ಬಿದ್ದ ಸಿದ್ಧನ ಹೊಟ್ಟೆಯನ್ನು ತನ್ನ ನೀಳವಾದ ಉಗುರುಗಳಿಂದ ಪರಚಿ, ಬಗೆಯಿತು. ಕ್ರೋಧದಿಂದ ಸಿದ್ಧನ ತಲೆಬುರುಡೆಗೆ ಬಾಯಿಹಾಕಿ ಕಡಿಯಿತು.

ಅಷ್ಟರಲ್ಲಿ ಸಿದ್ಧನ ಕೂಗನ್ನು ಕೇಳಿದ ಭಾವ ಮೈದುನ ಓಡುತ್ತಾ ಬಂದ. ಈ ವಿಪರೀತವನ್ನು ಕಂಡು, ಕೈಯಲ್ಲಿದ್ದ ಕೋವಿಯಿಂದ ಕರಡಿಯತ್ತ ಗುಂಡಿಕ್ಕಿದ. ಕರಡಿಗೆ ಗುಂಡು ತಗಲಿತೋ ಇಲ್ಲವೊ ಕರಡಿ ವಿಕಾರಧ್ವನಿ ಮಾಡಿ ಕಾಡು ನುಗ್ಗಿತು.

ಸಿದ್ಧ ಪ್ರಜ್ಞಾಹೀನನಾಗಿದ್ದ. ಮೈಯೆಲ್ಲಾ ರಕ್ತಮಯವಾಗಿತ್ತು. ಹೊಟ್ಟೆಯಲ್ಲಿ ದೊಡ್ಡ ದೊಡ್ಡ ಗಾಯಗಳಾಗಿದ್ದುವು. ತಲೆಯ ಬುರುಡೆಯ ಒಂದು ಭಾಗ ಒಡೆದು ಹೋಗಿ, ಮಿದುಳು ಕಾಣುತಿತ್ತು. ಭಾವ ಮೈದುನನಿಗೆ ದಿಕ್ಕೇ ತೋಚದಾಯಿತು. ಆತುರಾತುರವಾಗಿ ಸಿದ್ಧನನ್ನು ಹೆಗಲಿಗೇರಿಸಿಕೊಂಡು ಸುಮಾರು ಒಂದು ವರೆ ಮೈಲಿನಷ್ಟು ದೂರದಲ್ಲಿರುವ ಮನೆಗೆ

ಹೊತ್ತ

ಈ ವಿಚಾರ ತಿಳಿದ ಫಾರೆಸ್ಟ್ ಅಧಿಕಾರಿಗಳು ಸಿದ್ಧನನ್ನು ಸುಮಾರು ಏಳು ಮೈಲು ದೂರ ವಿರುವ ಹತ್ತಿರದ ಆಸ್ಪತ್ರೆಗೆ ಹೊರಿಸಿದರು

ಆಸ್ಪತ್ರೆ ಸೇರಿ ಸಿದ್ಧ ಎರಡು ವಾರಗಳತನಕ ಪ್ರಜ್ಞಾಹೀನನಾಗಿಯೇ ಉಳಿದಿದ್ದ. ಈತನ ಸ್ಥಿತಿಯನ್ನು ನೋಡಿ ಡಾಕ್ಟರುಗಳು ಇಂದೋ ನಾಳೆಯೋ ಎಂಬ ಉದಾಸೀನಭಾವ ತಳೆದಿದ್ದರು ಅಂತೂ ಕೊನೆಗಾಲ ಸಮೀಪಿಸಿರುವುದರಿಂದ ಬಂಧುಬಳಗದವರು ಆತನನ್ನು ಅವನ ಮನೆಗೇ ಹೊತ್ತರು.

ಸಿದ್ಧ ಕುರುಬರ ಜಾತಿಯವನಿದ್ದು ಅವನ ಪಂಗಡದವರು ಇಂದೂ ಕೂಡ ಯಾವುದೇ ಕಾಯಿಲೆ ಕಸಾಲೆಗಾಗಿ ಆಸ್ಪತ್ರೆಯವರನ್ನು ನಂಬಿಕೊತಿಲ್ಲ. ಅವರಲ್ಲಿ ಅನೇಕ ಸಿದ್ಧೌಷಧ ಹಸ್ತ, ತಂತ್ರಮಂತ್ರ ಪ್ರವೀಣರು ಈಗಲೂ ಇದ್ದಾರೆ.

ಈ ಜಾತಿಯವರು ಯಾವನೇ ಒಬ್ಬನ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದರೆ ಔಷಧ ಪ್ರಯೋಗ, ತಂತ್ರಮಂತ್ರಗಳಿಂದಲೇ ಸಾಧಿಸುತ್ತಾರೆ. ಒಮ್ಮೆ ಒಬ್ಬ ಗಾರ್ಡನ ಮೇಲೆ ಕೋಪಗೊಂಡ ಕುರುಬನೊಬ್ಬ ಇಂತಹ ತಂತ್ರಮಂತ್ರ ಪ್ರವೀಣನಿಂದ ದೊಡ್ಡ ದೊಡ್ಡ ಮುಳ್ಳುಗಳನ್ನು (ಕಕ್ಕಡೆ ಮುಳ್ಳು) ಮಂತ್ರಿಸಿ, ಆ ಗಾರ್ಡನು ತಿರುಗುವ ದಾರಿಯಲ್ಲಿ ಹುದುಗಿ, ಬೇಕಾದ ಕ್ರಮ ಮಾಡಿದ್ದರಿಂದ ಗಾರ್ಡನ ಶರೀರವೆಲ್ಲ ಮುಳ್ಳಿನಿಂದ ಚುಚ್ಚುವಂತೆ ಭಾಸವಾಗಿ-ಅನೇಕ ವೈದ್ಯರು ಡಾಕ್ಟರುಗಳನ್ನು ನೋಡಿ ನೀರಿನಂತೆ ಹಣ ವ್ಯಯಿಸಿದರೂ, ಸಾಧ್ಯವಾಗದೆ ಆ ಕುರುಬನು ಮಾಡಿದ ತಂತ್ರಮಂತ್ರಕ್ಕೆ ಸರಿಯಾದ ವಿರೋಧ ಕ್ರಮವನ್ನು ಬೇರೆ ಕುರುಬರಿಂದ ಮಾಡಿಸಿ ಬದುಕಿಕೊಂಡ. ಇದನ್ನು ಯಾರೂ ಸುಲಭದಲ್ಲಿ ನಂಬದಿದ್ದರೂ ಈಗಲೂ ಇಂತಹ ಮಾಂತ್ರಿಕ ಕುರುಬರಿದ್ದಾರೆನ್ನುವುದು ಸತ್ಯ.

ಅಂತಹ ಮಾಂತ್ರಿಕ, ಸಿದ್ಧೌಷಧ ಹಸ್ತ ಕುರುಬನು ಆರೈಕೆಗೆ ನಿಂತ ಎರಡು ವಾರಗಳಲ್ಲೇ ಎಲ್ಲರೂ ಆಶ್ಚರ್ಯ ಪಡುವಂತಹ ಸ್ಥಿತಿಯಲ್ಲಿ ಸಿದ್ಧ ಚೇತರಿಸಿಕೊಂಡ. ಆತನ ಒಡೆದ ತಲೆಬುರುಡೆಯ ಭಾಗಕ್ಕೆ ಔಷಧಿ ತುಂಬಿಸಿ ಶುಶ್ರೂಷೆ ಮಾಡಿದ. ಹೊಟ್ಟೆಯ ಗಾಯಗಳೆಲ್ಲಾ ಮಾಯ್ದು ಸಿದ್ಧನು ಕೆಲವೇ ತಿಂಗಳಲ್ಲಿ ತಿರುಗಾಡಹತ್ತಿದ—

ಸಿದ್ಧ ಇಂದೂ ಜೀವಂತವಿರುವ ಅರುವತ್ತೈದು ವರ್ಷದ ಮುದುಕನಿದ್ದಾನೆ. ತಲೆ ಬುರುಡೆಯ ಒಂದು ಭಾಗವನ್ನು ಕಳೆದ ಕೊಂಡಿದ್ದರೂ, ಬುದ್ಧಿ ಪಲ್ಲಟವಾಗದೆ, ಸಾಮಾನ್ಯರಂತೆಯೇ ಶ್ರಮಜೀವಿಯಾಗಿ ಜೀವಿಸುತ್ತಿದ್ದಾನೆ. ತಲೆಬುರುಡೆಯ ಭಾಗ ಹೋದ ಸ್ಥಳದಲ್ಲಿ ಒಂದು ಮಿದು ಪರದೆ ಬೆಳೆದು ಮುಚ್ಚಿದ್ದರೂ, ಗಾಯವು ಮಾಸದೆ ಹತ್ತಿರ ಸುಳಿದವರಿಗೆ ದುರ್ವಾಸನೆ ಬಡಿಯುತ್ತದೆ.

ತಲೆ ಬುರುಡೆ ಒಡೆದರೆ ಮನುಷ್ಯ ಬದುಕುತ್ತಾನೆಯೆ? ಒಡೆದು ಹೋಳಾದ ಬುರುಡೆಯನ್ನು ತನ್ನ ಔಷಧಗಳಿಂದ ಜೀವಂತವಿರುವಂತೆ ಮಾಡಿದ ಕಾಡಾಡಿ ಕುರುಬನ ವೈದ್ಯಕೀಯ ಕೈಚಳಕ, ನಮ್ಮ ಸುಸಂಸ್ಕೃತರೆನಿಸಿಹ ಆಧುನಿಕ ತಜ್ಞ ಡಾಕ್ಟರುಗಳನ್ನೂ ಬೊಟ್ಟು ಕಚ್ಚುವಂತೆ ಮಾಡಿವೆ ಈ ಕಲಿಯುಗದಲ್ಲಿ ಯಾವುದೂ ಅಸಾಧ್ಯವಲ್ಲವೆನುವಂತೆ ಸಿದ್ಧ ಮರಣವನ್ನು ಗೆದ್ದು ಜೀವಿಸುತ್ತಿದ್ದಾನೆ

ಮೂವತ್ತು ವರ್ಷಗಳ ಹಿಂದೆ ನಡೆದು ಹೋದ ಈ ಘಟನೆಯನ್ನು ಜ್ಞಾಪಿಸಿಕೊಂಡು ಸಿದ್ಧ ಆಯುಷ್ಯವೊಂದಿದರೆ ಕರಡಿಯಲ್ಲ, ಪ್ರತ್ಯಕ್ಷ ಯಮನೇ ಎಗರಿ ಬಿದ್ದರೂ ಸಾಯಲಾರೆನೆಂದು ನಗುತ್ತಾ ಹೇಳುತ್ತಾನೆ

ಇದೊಂದು ಶರೀರ ಶಾಸ್ತ್ರಜ್ಞರಿಗೊಂದು ಸವಾಲೇ ಹೌದು! ಆಯುಷ್ಯವೊಂದಿದ್ದರೆ ಕೊರಡು ಕೊನರುವುದಯಾ! ಅಲ್ಲವೆ? •

• • • • • • • • • • • • • • • •

—ವಸಂತ ಕವಲಿ




**ಪಾತ್ರಸೃಷ್ಟಿ**

| | |
|---|---|
| ಸೂತ್ರಧಾರ | ಭರತಮುನಿ |
| ನಟಿ | ಇಂದ್ರ |
| ಚಿತ್ರಲೇಖಾ | ವಿಷ್ಣು |
| ಉರ್ವಶಿ | ಲಕ್ಷ್ಮಿ |
| ತಿಲೋತ್ತಮೆ | ಸರಸ್ವತಿ |
| ರಂಭಾ | |

ಮತ್ತು ದೇವದಾನವ ಪಾತ್ರಧಾರಿಗಳಾದ ನಟನಟಿಯರು

ಸೂತ್ರಧಾರ : (ಪ್ರವೇಶಿಸಿ, ಸಭಿಕರಿಗೆ ನಮಿಸಿ) ಆರ್ಯಮಹಾಶಯರಲ್ಲಿ ವಿಜ್ಞಾಪನೆ— (ಹಿನ್ನೆಲೆಯಲ್ಲಿ ಗಾಜೊಡೆದ ಸದ್ದು) ಅಯ್ಯೊ, ಇದೇನು? ನಾನಿಲ್ಲಿ ವಿಜ್ಞಾಪನೆ ಗೈಯುತ್ತಿರುವಲ್ಲಿ ಅಲ್ಲಿ ಸದ್ದೇನೋ ಕೇಳಿಬರುತ್ತಿದೆ! ಆಗಲಿ, ನೋಡಿ ಬರುವೆ. (ರಂಗದ ಪಕ್ಕಕ್ಕೆ ಹೋಗಿ ನೋಡಿ ಬಂದು) ಓಹೋ, ತಿಳಿಯಿತು. ಸರ್ವಾಲಂಕಾರ ಭೂಷಿತೆಯಾದರೂ ಸುಂದರಿಯಾಗಿ ಕಾಣಲಿಲ್ಲವೆಂಬ ಕಾರಣಕ್ಕಾಗಿ ಕನ್ನಡಿಯನ್ನೇ ಒಡೆದುಹಾಕಿದಳು ನನ್ನ ಪ್ರಿಯತಮೆ! (ಪಕ್ಕದೊಳಕ್ಕೆ ನೋಡುತ್ತ) ಆರ್ಯೆ, ಅಂತೂ ಅಲಂಕಾರವೇನೋ ಪೂರ್ತಿಯಾಯಿತಲ್ಲ; ಹೀಗೆ ಬಾ.

ನಟಿ : (ಮುಖ ಮುದುರಿಕೊಂಡು ಬರುತ್ತ) ಏನು ಆರ್ಯನೆ? ಅಪ್ಪಣೆಯಾಗಲಿ.

ಸೂತ್ರಧಾರ : ಇದು ನನ್ನ ಅಪ್ಪಣೆ: ಹುಬ್ಬುಗಂಟನ್ನು ಬಿಚ್ಚು. ಸರಿ. ಎಲ್ಲಿ, ಸ್ವಲ್ಪ ನಗೆಯನ್ನರಳಿಸು? ಹಾಽಽಗೇ! ಇನ್ನು ನಿನ್ನನ್ನಿಲ್ಲಿಗೆ ಕರೆದ ಕಾರಣ—

ನಟಿ : ಗೊತ್ತೇ ಇದೆ: ರಸಿಕ ರಂಜನೆಗಾಗಿ ಯಾವುದಾದರೊಂದು ನಾಟಕ ಪ್ರಯೋಗವನ್ನು ಹಮ್ಮಿಕೊಂಡಿರಬೇಕು.

ಸೂತ್ರಧಾರ : ಭಳಿರೆ! ಸರಿಯಾಗಿ ಊಹಿಸಿದೆ ಇದೊಂದು ಸಲ!

ನಟಿ : ಅದೇನು ಕಷ್ಟ? ನಿಮಗೆ ಮಾಡಬರುವ ಕೆಲಸವೇ ಅದೊಂದು: ನಾಟಕ!

ಸೂತ್ರಧಾರ : ಅನುಗೃಹೀತನಾದೆ. ಸರಿ, ನನಗೆ ಬರುವ ಅದೊಂದು ಕೆಲಸವನ್ನು ಯಶ

ಸ್ವಿಯಾಗಿ ನಿರ್ವಹಿಸಲು ದೇವಿ ಸಹಾಯ ಮಾಡಬಹುದಲ್ಲ?

ನಟಿ: ಆಗಲಿ. ನಾಟಕವಾವುದು?

ಸೂತ್ರಧಾರ: ನಿಷ್ಕ್ರಾಂತಾ ಉರ್ವಶೀ ಎಂಬ ಏಕಾಂಕ.

ನಟಿ: ಕರ್ತೃವಾರು?

ಸೂತ್ರಧಾರ: ಕೇಳು:

(ಕಂದ) ಅಭಿನವ ಧಾರಾನಗರೀ
ಯಭಿಧಾನಂದಾಳ್ದ ಧಾರವಾಡ
ಪುರಸ್ಥಂ।
ಅಭಿನಯ ಗಾಯನ ಲೇಖನ
ಶುಭ ಸುಕಲಾ ವನ ವಸಂತ
ಕವಲೀಯಾಖ್ಯಂ॥

ನಟಿ: ಏನು? ಇಂತಹರ ನಾಟಕಗಳನ್ನೂ ಅಭಿನಯಿಸಬೇಕಾದ ಹೊತ್ತು ಬಂದಿತೇ ನಮಗೆ? ದೈವೇಚ್ಛೆ! ಸರಿ. ಆರಂಭಿಸೋಣ ನಾಟಕದ ವಿಷಯವೇನೆಂದು ತಿಳಿಸು ಆರ್ಯನೇ.

ಸೂತ್ರಧಾರ: ನಾಟಕದ ವಿಷಯವೆಂದರೆ... ಎಂದರೆ...ಅದರ ಕತೆಯೆಂದರೆ...ಎಂದರೆ... ಕತೆ ಹೀಗಿದೆ... ಹೇಗೆಂದರೆ ... ಆ ಅದು... ಎಂದರೆ ಇದು...

[ನೇಪಥ್ಯದಲ್ಲಿಂದ ತಿಲೋತ್ತಮೆಯ ಧ್ವನಿ ಕೇಳಿ ಬರುತ್ತಿದೆ)

ತಿಲೋತ್ತಮೆ: (ಪ್ರತಿಧ್ವನಿಯೊಂದಿಗೆ) ಉರ್ವಶೀ, ಚಿತ್ರಲೇಖೇ, ಲಕ್ಷ್ಮೀ ಸ್ವಯಂವರ ನಾಟಕಪ್ರದರ್ಶನದ ವೇಳೆ ಸಮೀಪಿಸುತ್ತಿದೆ. ಇಬ್ಬರೂ ಎಲ್ಲಿದ್ದರೂ ಸ್ವರ್ಗಲೋಕಕ್ಕೆ ಮನೋವೇಗದಿಂದ ಹೊರಟು ಬನ್ನಿರಿ ಉರ್ವಶೀ, ಚಿತ್ರಲೇಖೇ ... (ಧ್ವನಿ ಕರಗುವುದು)

ಸೂತ್ರಧಾರ: ಕೇಳಿದೆಯಾ ಆರ್ಯಳೇ?

ನಟಿ: ಹೌದು, ಆದರೆ ಈ ಮಾತು ಕಾಲಿದಾಸನ ವಿಕ್ರಮೋರ್ವಶೀಯ ನಾಟಕದೊಳಗಿನದಲ್ಲವೆ? ಇದು ತಿಲೋತ್ತಮೆಯ ಧ್ವನಿ!

ಸೂತ್ರಧಾರ: ಅಹುದು. ತಿಲೋತ್ತಮೆ ಆಕಾಶದಲ್ಲಿ ಪ್ರತ್ಯಕ್ಷಳಾಗಿ ಭೂಲೋಕಕ್ಕೆ ಬಂದಿದ್ದ ಉರ್ವಶೀ ಚಿತ್ರಲೇಖೆಯರಿಗೆ ಕೇಳುವಂತೆ ಕೂಗಿಹೇಳುವಳು. ಆ ಮೇಲೆ ವಿಕ್ರಮೋರ್ವಶೀಯಲ್ಲಿ ಮುಂದೇನಾ ವುದು ಗೊತ್ತಿದೆಯೆ?

ನಟಿ: ಗೊತ್ತಿರದೇನು? ಭೂಲೋಕದ ರಾಜಾ ಪುರೂರವನ ತೋಳತೆಕ್ಕೆಯಲ್ಲಿ ಮೆ ಮರೆತಿದ್ದ ಉರ್ವಶಿ ಎಚ್ಚೆತ್ತವಳಾಗಿ ಮ ಸ್ಸಿಲ್ಲದ ಮನಸ್ಸಿನಿಂದ ತನ್ನ ಮರ್ತ್ಯ ಪ್ರಿ ಕರನನ್ನು ತೊರೆದು ಸ್ವರ್ಗೀಯ ಪ್ರಿಯಕ ದೇವೇಂದ್ರನೆಡೆಗೆ ಆಕಾಶಮಾರ್ಗವಾ ಹೊರಟುಹೋಗುತ್ತಾಳೆ.

ಸೂತ್ರಧಾರ: ಸರಿ. ಅದಾದ ಮೇಲೆ? ನೆ ಪಿದೆಯೆ ನಿನಗೆ? ಮುಂದಿನ ದೃಶ್ಯದಲ್ಲಿ ಕಾ ದಾಸ ಗಾಲವ ಮತ್ತು ಪಲ್ಲವ ಎಂಬೆರಡ ಪಾತ್ರಗಳನ್ನು ತರುತ್ತಾನೆ. ಅವರು ತಮ ತಮ್ಮೊಳಗೆ ಮಾತನಾಡಿಕೊಂಡು ಶಾಪ ಬ ಷ್ಕೃತೆಯಾದ ಉರ್ವಶಿಯು ಸ್ವರ್ಗವನ ತೊರೆದು ಮರ್ತ್ಯಕ್ಕಿಳಿದುದನ್ನು ಕತೆ ಮಾ ಹೇಳುವರು.

ನಟಿ: ಅಹುದು. ಅದರ ನಂತರದ ದೃ ದಲ್ಲಿ ನಾವು ಕಾಣುವುದು ಉರ್ವಶೀ— ಪುರೂರವ ಪುನರ್ಮಿಲನವನ್ನು.

ಸೂತ್ರಧಾರ: ಅದು ಸಹಜವೇ. ಆದರೆ ನಮ್ಮ ನಾಟಕಕಾರ ವಸಂತ ಕವಲಿ ಹೇ ವುದೇನು ಗೊತ್ತೆ? ಅತ್ಯಂತ ನಾಟಕೀಯ ವಾದ ಸನ್ನಿವೇಶವೊಂದನ್ನು ಕಾಲಿದಾ ತಿಳಿಯದೆ ಕೈಬಿಟ್ಟಿದ್ದಾನೆಂದು. ಅದೊಂದ ದೋಷವೆಂದು.

ನಟಿ: ಏನು ಏನು? ಮಹಾಕವಿ ಕಾಲಿದಾಸ ದಿವ್ಯ ದೃಷ್ಟಿಗೆ ಕಾಣದುದಾವುದು? ಆತ ದೈವಿಕ ಪ್ರತಿಭೆಗೆ ಹೊಳೆಯದ ಅಂಶವನ್ನು ತಾನು ಕಂಡಿರುವೆನೆಂದು ಈ ನಿನ್ನೆ ಮೊನ್ನೆಯ ಹುಡುಗ ಹೇಳುವುದು ಉದ್ಧಟತನವಲ್ಲವೆ ಇದು...ಇದು...

ಸೂತ್ರಧಾರ: ಶಾಂತಳಾಗು, ಆರ್ಯೆ, ಶಾಂ ಳಾಗು. ಪರಪ್ರತ್ಯಯನೇಯಬುದ್ಧಿ ಯ ಗದೆ ಈ ದೋಷದ ಬಗೆಗೆ ಸ್ವತಃ ವಿಚಾ ಮಾಡು. ಗಾಲವ-ಪಲ್ಲವರು ಕತೆ ಮಾ ಹೇಳಿದ ಸಂಗತಿ ಎಷ್ಟು ನಾಟಕೀಯವಾಗಿ

ಆ ಭಾಗವನ್ನು ಶ್ರಾವ್ಯ ಕಾವ್ಯವಾಗಿಸದೆ ದೃಶ್ಯ ಕಾವ್ಯವನ್ನಾಗಿಸಬೇಕಾಗಿತ್ತೆಂಬುದೇ ನಮ್ಮ ಪ್ರಸ್ತುತ ನಾಟಕಕಾರನ ಅಭಿಪ್ರಾಯ.

ನಟಿ: ಎಂದರೆ ಲಕ್ಷ್ಮೀ ಸ್ವಯಂವರದಲ್ಲಿ ಊರ್ವಶಿ ಬಾಯಿತಪ್ಪಿ ಪುರೂರವನ ಹೆಸರು ಹೇಳಿ ಭರತ ಮುನಿಯ ಕೋಪಕ್ಕೆ ಗುರಿಯಾದ ಸನ್ನಿವೇಶವನ್ನೇ?

ಸೂತ್ರಧಾರ: ಹೂಂ, ಅದನ್ನೇ. ಅದನ್ನು ವಿಷ್ಕಂಭಕದಲ್ಲಿ ನೀರಸವಾಗಿ ಚರ್ಚಿಸುವುದಕ್ಕಿಂತ ಗರ್ಭನಾಟಕವನ್ನಾಗಿ ಬರೆದು ಸೇರಿಸಿದ್ದರೆ ವಿಕ್ರಮೋರ್ವಶೀಯವು ಒಳ್ಳೆಯ ನಾಟಕವಾಗಬಹುದಿತ್ತೆಂಬ ಆಶಯವದು.

ನಟಿ: ಓ, ಅದೇನೋ ನಿಜ ಈಗ ಅರ್ಥವಾಗುತ್ತದೆ ನನಗೆ. ಅದರೊಂದಿಗೆ ಪಶ್ಚಾತ್ತಾಪವೂ ಕೂಡ. ಪಾಪ, ಕೋಪದ ಭರದಲ್ಲಿ ನಮ್ಮ ಪ್ರಸ್ತುತ ನಾಟಕಕಾರನ ಬಗೆಗೆ ಬಿರುನುಡಿಗಳನ್ನಾಡಿದೆ ನಾನು. ಅವನನ್ನು ಸ್ವತಃ ಕಂಡು ಕ್ಷಮೆ ಬೇಡಬೇಕು.

ಸೂತ್ರಧಾರ: ಓಹೋ, ಅದನ್ನು ಮಾತ್ರ ಮಾಡಬೇಡ ದಯವಿಟ್ಟು.

ನಟಿ: ಏಕೆ? ಹೇಳು ಆರ್ಯನೇ, ಏಕೆ?

ಸೂತ್ರಧಾರ: ಏಕೆಂದರೆ... ಕಾರಣವಿಷ್ಟೇ... ದೇವೇಂದ್ರನಂತಹ ಸ್ವಾಮಿಯಿದ್ದೂ ಸಹ ಊರ್ವಶಿ ಮಾನವನಾದ ರಾಜಾ ಪುರೂರವನಲ್ಲಿ ಅನುರಕ್ತಳಾದಳು. ಹಾಗೆಯೇ ನೀನೂ ಸಹ ನಮ್ಮ ನಾಟಕಕಾರನನ್ನು... ಪ್ರತ್ಯಕ್ಷ ಕಂಡು... ಏನಾದರೂ... ಹೆಹೆ...

ನಟಿ: ಛೀ, ನಾಚಿಕೆಯಾಗುವುದಿಲ್ಲವೇ ನಿನಗೆ? ಹೋಗು, ನೀನೂ ಬೇಡ, ನಿನ್ನ ನಾಟಕವೂ ಬೇಡ. ನನಗೆ ಮುಖ ತೋರಿಸಬೇಡ. (ಕೋಪದಿಂದ ಬಿರಬಿರನೆ ಹೋಗುವಳು.)

ಸೂತ್ರಧಾರ: ಅಯ್ಯೋ, ನಾನು ಸುಮ್ಮನೆ ಹಾಸ್ಯಕ್ಕೆಂದೆ. ಇಷ್ಟೂ ತಿಳಿಯುವುದಿಲ್ಲವೆ? ಆರ್ಯೆ ಕೇಳು, ಕೇಳಿಲ್ಲಿ, ಆಂ? ಹೊರಟೆ! ಹೋದಳಲ್ಲ! ಸರಿ, ಇದೀಗಲೇ ಇವಳ ಕ್ಷಮೆ ಬೇಡಿ, ಮನವೊಲಿಸಿ ನಾಟಕಪ್ರದರ್ಶನಕ್ಕೆ ಅಣಿಗೊಳಿಸಬೇಕು. ಆರ್ಯೆ, ಆರ್ಯೇ... (ಅವಳನ್ನು ಹಿಂಬಾಲಿಸಿ ಹೊರಟುಹೋಗುತ್ತಾನೆ.)

ತಿಲೋತ್ತಮೆ: (ಪ್ರವೇಶಿಸಿ) ಊರ್ವಶೀ, ಚಿತ್ರಲೇಖೇ... ಹಾ ಧಿಕ್. ಹಾ ಧಿಕ್! ಎಲ್ಲಿ



ಹೋದರೋ! (ನಾಲ್ದೆಸೆಗಳಿಗೂ ಮುಖಮಾಡಿ ಕೂಗುತ್ತ) ಊರ್ವಶೀ, ಚಿತ್ರಲೇಖೇ, ಎಲ್ಲಿದ್ದರೂ ಕೂಡಲೇ ಸ್ವರ್ಗಕ್ಕೆ ಹೊರಟು ಬನ್ನಿರಿ. (ಚಿಂತಿಸುತ್ತ) ನನ್ನ ಧ್ವನಿ ಅವರಿಗೆ ಕೇಳಿಸಿರಬಹುದೆ? ಸಖಿ ಮೇನಕೆ ಹೇಳಿದಳು; ಊರ್ವಶಿ ಮರ್ತ್ಯಲೋಕಕ್ಕೆ ಹೋಗಿರಬಹುದೆಂದು. ಏಕಿರಬಹುದು? ತನ್ನ ಪ್ರಿಯಕರ ಪೂರೂರವನನ್ನು ನೋಡಲೆಂದೆ? ಹಾಗಿದ್ದರೆ ಅನಾಹುತವೇ ಆದೀತು. ಅವಳೀಗ ಸ್ವರ್ಗದಲ್ಲಿಲ್ಲವೆಂದು ಕೇಳಿ ನಾಟ್ಯಗುರು ಭರತಮುನಿ ಕೋಪದಿಂದ ಕುದಿಯುತ್ತಿರುವ. ಅವಳು ಈಗಲಾದರೂ ಮರಳಿದರೆ..(ನೋಡಿ) ಅದೊ ಇದೀಗ ಮೇಘಮಂಡಲದಲ್ಲಿ ತೂರಿ ಮೇಲೇರಿ ಬರುತ್ತಿದ್ದಾರೆ ಅವರಿಬ್ಬರು. (ಪಕ್ಕದೊಳಕ್ಕೆ ಕೆಳಕ್ಕೆ ನೋಡುತ್ತ) ಮೋಡಗಳನ್ನು ಭೇದಿಸಿಕೊಂಡು ಬರುತ್ತಿರುವ ಊರ್ವಶೀ ಚಿತ್ರಲೇಖೆಯರು ಇಪ್ಪರಿಗೊಂಡ ವಿದ್ಯುಲ್ಲತೆಗಳಂತೆ ಕಂಗೊಳಿಸುತ್ತಿದ್ದಾರೆ. ನಿಜ, ಹಿಂದೊಮ್ಮೆ ಹೀಗೆಯೇ ಊರ್ವಶೀ ಚಿತ್ರಲೇಖೆಯ ಭುಜದ ಮೇಲೆ ತಲೆಯಿರಿಸಿ ಬೆದರಿದ ಜಿಂಕೆಯಂತೆ ಅವಳನ್ನಪ್ಪಿ ಹಿಡಿದು ನಡೆದಿದ್ದಳು ಅಂದು ಅವಳನ್ನು ಕ್ರೂರ ರಾಕ್ಷಸನ ಕೈಯಿಂದ ಪುರೂರವ ಪಾರುಮಾಡಿದ್ದಾಗ. ಮೇಲೇರುವೀ ಕೋಲ್ಮಿಂಚಿನ ಸೆಳಕುಗಳು ತಮ್ಮಡಿಯ ಮೋಡಗಳ ಮೇಲೆ ಕಣ್ಣ ಹನಿಗಳನ್ನು ಸುರಿಸಿ ಅವುಗಳ ಭಾರವನ್ನು ಇನ್ನೂ ಹೆಚ್ಚಿಸುತ್ತಿವೆ. ಓ, ಎಂತಹ ಹೃದಯವಿದಾರಕ ದೃಶ್ಯವಿದು! ಅಳುತ್ತಿರುವ ಊರ್ವಶಿಯನ್ನು ಸಂತವಿಸುತ್ತ ಚಿತ್ರಲೇಖೆ ತಾನೂ ಅಳುತ್ತಿದ್ದಾಳೆ. ಶೋಕಾಗ್ನಿಯ ಪರಿಯೆ ವಿಚಿತ್ರ! ತನ್ನನ್ನು ನಂದಿಸಬಂದ ಜಲವನ್ನೇ ಉರಿಯಿಸುತ್ತದೆ! (ಗಟ್ಟಿಯಾಗಿ ಸಂಬೋಧಿಸುತ್ತ) ಊರ್ವಶೀ, ಬೇಗ ಬಾರೇ, ಲಕ್ಷ್ಮೀಸ್ವಯಂವರ ನಾಟಕದ ನಾಯಕಿ ನೀನು ಎಂಬುದೇ ಮರೆತು ಹೋಯಿತೇ ನಿನಗೆ?

(ಕೆಳಗಿನಿಂದೇರಿ ಬಂದಂತೆ ಊರ್ವಶೀ-ಚಿತ್ರಲೇಖೆಯರು ಪ್ರವೇಶಿಸುವರು.)

ಊರ್ವಶೀ : ಓ, ಸಖಿ ತಿಲೋತ್ತಮೆ! ನೀನಲ್ಲವೆ ನಮ್ಮನ್ನು ಸಕಾಲದಲ್ಲಿ ಎಚ್ಚರಿಸಿದುದು?

ತಿಲೋತ್ತಮೆ : ಅಹುದು. ಇಲ್ಲದಿದ್ದರೆ ನಿನ್ನ ಗತಿಯೇನಾಗುತ್ತಿತ್ತು! ಹೇಳು ಊರ್ವಶೀ, ಈ ಅಧೋಲೋಕಕ್ಕೇಕೆ ಬಂದಿದ್ದೆಯೇ ಕೆಲಸಗಳ್ಳೀ?

ಚಿತ್ರಲೇಖೆ : ಏಕೆಂದರೆ... ಸಖಿ ತಿಲೋತ್ತಮೆ, ಅಂದೊಮ್ಮೆ ಕ್ರೂರ ರಾಕ್ಷಸನೊಬ್ಬ ನಮ್ಮ ಊರ್ವಶಿಯನ್ನು ಅಪಹರಿಸಿಕೊಂಡು ಹೋಗಿದ್ದ, ನೆನಪಿದೆಯೆ ನಿನಗೆ?

ತಿಲೋತ್ತಮೆ : ಅಹುದು. ಅವನಿವಳನ್ನು ಹೊತ್ತುಕೊಂಡು ಹೋಗುತ್ತಿದ್ದಾಗ ರಾಜಾ ಪುರೂರವ ಇವಳನ್ನು ಸಂರಕ್ಷಿಸಿದ: ಅದೂ ನೆನಪಿದೆ ನನಗೆ

ಊರ್ವಶೀ : ಅದೇ, ಅವನ ಉಪಕಾರವನ್ನು ನೆನೆದು, ಸಾಹಸವನ್ನು ಹೊಗಳಿ ಅಭಿವಂದಿಸಲೆಂದು ನಾವಿಲ್ಲಿಗೆ ಬಂದಿದ್ದೆವು, ಅಷ್ಟೇಯೆ.

ತಿಲೋತ್ತಮೆ : ಓಹೋ! ಆತನನ್ನೆಷ್ಟು ಅಭಿವಂದಿಸಿದರೂ ನಿನ್ನ ಮನಸ್ಸಿಗೆ ತೃಪ್ತಿಯೇ ಆಗದೆಂದು ತೋರುತ್ತಿದೆ. ಇನ್ನುಮೇಲೆ ಪ್ರತಿನಿತ್ಯ ಭೂಲೋಕಕ್ಕೆ ಬಂದು ರಾಜನನ್ನು (ಅಣಕಿಸುತ್ತ) ಹೃತ್ಪೂರ್ವಕವಾಗಿ ಅಭಿವಂದಿಸುವ ವಿಚಾರವೇನೋ ನಮ್ಮ ಊರ್ವಶಿಗೆ! (ನಗು).

ಊರ್ವಶೀ : ನಿನಗೇನೋ ಆಟ ತಿಲೋತ್ತಮೆ! ಹೇಳು ಸಖೀ, ನಾನಿಲ್ಲವೆಂದು ಇಂದ್ರಸಭೆಯಲ್ಲಿ ತುಂಬ ಕಳವಳವುಂಟಾಗಿದೆಯೆ?

ತಿಲೋತ್ತಮೆ : ಕಳವಳವೇನು, ಕೋಲಾಹಲವಾಗಿದೆ! ಲಕ್ಷ್ಮೀಸ್ವಯಂವರ ನಾಟಕದಲ್ಲಿ ತಮ್ಮನ್ನು ಹೇಗೆ ಚಿತ್ರಿಸಿದ್ದಾರೆಂದು ನೋಡಲು ಸ್ವತಃ ಲಕ್ಷ್ಮೀ-ವಿಷ್ಣು ದೇವರೇ ಬಂದಿದ್ದಾರೆ. ನಾಟಕ ರಚಯಿತೆ ದೇವೀ ಸರಸ್ವತಿಯೇ ಅವರನ್ನು ಆವಾಹಿಸಿದ್ದಾಳೆ. ದೇವದಾನವ ಕಿನ್ನರ ಕಿಂಪುರುಷರಿಂದ ಸಭಾಭವನ ಕಿಕ್ಕಿರಿದು ತುಂಬಿದೆ ಆದರೆ ನಾಟಕದ ನಾಯಕಿಯೇ ಅಲ್ಲಿಲ್ಲ!

ಚಿತ್ರಲೇಖೆ : ಅನಾಹುತವಾಯಿತು. !!

ಊರ್ವಶೀ : ನನ್ನೆದೆ ನಡಗುತ್ತಿದೆ! ಮೂರ್ಛೆ

ಹೋಗುವಂತಾಗಿದೆ ನನಗೆ! ನಾನಿಲ್ಲವೆಂದು ತಿಳಿದು ನನ್ನ ಸ್ವಾಮಿ ಪುರೂರವನೇನೆಂದು ಕೊಂಡನೋ—

**ತಿಲೋತ್ತಮೆ :** ಏನು ? ಏನದು ಊರ್ವಶೀ- ನಿನ್ನಸ್ವಾಮಿ—ಪುರೂರವನೆ ?

**ಊರ್ವಶೀ :** (ಗೊಂದಲಿಸಿ) ಆಂ? ಎಂದರೆ.. ನಾನೆಂದುದು...ಪುರುಹೂತನೆಂದು ಸಖೀ, ಪುರೂರವನಲ್ಲ— ಎಂದರೆ...ಪುರುಹೂತ- ಅರ್ಥಾತ್ ನಮ್ಮ ಸ್ವಾಮಿ ದೇವೇಂದ್ರ— ಅರ್ಥಾತ್—

**ತಿಲೋತ್ತಮೆ :** ಅರ್ಥವಾಯಿತು ಊರ್ವಶೀ! ಅರ್ಥವಾಯಿತು, ಸರಿ ಹಾಗಾದರೆ, ನಮ್ಮ ಉರ್ವಶಿಯ ಸ್ವಾಮಿ ಪುರೂರವ!

**ಊರ್ವಶೀ :** ಹಾಗಲ್ಲ ಸಖೀ, ಇದೋ ಇಲ್ಲಿ ಕೇಳು—

**ತಿಲೋತ್ತಮೆ :** ಕೇಳಿದೆ ಸಖೀ, ನೀನೇ ಎಲ್ಲ ವನ್ನೂ ಹೇಳಿದೆ!

**ಚಿತ್ರಲೇಖೆ :** ಸರಿ, ನೀವಿಬ್ಬರೂ ಹೀಗೇ ಮಾತನಾಡುತ್ತ ನಿಲ್ಲಿರಿ. ಅಲ್ಲಿ ಇಂದ್ರ ಸಭೆ ಯಲ್ಲಿ ದೇವ ದಾನವ ಗಂಧರ್ವಾದಿಗಳೆಲ್ಲ ಕುತೂಹಲದಿಂದ ಕುಳಿತೇ ಇರಲಿ. ನಾಟ್ಯ- ಗುರು ಭರತಮುನಿ ಕೋಪದಿಂದ ಕುದಿಯು ತ್ತಿರಲಿ!

**ಊರ್ವಶೀ :** ಅಯ್ಯೋ! ಅಹುದಲ್ಲವೆ! ತಿಲೋತ್ತಮೆ, ನಡೆಯಿನ್ನು. ಇನ್ನೂ ವೇಗ ವಾಗಿ ಸ್ವರ್ಗಕ್ಕೇರುವಾ. ಬೇಗ ಹೋಗಿ ಗುರುದೇವನ ಕ್ಷಮೆ ಕೇಳುವಾ.

**ಚಿತ್ರಲೇಖೆ :** ಮತ್ತೆ, ತಿಲೋತ್ತಮೆ. ಮಾರ್ಗ ದಲ್ಲಿ ಮೋಡಗಳೊಳಗಿಂದ ಮುತ್ತುಗಳ- ನ್ನಾಯ್ದು ಕೊಳ್ಳಲು ನಿಂತೀಯೇ, ಜೋಕೆ! ತಡಮಾಡದೆ ನಡೆಯಿರಿನ್ನು- ಮನೋವೇಗ ದಿಂದ. (ಹೋಗುವರು)

(ರಂಗದ ಮಧ್ಯದ ತೆರೆಯೇಳುವುದು. ಇಂದ್ರ. ಸಭೆಯ ರಂಗಮಂಚದ ದೃಶ್ಯ. ಹಿನ್ನೆಲೆಯಲ್ಲಿ ಬಿಳಿಯ ತೆರೆಯಿದೆ. ಅದರ ಮುಂಗಡೆಯಲ್ಲಿ ಭರತಮುನಿ, ಉರ್ವಶೀ, ಚಿತ್ರಲೇಖೆ ನಿಂತಿ ದ್ದಾರೆ).

**ಭರತ :** (ಕ್ರೋಧದಿಂದ) ಉರ್ವಶೀ, ಈ ಎಲ್ಲ ದೇವ-ದಾನವ ಪ್ರೇಕ್ಷಕರನ್ನು ಇಷ್ಟು ಹೊತ್ತು ಕಾಯಿಸಿದ ನೀನು ಅಪರಾಧಿ, ದುಷ್ಟೆ, ಪಾತಕಿ! ನಿರ್ದಿಷ್ಟ ವೇಳೆಗೆ ನೇಪಥ್ಯ ಗೃಹದೊಳಗಿರದೆ ಎಲ್ಲಿಗೆ ಹೋಗಿದ್ದೆ? ಹೇಳು, ಎಲ್ಲಿಗೆ?... ಉರ್ವಶೀ, ನಾನು ಕೇಳಿದ ಪ್ರಶ್ನೆ ಅರ್ಥವಾಯಿತೆ? ಕರ್ತವ್ಯ ವನ್ನು ಕಡೆಗಣಿಸಿ ಎಲ್ಲಿ ಮಾಯವಾಗಿದ್ದೆ? ಏನು? ಮಾತನಾಡಲು ಬಾಯಿ ಬರದೇ ನಿನಗೆ? ಚಿತ್ರಲೇಖೇ, ನೀನು ಉತ್ತರಿಸು. ಓಹೋ, ನಿನಗೂ ಮೌನವ್ರತವೆ ?

**ಇಂದ್ರ :** (ಪ್ರವೇಶಿಸಿ) ಏನಾಯ್ತೆಂಬುದನ್ನು ನಾನು ವಿವರಿಸುವೆ. ಭರತಮುನಿಯೇ, ಹಾಗೆ ನೋಡಿದರೆ ಉರ್ವಶಿ ಸಕಾಲದಲ್ಲಿ ನಾಟ್ಯಗೃಹಕ್ಕೆ ಬಾರದುದಕ್ಕೆ ಹೊಣೆ ನಾನು. ಏಕೆಂದರೆ ನನ್ನ ಮುದ್ದು ಕಂದ ಜಯಂತ



ನನ್ನು ಐರಾವತದ ಮೇಲೆ ಕೂರಿಸಿಕೊಂಡು ಮೇರುಪರ್ವತ ಶಿಖರವನ್ನು ತೋರಿಸಿಕೊಂಡು ಬಾರೆಂದು ನಾನೇ ಅವಳನ್ನು ಕಳಿಸಿದ್ದೆ.

ಉರ್ವಶೀ : (ಮೆಲ್ಲಗೆ ತಲೆಯೆತ್ತಿ ನೋಡಿ, ಸ್ವಗತವಾಗಿ) ಅಯ್ಯೋ, ನನ್ನ ದಯಾಳು ದೊರೆ ನನ್ನುಳಿಸಲೆಂದು ತನ್ನ ಮೇಲೆ ತಪ್ಪು ಹೊರಿಸಿಕೊಳ್ಳುತ್ತಿದ್ದಾನೆ. ಇಂತಹ ಕಾರುಣ್ಯ ಮೂರ್ತಿ ಸ್ವಾಮಿಗೆ ದ್ರೋಹ ಬಗೆದು ಪುರೂರವನಲ್ಲಿ ಅನುರಕ್ತಳಾದೆನೇ ನಾನು ? ಹಾಯ್ !

ಭರತ : ದೇವೇಂದ್ರ, ನಿನ್ನ ಮಾತು ಅಧಿಕ-ಪ್ರಸಂಗವೆನಿಸೀತು

ಇಂದ್ರ : ಆದರೆ, ಭರತಮುನೇ, ಅಪರಾಧ ನನ್ನ-ದಾದುದರಿಂದ... ನನ್ನ ಮಗು ಜಯಂತ-ನನ್ನು ಐರಾವತದ ಮೇಲೆ ಆರೂಢನಾಗಿಸಿಕೊಂಡು ಹೋಗಿಬಾರೆಂದು ಉರ್ವಶಿಗೆ ಹೇಳಿದವನಾನಾದುದರಿಂದ—

ಭರತ : (ನಟುವೆಯಿ) ಓ. ನಾನು ಕೈಕೊಂಡ ನಾಟಕ ಪ್ರದರ್ಶನಕ್ಕೆ ನೀನು ಕೊಡುವ ಪ್ರೋತ್ಸಾಹ ಇದೇಯೋ ? ವಿದ್ಯಾಧಿದೇವತೆ ಸರಸ್ವತಿ ಬರೆದ ನಾಟಕ, ಪ್ರದರ್ಶಿಸುವವ ಭರತಮುನಿ, ನಾಟ್ಯಾಚಾರ್ಯ ! ಇಂತಹ ನಾಟಕದ ನಾಯಿಕೆಯನ್ನು ನೀನು ಪ್ರದ-ರ್ಶನ ವೇಳೆಯಲ್ಲಿ ಯಾವುದೋ ಪಶುವಿನ ಮೇಲೇರಿಸಿ ಎಲ್ಲಿಗೋ ಕಳಿಸಿದೆ !

ಉರ್ವಶೀ : (ಸ್ವಗತ) ನನ್ನಿಂದಾಗಿ ನನ್ನ ಸ್ವಾಮಿ ಮುನಿಯ ಮುನಿಸಿಗೆ ಪಾತ್ರನಾಗುವುದು ಕೂಡದು (ಭರತಮುನಿಯ ದುರು ಮಂಡಿಯೂರಿ ಕುಳಿತು) ಮಹಾಮುನೇ, ನನ್ನ ನಾಥ ನಿರಪರಾಧಿ. ಆತನನ್ನು ಕ್ಷಮಿಸಿಬಿಡು. ಕರ್ತವ್ಯಚ್ಯುತಿಯ ಹೊಣೆಯೆಲ್ಲ ನನ್ನದೇ ಅಪರಾಧಿನಿ ನಾನು ಸಕಾಲದಲ್ಲಿ ನೇಪಥ್ಯಗೃಹದಲ್ಲಿರದೆ ನಾಟಕದ ನಾಯಿಕ ನಾನೆಂಬುದನ್ನು ಮರೆತು ನಾನು ಕೆಳಗೆ ಭೂಲೋಕಕ್ಕೆ ಹೊರಟುಹೋಗಿದ್ದೆ.

ಭರತ : ಏನು ಮರ್ತ್ಯಲೋಕಕ್ಕೆಯೆ ? ಏನು ಕಾರಣ ?... ಹೂಂ, ಹೇಳು ! ಏನು ? ಮತ್ತೆ ಮೌನವೆ ? ಚಿತ್ರಲೇಖೆ, ಅವಳ ಅಂತ-ರಂಗ ಸಖಿ ನೀನು, ನೀನು ಕಾರಣ ವಿವರಿಸು

ಚಿತ್ರಲೇಖೆ : ಗುರುದೇವಾ, ಹಿಂದೊಮ್ಮೆ ಉರ್ವಶಿಯನ್ನು ಪುರೂರವರಾಜ ಸಂಕಟ ಸಮಯದಲ್ಲಿ ಅನಾಥರಕ್ಷಕನಾಗಿ ಬಂದು—

ಭರತ : (ಅಸಹನೆಯಿಂದ) ಅದೆಲ್ಲ ಗೊತ್ತಿದೆ. ಆದರೆ ಅದರಿಂದೇನು ?

ಚಿತ್ರಲೇಖೆ : ಆಗ ಸಖಿ ಉರ್ವಶೀ ಮೂರ್ಛಿತ-ಳಾಗಿದ್ದ ಕಾರಣ ರಾಜನನ್ನು ಕೃತಜ್ಞತೆ-ಯಿಂದ ಅಭಿವಾದಿಸಲು ಸಾಧ್ಯವಾಗಿರಲಿಲ್ಲ. ಅದಲ್ಲದೆ ಮರಳಿ ಸ್ವರ್ಗವನ್ನು ಸೇರುವ ತವಕದಲ್ಲಿ ಉರ್ವಶಿ ಸ್ವಲ್ಪ ಚೇತರಿಸಿಕೊಂಡೊಡನೆಯೇ ವಾಯುವೇಗದಿಂದ ಆಗಸಕ್ಕೇರಿದಳು. ಆಗಿನ ಕೃತಜ್ಞತೆಯನ್ನು ಈಗ ವ್ಯಕ್ತಪಡಿಸಲೆಂದು ನಾವಿಬ್ಬರೂ ಆ ಭೂಲೋಕದ ರಾಜನ ಬಳಿಗೆ ಹೋಗಿದ್ದೆವು.

ಭರತ : ದೇವೇಂದ್ರ, ಸ್ವರ್ಗದ ಮೇಲೆ ದಾನವರು ದಾಳಿ ಮಾಡಿದಾಗ ಸುರರ ಸಾಹಾಯ್ಯಕ್ಕೆಂದು ಬರುವ ಭೂಲೋಕದ ರಾಜ ಇದೇ ಪುರೂರವನೇನು ?

ಇಂದ್ರ : ಆ ಸಾಹಸ ಅವನೊಬ್ಬನಿಗೆ ಮಾತ್ರ ಸಾಧ್ಯ ನಾಟ್ಯಾಚಾರ್ಯ !

ಭರತ : ಇರಬಹುದು. ಆಗಲಿ, ಉರ್ವಶಿಯ ಅಪರಾಧವನ್ನು ಇದೊಂದು ಸಲ ಕ್ಷಮಿಸಿದ್ದೇನೆ.

ಉರ್ವಶೀ : ಅನುಗೃಹೀತಳಾದೆ—

ಭರತ : ಇದೊಮ್ಮೆಗೆ ಮಾತ್ರ !

ಉರ್ವಶೀ : ಇನ್ನೆಂದೂ ಅಪರಾಧ ಮಾಡುವುದಿಲ್ಲ ಗುರುದೇವಾ.

ಭರತ : ಇನ್ನು ಕಾರ್ಯಾರಂಭ ಮಾಡುವಾ. (ಸುತ್ತ ನೋಡಿ) ಎಲ್ಲರೂ ಸಿದ್ಧರಾಗಿರುವಿರಾ? (ಎರಡೂ ಪಕ್ಕಗಳನ್ನು ಸಂಬೋಧಿಸುತ್ತ) ನಟ ನಟಿಯರೆಲ್ಲ ನಾನು ನಿರ್ದೇಶಿಸಿದ್ದ ನೆಲೆಗಳಲ್ಲಿ ನಿಂತುಕೊಳ್ಳಿರಿ. ಹೀಗೆ ದೇವತೆಗಳು ಈ ಬದಿಗೆ (ಬಲ) ಮತ್ತೆ ರಾಕ್ಷಸರು ಈ ಎಡೆಗ (ಎಡ) ..(ಉರ್ವಶೀ-ಚಿತ್ರಲೇಖೆಯರು ನಿರ್ಗಮಿಸುತ್ತಾರೆ.) ಸಮುದ್ರಮಥನ ಆರಂಭವಾಗಲಿ. (ಅದರ ಸದ್ದನ್ನು ನಿರೂಪಿಸುವ ವಾದ್ಯ

ವೃಂದ ಧ್ವನಿ ಕೇಳಿಬರುವುದು. ಹಿನ್ನೆಲೆಯ ಬಿಳಿಯ ತೆರೆ ಮೇಲೇರಿ ಸಮುದ್ರಮಥನದ ದೃಶ್ಯ ಕಾಣುವುದು. ಭರತ ಮುನಿ ನಿಧಾನವಾಗಿ ರಂಗ ದಿಂದ ನಿರ್ಗಮಿಸುವನು. ಹಿನ್ನೆಲೆಯಲ್ಲಿ ಅವನ ಧ್ವನಿ ಕೇಳುವುದು ):

ಧ್ವನಿ : ದೇವದಾನವರು ಒಟ್ಟಾಗಿ ಕಡದ ಸಮುದ್ರದೊಳಗಿಂದ ಅನರ್ಘ್ಯ ರತ್ನಗಳು ಮೂಡಿ ಬರುತ್ತಿವೆ. ಈಗ ಸಾಗರದೊಡಲಿಂದೊಗೆದುದು ಒಂದು ಸುಂದರ ಸ್ತ್ರೀರತ್ನ. ತೆರೆಗಳನ್ನು ತುಳಿದು ಕುಣಿಯುತ್ತ ನಲಿಯುತ್ತ ಅವಳು ದಂಡೆಗೈತರುವಳು (ಸಮುದ್ರ ಮಥನ ನಿಲ್ಲುವುದು. ವಾದ್ಯವೃಂದ ನೃತ್ಯಂ ಯಕ್ಕೆ ತಿರುಗುವುದು. ಲಕ್ಷ್ಮೀ ವೇಷಧಾರಿಣಿ ಉರ್ವಶಿ ನರ್ತಿಸುತ್ತ ಬಂದು ಒಂದು ಮೋಹಕ ಭಂಗಿಯಲ್ಲಿ ನಿಲ್ಲುತ್ತಾಳೆ)

ಧ್ವನಿಗಳು : (ನೇಪಥ್ಯದಲ್ಲಿ) ರತ್ನ! ಸ್ತ್ರೀರತ್ನ. ಲಕ್ಷ್ಮೀ! ಲಕ್ಷ್ಮೀ!

ಒಬ್ಬ ರಾಕ್ಷಸ : (ಪ್ರವೇಶಿಸಿ) ಇದು ವರೆಗೆ ನಡೆದುದನ್ನೆಲ್ಲ ನೋಡಿದ್ದೇವೆ ದೇವದಾನವರೆಲ್ಲ ಒಟ್ಟಾಗಿ ಶ್ರಮಿಸಿ ಸಮುದ್ರವನ್ನು ಕಡೆಯುವುದು, ಅದರ ಫಲವಾಗಿ ಉದ್ಭವಿಸಿದ ರತ್ನಗಳನ್ನೆಲ್ಲ ಒಂದೊಂದಾಗಿ ದೇವತೆಗಳೇ ತೆಗೆದುಕೊಳ್ಳುವುದು. ಇದೀಗ ಸ್ವಲ್ಪ ಸಮಯದ ಹಿಂದೆ ದೊರೆತ ಕೌಸ್ತುಭ ರತ್ನವನ್ನು ನಾವೆಲ್ಲ ನೋಡುತ್ತಿದ್ದಂತೆ ಪುರುಷೋತ್ತಮ ಮಹಾವಿಷ್ಣು ಸೆಳೆದುಕೊಂಡು ಬಿಟ್ಟ. ದುಡಿತ ಮಾತ್ರ ನಮ್ಮ ಪಾಲಿಗೆ, ಫಲವೆಲ್ಲ ದೇವತೆಗಳಿಗೆ! ಇದು ನ್ಯಾಯವೇ?

ರಾಕ್ಷಸರು : (ನೇಪಥ್ಯದಲ್ಲಿ) ಅನ್ಯಾಯ! ಪರಮ ಅನ್ಯಾಯ!

ರಾಕ್ಷಸ : ಇದುವರೆಗೆ ನಾವೆಲ್ಲ ಸುಮ್ಮನಿದ್ದೆವು. ದೇವತೆಗಳೇ, ಇದೊಂದು ರತ್ನವನ್ನಾದರೂ ನಮಗೆ ಬಿಡಿರಿ. ಸ್ತ್ರೀರತ್ನ ಲಕ್ಷ್ಮೀ ರಾಕ್ಷಸರ ಪಾಲಿಗಿರಲಿ.

ಒಬ್ಬ ದೇವತೆ : (ಪ್ರವೇಶಿಸಿ) ಅದು ಸಾಧ್ಯವಿಲ್ಲ, ಎಂದಿಗೂ ಸಾಧ್ಯವಿಲ್ಲ! ಈ ಲಲಿತ ಕೋಮಲ ಕನ್ಯಾರತ್ನವನ್ನು ಪಡೆಯಲು ಘೋರ ರೂಪೀ ರಾಕ್ಷಸರು ಅನರ್ಹರು.



ಸ್ವರ್ಗವೇ ಲಕ್ಷ್ಮೀಯ ಆವಾಸ ಯೋಗ್ಯ ಸ್ಥಾನ.

ರಾಕ್ಷಸ : ಸುಂದರಿಯರು ಶೂರರ ಸ್ವತ್ತು. ನಮ್ಮ ಪರಾಕ್ರಮವನ್ನೀಗ ನೀವು ದೇವತೆಗಳೂ ಕಣ್ಣಾರೆ ಕಂಡಿರುವಿರಿ. ಕಡಲನ್ನು ಕಡೆಯುವಾಗ ಮಂದರ ಪರ್ವತಕ್ಕೆ ಸುತ್ತಿದ ವಾಸುಕಿಯು ವಿಷವನ್ನು ಕಾರತೊಡಗಲು ಅದರ ತೀಕ್ಷ್ಣತೆಯನ್ನು ಲೆಕ್ಕಿಸದೆ ಘೋರ ಸರ್ಪನ ಹೆಡೆಗಳನ್ನು ಹಿಡಿದು ಕಡೆದವರು ನಾವು, ರಾಕ್ಷಸರು, ದೇವತೆಗಳಲ್ಲ!

ದೇವತೆ : ಓಹೊ! ಎಂತಹ ಆತ್ಮಪ್ರಶಂಸೆ! ಹೇಳಿರಲ್ಲೆ ತ್ರೈಲೋಕ್ಯವೀರರೇ, ಮಂದರ ಪರ್ವತವು ಕಡಲಲ್ಲಿ ಮುಳುಗತೊಡಗಲು ಆಗ ರಾಕ್ಷಸರು ನೀವೇನು ಮಾಡಿದಿರಿ? ಅಸ-

ಹಾಯಾಗಿ ಕೈಕಟ್ಟಿ ನೋಡುತ್ತ ಕುಳಿತಿರಲ್ಲವೆ ? ಕೂರ್ಮಾವತಾರ ತಾಳಿ ಕಡಲಡಿಗಿಳಿದು ಆಗ ಬೆನ್ನ ಮೇಲೆ ಮಂದರವನ್ನು ಹೊತ್ತು ನಿಂತವನು ದೇವತೆ! ದೇವಾಧಿದೇವ ಮಹಾವಿಷ್ಣು! ಆದುದರಿಂದ ಈ ಸೊಬಗಿನ ಸ್ತ್ರೀರತ್ನ ಪರಮ ಪುರುಷೋತ್ತಮನಾದ ಆ ಮಹಾವಿಷ್ಣುವಿಗೆ ಸಲ್ಲತಕ್ಕುದು.

(ರಂಗದ ಮೇಲೆ ದೇವದಾನವರ ಬಡಿದಾಟ ಪ್ರಾರಂಭವಾಗುವುದು. ವರುಣ ಪ್ರವೇಶಿಸಿ ಅವರನ್ನು ಬೇರ್ಪಡಿಸಿ ಅವರನ್ನು ಶಾಂತಗೊಳಿಸುತ್ತಾನೆ.)

ವರುಣ : ದೇವದಾನವರೆ, ಕಲಹವನ್ನು ಕೊನೆಗಾಣಿಸಿರಿ. ಸಮುದ್ರದಲ್ಲಿ ಜನಿಸಿದ ಲಕ್ಷ್ಮಿಗೆ ಸಮುದ್ರಾಧಿದೇವತೆಯೆನಿಸಿದ ನಾನು ವರುಣನೇ ತಂದೆ. ಆದುದರಿಂದ ನನ್ನ ಮಾತನ್ನು ಕೇಳಬೇಕು ನೀವೆಲ್ಲ. ನಾನು ನನ್ನ ಸುತೆಯ ಸ್ವಯಂವರವನ್ನೇರ್ಪಡಿಸುವೆ ಶೀಘ್ರದಲ್ಲಿಯೇ. ತನ್ನ ಪತಿಯನ್ನು ಅವಳೇ ಆಯ್ದುಕೊಳ್ಳಲಿ. ಆ ಸ್ವಯಂವರಕ್ಕೆ ನಿಮ್ಮೆಲ್ಲರನ್ನು - ದೇವದಾನವರಿಬ್ಬರನ್ನೂ—ಆಮಂತ್ರಿಸುವೆ, ನಂಬಿರಿ. ಕಾರಣ, ಉಭಯತರ ಸಮುದ್ರಮಥನ ಕಾರ್ಯವೀಗ ಮುಂದುವರಿಯಲಿ.

ರಾಕ್ಷಸ : ಅದಾಗದು. ಸ್ವಯಂವರವೀಗಲೇ, ಈ ಗಳಿಗೆಯಲ್ಲಿಯೇ ನಡೆದುಹೋಗಲಿ. ತಾನಾರ ಸೇರಬೇಕೆಂಬುದನ್ನು ಲಕ್ಷ್ಮಿಯೇ ನಿರ್ಧರಿಸಲಿ.

ವರುಣ : ತಥಾಸ್ತು. ಲಕ್ಷ್ಮಿಯು ತಾಯಿ ಸಯಂವರಕ್ಕೆ ಅವಳ ಮನವನ್ನೊಲಿಸಲಿ (ವರುಣಾನೀ ಪಾತ್ರಧಾರಿಣಿ ಚಿತ್ರಲೇಖೆ ಬರುವಳು.)

ವರುಣಾನೀ : ಮಗಳೆ ಲಕ್ಷ್ಮೀ, ಇತ್ತ ನೋಡು; ಒಂದೆಡೆಗೆ ಪ್ರಜಾಪತಿ, ಪುರುಷೋತ್ತಮ ಪ್ರಳಯರುದ್ರಾದಿ ದೇವತೆಗಳೂ ಇನ್ನೊಂದೆಡೆಗೆ ವೀರದಾನವರೂ ನಿಂತಿದ್ದಾರೆ. ಸಾಗರ ಗರ್ಭದಿಂದ ನೀ ಬರಲೆಂದು ಉಭಯ ಪಕ್ಷಗಳವರೂ ಶೌರ್ಯ ಸಾಹಸಗಳಿಂದ ಶ್ರಮಿಸಿ ಸಮುದ್ರಮಂಥನಗೈದಿದ್ದಾರೆ. ಇವರಲ್ಲೊಬ್ಬನನ್ನು ನೀನು ಪ
ಯಾಗಿ ವರಿಸು ಪ್ರಿಯ ಸುತೆಯೇ... (ಲಕ್ಷ
ವಿಲ್ಲದೆ ನಿಂತ ಲಕ್ಷ್ಮಿಗೆ- ಪಿಸುದನಿಯಲ್ಲಿ
ಉರ್ವಶೀ ನಿನ್ನ ಮಾತೀಗ!

ಲಕ್ಷ್ಮೀ : (ಎಚ್ಚೆತ್ತು, ತಡವರಿಸುತ್ತ) ಮಾತೆ
ನಾನು ಸಾಗರದಲೆಗಳ ಮೇಲೆ ಮೂಡಿ
ಬರುತ್ತಿರುವಾಗಲೇ ದೇವನೊಬ್ಬನನ್ನು ವ
ಸಿದೆ.

(ದೇವತೆಗಳ ಪಕ್ಷೋದ್ಧಾರ) ನೀರ ನೆಲೆ
ಯಿಂದೆದ್ದು ತೆರೆಗಳ ಮೇಲೆ ನಿಂತು ಕಂ
ಳನ್ನು ತೆರೆದೊಡನೆಯೆ ಕಂಡೆನಾತನ ಕವ
ನೀಯ ಮೂರ್ತಿಯನ್ನು... (ಭಾವಪರವ
ಳಾಗಿ) ಮೋಹಕ ಶ್ಯಾಮವರ್ಣವಾತನದು
ಹೊಳೆವ ಪೀತಾಂಬರ.. ಕರಗಳಲ್ಲಿ ಗದಾ
ಪದುಮ ಶಂಖ ಚಕ್ರಂಗಳು! ಮಿಕ್ಕೆಲ್ಲರೂ
ಸಾಗರವ ಮಥಿಸಿದರು. ಇವನೊಬ್ಬ
ಮಥಿಸಿದನ್ನೆನ್ನ ಮನವ!

ವರುಣಾನೀ : ಅವನಾರೆಂದರಿತೆ ನಾನು
ಆದರೂ ಮಗಳೇ, ನೀನವನ ನಾವ
ವನ್ನುಚ್ಚರಿಸು. ಹೇಳು ಲಕ್ಷ್ಮೀ, ಲಜ್ಜೆ
ಯನ್ನುಳಿದು ಅವನಾರೆಂದು ಹೆಸರ ಹೇಳು.

ಲಕ್ಷ್ಮೀ : (ಲಜ್ಜಾವನತಮುಖಿಯಾಗಿ) ನಾನ
ವರಿಸಿದ ನನ್ನ ನಾಥ .. ಪುರೂರವ! (ಎಲ್ಲ
ಮುಖಗಳಲ್ಲಿ ಹಾಹಾರಿದ ಕಳೆ.)

ವರುಣಾನೀ : (ಉರ್ವಶಿಯ ಕಿವಿಯಲ್ಲಿ) ಪುರು
ಷೋತ್ತಮನೆಂದು ಹೇಳು ಉರ್ವಶೀ
ಬೇಗನೆ ತಿದ್ದಿಕೊಳ್ಳು.

ಲಕ್ಷ್ಮೀ : (ಗುಟ್ಟು ಗೊತ್ತಾಯಿತೆಂದು ಗೊಂದಲ
ಕ್ಕೀಡಾಗಿ) ಆಂ ? ಎಂದರೆ... ನಾನೆಂದುದು
ನನ್ನ ವರ ದೇವದೇವ ಪುರುಷೋತ್ತಮ!

ಭರತ: (ಬಿರುಗಾಳಿಯಂತೆ ರಂಗವನ್ನು ಪ್ರವೇಶಿಸಿ)
ಮುಚ್ಚು ಬಾಯಿ, ಉರ್ವಶೀ. ನಾಟಕವನ್ನು
ಹಾಳು ಮಾಡಿದೆ ನೀನು!

(ಹಿನ್ನೆಲೆಯ ಬಿಳಿಯ ತೆರೆಯಿಳಿಯುವುದು
ರಂಗದ ಮೇಲೀಗ ಉರ್ವಶೀ, ಚಿತ್ರಲೇಖೆ
ಭರತಮುನಿ ಮಾತ್ರ ಇರುವರು.)

ಸರಸ್ವತಿ : (ಪ್ರವೇಶಿಸಿ) ನನ್ನ ಕಲಾಕೃತಿಯ
ಸರ್ವನಾಶವಾಯಿತು ನಿನ್ನಿಂದ ಉರ್ವಶೀ

ಸುಖಕರ ಹಾಗೂ ಸುಂದರ
'ರಾಮ್‌ಸುಖ್'
ಅತಿನಾಜೂಕಿನ ಧೋತ್ರಗಳು

ನಾಜೂಕಾದ ಧೋತ್ರಗಳನ್ನು ಉಡುವುದೆಂದರೆ ಅತ್ಯಾನಂದವಾಗುತ್ತದೆ. ದಾವಣಗೆರೆ ಕಾಟನ್ ಮಿಲ್ಸ್‌ನ ಧೋತ್ರವನ್ನು ಕೊಂಡುಕೊಂಡು, ಉಟ್ಟು, ನೀವೇ ನೋಡಿರಿ! ಮತ್ತು, ಶರ್ಟ್‌ಗಳನ್ನು ಮಾಡಿಸುವುದಕ್ಕೆ 'ಕೈದಾ ಅನರೇಬಲ್' ಅಥವಾ 'ರಾಮ್‌ಶೈನ್' ಕ್ಯಾಂಬ್ರಿಕ್ ಬಟ್ಟೆಯನ್ನು ಆಯ್ದುಕೊಳ್ಳಿರಿ.

# ದಿ ದಾವಣಗೆರೆ ಕಾಟನ್ ಮಿಲ್ಸ್‌ರವರ

## 'ರಾಮ್‌ಸುಖ್' ಧೋತ್ರಗಳು



ದಿ ದಾವಣಗೆರೆ ಕಾಟನ್ ಮಿಲ್ಸ್ ಲಿಮಿಟೆಡ್, ದಾವಣಗೆರೆ

ನಾಟ್ಯಾಚಾರ್ಯ, ನಾಯಿಕೆಯ ಪಾತ್ರವನ್ನು ನೀನಿವಳಿಗೆ ಕೊಟ್ಟದ್ದು ಉಚಿತವಾಗಲಿಲ್ಲ ವೇನೋ ಎಂಬ ಶಂಕೆ ನನಗೆ ಮೊದಲಿನಿಂ-ದಲೂ ಇದ್ದಿತು.

ಭರತ : ಹಾಗೆಂದು ನನಗೂ ಎನಿಸಿತ್ತು ಸರಸ್ವತೀ. ಆದರೆ ಕಾರ್ಯ ಕೈಮೀರಿತ್ತು. ಈ ದೇವೇಂದ್ರನನ್ನು ಸಂತೋಷಗೊಳಿಸುವುದ ಕ್ಕಾಗಿ ಆ ಪಾತ್ರವನ್ನು ಅಪಾತ್ರಳಿಗೆ ಕೊಡ ಬೇಕಾಯ್ತು.

ತಿಲೋತ್ತಮೆ: ನಮ್ಮ ನಾಥ ದೇವೇಂದ್ರ ತುಂಬ ಪಕ್ಷಪಾತಿ. ಉರ್ವಶಿಯ ಬಗೆಗೆ ಅವ ನಿಗೆ ವಿಶೇಷ ಮಮತೆ. (ಇಂದ್ರನಿಗೆ) ಸ್ವಾಮಿಯೇ, ಈಗಲಾದರೂ ಸ್ವತಃ ಮನ ಗಂಡೆಯಾ ನಿನ್ನ ನಲ್ಮೆಯ ಅಪ್ಸರೆಯ ಪ್ರೇಮ ದಾಳವನ್ನು? ನಿನ್ನ ಸಮ್ಮುಖದಲ್ಲಿಯೇ ಭೂಲೋಕದ ಮರ್ತ್ಯನೊಬ್ಬ ತನ್ನ ನಾಥ ನೆಂದವಳು ಘೋಷಿಸಿದಳು! ಅಬ್ಬ! ಎಂತಹ ಕೃತಘ್ನತೆ! ಪಾತಿವ್ರತ್ಯಕ್ಕೆಂತಹ ಕಲಂಕ!

ಲಕ್ಷ್ಮೀ: (ನಿಜವಾದ ಲಕ್ಷ್ಮೀ ಅಳುತ್ತ ಬರುವಳು) ಈ ಊರ್ವಶಿಯಿಂದ ನನಗಾದ ಅನ್ಯಾಯ ಅತ್ಯಂತ ಘೋರವಾದುದು. ನನ್ನ ಅವಸ್ಥಾನು ಕೃತಿಗೆಂದು ರಂಗದ ಮೇಲೆ ಬಂದಿವಳು ನನ್ನ ಸ್ವಾಮಿ ವಿಷ್ಣುವಿನ ಸಮ್ಮುಖದಲ್ಲಿಯೇ ನಾನು ಬೇರೊಬ್ಬನಲ್ಲಿ ಅನುರಕ್ತಳಾಗಿರು ವಂತೆ ನನ್ನನ್ನು ಚಿತ್ರಿಸಿದಳು! ಎಷ್ಟಾದರೂ ಉರ್ವಶಿ ಅಪ್ಸರೆಯಲ್ಲವೆ? ತನ್ನಂತೆ ನಾನೂ ಎಂಬಂತೆ ಅಭಿನಯಿಸಿದಳು!

ಚಿತ್ರಲೇಖೆ : (ಕೋಪದಿಂದ) ಓಹೋ, ಅವಳು ಅಪ್ಸರೆ, ಅಲ್ಲವೆ? ನೀನು ಮಾತ್ರ ಮಹಾ ಸುಸ್ಥಿರಪ್ರೇಮದ ಮಹಾಪತಿವ್ರತೆ! ಗೊತ್ತಿದೆ ನಮಗೆ, ಪರಮ ಪುರುಷೋತ್ತಮನಾದ ವಿಷ್ಣುವೇ ಪತಿಯಾಗಿದ್ದರೂ ನೀನವನನ್ನು ತೊರೆದು ಭೂಲೋಕದ ನರರನೋಲೈಸಿ ಬರುವೆಯೆಂಬುದನ್ನು ನಾವರಿಯೆವೆಂದು ಕೊಂಡೆಯಾ ಲಕ್ಷ್ಮೀ? ನನ್ನ ಸಖಿ ಉರ್ವಶಿ ಯಾದರೋ ಧೀರೋದಾತ್ತ ಮಹಾರಾಜ ನೊಬ್ಬನಲ್ಲಿ ಅನುರಾಗಗೊಂಡಳು. ಅವನ ಶೌರ್ಯ ಪ್ರತಾಪವನ್ನು ಮೂರು ಲೋಕ ಗಳು ಅರಿತಿವೆ. ಆಪತ್ಕಾಲದಲ್ಲಿ ಸ್ವರ್ಗರಕ್ಷ ಣೆಗೆ ಸಹ ಕಟಿಬದ್ಧನಾಗುವ ವೀರವರನಾತ. ಆದರೆ ನೀನು? ಪುರುಷೋತ್ತಮನಾದ ಪತಿ ಯನ್ನು ತೊರೆದು ಹೋಗಿ ಸಂಭಾವಿತರ ಸೋಗಿನ ಘಾತುಕ ವಂಚಕರ ಮನೆಯಲ್ಲಿ ವಾಸಮಾಡುವೆ. ಅನ್ಯರನ್ನು ಸುಲಿದು ಗಳಿಸಿ, ತಾನೂ ಉಣ್ಣದೆ ಬಡವಾಗುವ ಜಿಪುಣ ನರಾಧಮರ ಮನೆಯಲ್ಲಿ ಕಾಲ್ಮುರಿದು ಕೊಂಡು ಬಿದ್ದಿರುವೆ ನೀನು!

ವಿಷ್ಣು : ಇಂದ್ರ : (ಪ್ರವೇಶಿಸಿ) ಸಾಕು ನಿಲ್ಲಿಸು ಈ ಅಪಲಾಪವನ್ನು ಚಿತ್ರಲೇಖೇ!

ಲಕ್ಷ್ಮೀ : ಅಯ್ಯೋ, ಈ ಘೋರ ಅಪಮಾನ ವನ್ನು ಸಹಿಸಲಾರೆ. ಆ ಅಪ್ಸರೆ ಅನುಚಿತ ಅಭಿನಯದಿಂದ ಅವಮಾನಗೊಳಿಸಿದಳು; ಈಗಿ ವಳು ನೀರವಾದ ಕಟುವಚನಗಳಿಂದ ನನ್ನನ್ನು ಹಳಿಯುತ್ತಿದ್ದಾಳೆ. ಇದನ್ನೆಲ್ಲ ಇವರಿಗೆ ಸರಸ್ವತಿಯೇ ಹೇಳಿಕೊಟ್ಟಿರಬೇಕು.




"ಇವ್ರು 'ಉಗ್ರಪ್ಪ' ಅಂತ. ಸಿಟ್ಟು ಬಂತಂದ್ರೆ ಸ್ನೇಹಿತರಿಗೆ ಕೊಡೊ ಬಾಕೀನ ಸಂಗೇ ಹಾಕಿ ಬಿಡ್ತಾರೆ."

ಸರಸ್ವತಿ : ಅದು ಅಸಂಭವ.

ಲಕ್ಷ್ಮೀ : ಸಂಪೂರ್ಣ ಸಂಭವವೇ ಅದು! ನಿನ್ನ ಪ್ರಚೋದನೆಯೇ ಇದು. ನಿನಗೆ ಸದಾ ನನ್ನ ಮೇಲೆ ಕಡುಕೋಪ, ತಿರಸ್ಕಾರ: ಏಕೆಂದರೆ ನಾನು ನಿನ್ನ ಭಕ್ತರ ಮೇಲೆ ಪ್ರಸನ್ನಳಾಗುವುದೇ ಇಲ್ಲ. ಕವಿಗಳು, ಗಾಯಕರು, ಚಿತ್ರಕಾರರು, ಪಂಡಿತರು, ವಿವಿಧಕಲಾಪಂಡಿತರು ಅವರೆಲ್ಲ ಬಡತನದ ಕೆಸರಿನಲ್ಲಿ ಹೊರಳಾಡುತ್ತಿದ್ದಾರೆ ಭೂಲೋಕದಲ್ಲಿ; ಉಪವಾಸದಿಂದ ನರಳುತ್ತಿದ್ದಾರೆ ದೀನರಾಗಿ. ಅದಕ್ಕೆಂದೇ ನನ್ನ ಮೇಲೆ ಸೇಡು ತೀರಿಸಿಕೊಳ್ಳಲೆಂದು ನೀನೀಗ ದೇವ ದಾನವ, ಗಂಧರ್ವಕಿನ್ನರಕಿಂಪುರುಷರೆಲ್ಲರೆದುರಿಗೆ ನನ್ನನ್ನು—ಅವಮಾನಗೊಳಿಸುವ ಉದ್ದೇಶದಿಂದ—

ಸರಸ್ವತಿ, ಲಕ್ಷ್ಮೀ, ಚಿತ್ರಲೇಖೆ, ಊರ್ವಶೀ, ವಿಷ್ಣು } (ಏಕಕಾಲಕ್ಕೆ)

ಅದು ಮಿಥ್ಯಾರೋಪ. ಅದು ನನ್ನ ಉದ್ದೇಶವಾಗಿರಲೇ ಇಲ್ಲ. ನೀನು ಬೇಕೆಂತಲೇ ಹೂಡಿದ ಆಟವಿದು. ನಾಟಕ ಬರಿ ನೆಪಕ್ಕೆ. ನಾನು ತಿಳಿಯದೆ ಮಾಡಿದ ತಪ್ಪಿಗೆ ಅವಳನ್ನೇಕೆ ದೂರುವೆ ವೃಥಾ? ಅವೆಲ್ಲ ನಾನೇ ಯೋಚಿಸಿ ಆಡಿದ ಮಾತುಗಳು. ಯಾರೂ ನನಗೆ ಹೇಳಿಕೊಡಲಿಲ್ಲ ಲಕ್ಷ್ಮೀ, ಸಮಾಧಾನ ತಾಳು……(ಇತ್ಯಾದಿ)

ಭರತ : (ಅಧಿಕಾರ ವಾಣಿಯಿಂದ) ಶಾಂತಿ! ಶಾಂತಿ! (ಒಮ್ಮೆಲೆ ಸದ್ದೆಲ್ಲ ಅಡಗುವುದು.) ಊರ್ವಶೀ, ಇದೆಲ್ಲ ಅನಾಹುತಕ್ಕೆ ಮೂಲಕಾರಣ ನೀನು. ನೀನು ನಿನಗಿತ್ತ ಪಾತ್ರವನ್ನು ಕೆಡಿಸಿದೆ, ನಾಟಕವನ್ನು ಹಾಳು ಮಾಡಿದೆ, ತನ್ಮೂಲಕ ನನ್ನನ್ನು ಅವಮಾನಗೊಳಿಸಿದೆ, ನಾಟಕ ರಚಯಿತೆಗೆ ಅನ್ಯಾಯ ಎಸಗಿದೆ, ಅನುಕೃತ ದೇವಿಗೆ ಅಪಚಾರಗೈದೆ. ನಿನ್ನ ಪ್ರಿಯಕರ ಪುರೂರವನ ನಾಮವನ್ನು ಪುರುಷೋತ್ತಮನ ಸ್ಥಾನದಲ್ಲಿ ಸೇರಿಸಿ ಶ್ರೀ ಮಹಾವಿಷ್ಣುವಿನ ಘನತೆಗೆ ಕುಂದು ತಂದಿರುವೆ. ಅದರೊಡನೆ ನಿನ್ನ ಹಾಳು ಗುಪ್ತಪ್ರಣಯವನ್ನು ಬಹಿರಂಗಗೊಳಿಸಿ ನೀನು ಸ್ವತಃ ಸರ್ವರ ತಿರಸ್ಕಾರಕ್ಕೆ ಪಕ್ಕಾದೆ. ನಿನ್ನ ನಾಥ ದೇವೇಂದ್ರನನ್ನು ನಗೆಗೆಡ ಮಾಡಿದೆ. ಇಡಿಯ ಸ್ವರ್ಗಲೋಕಕ್ಕೆಯೆ ನೀನೊಂದು ಕಲಂಕವಾಗಿರುವೆ. ಇನ್ನು ಮೇಲೆ ನೀನೀ ಸ್ವರ್ಗದಲ್ಲಿರಲಾಗದು

(ಸರ್ವರ ಹಾಹಾಕಾರ.)

ಊರ್ವಶೀ : (ಕರಜೋಡಿಸಿ) ಗುರುದೇವಾ, ನಾನು ಅಪರಾಧಿನಿ, ನಿಜ ಆದರೆ ನನಗೀಗ ಪಶ್ಚಾತ್ತಾಪವಾಗಿದೆ. ನನಗೆ ಬೇರಿನ್ನಾವ ಶಿಕ್ಷೆಯನ್ನಾದರೂ ವಿಧಿಸು ಆದರೆ ಸ್ವರ್ಗದಿಂದ ಮಾತ್ರ ಬಹಿಷ್ಕರಿಸಬೇಡ. ದಯದೋರು ಆಚಾರ್ಯ.

ರಂಭೆ : ಗುರುದೇವಾ, ಸ್ವರ್ಗವನ್ನಗಲಿರುವ ಶಿಕ್ಷೆಯೆಂದರೇನೆಂದು ನಾನು ಚೆನ್ನಾಗಿ ಬಲ್ಲೆ. ವಿಶ್ವಾಮಿತ್ರ ಮಹರ್ಷಿಯ ಶಾಪದಿಂದ ನಾನು ಕಲ್ಲಾಗಿ ಒಂದು ಸಾವಿರ ವರ್ಷ ಭೂಲೋಕದಲ್ಲಿ ಬಿದ್ದುಕೊಂಡಿದ್ದೆ. ಆ ನನ್ನ ಕಷ್ಟ ಮಾತ್ರ ಬೇರಾರಿಗೂ ಬೇಡ. ಊರ್ವಶಿಯ ಮೇಲೆ ಕರುಣೆದೋರು ಆಚಾರ್ಯ. ಅವಳನ್ನು ಸ್ವರ್ಗದಿಂದ ಹೊರದೂಡಬೇಡ.

ಭರತ : ಊರ್ವಶಿಯನ್ನು ಸ್ವರ್ಗದಲ್ಲಿಯೇ ಉಳಿಸಿಕೊಳ್ಳುವ ಧಾರ್ಷ್ಟ್ಯ ನಿನಗಿದೆಯೇ ದೇವೇಂದ್ರ?

ಇಂದ್ರ : ಇಲ್ಲ ಆಚಾರ್ಯ. (ಎಲ್ಲರ ಸಹಾನುಭೂತಿಯ ಉದ್ಗಾರ.)

ಊರ್ವಶೀ : ಹಾ ಧಿಕ್ ಹಾ ಧಿಕ್! ಹಾಳಾದೆ ನಾನು. ಸ್ವರ್ಗಲೋಕಕ್ಕೊಂದು ಕಳಂಕವೆನಿಸಿತು ನನ್ನ ನಡವಳಿಕೆ! ಸಖೀ ರಂಭೆ, ನೀನೇನೋ ಋಷಿ ಶಾಪಕ್ಕೊಳಗಾಗಿ ಸ್ವರ್ಗದಿಂದ ದೂರವಿದ್ದು ಸಹಸ್ರ ವರುಷ ಕಲ್ಲಾಗಿ ಬಿದ್ದಿದ್ದೆ, ನಿಜ. ಆದರೆ ಆ ಸಂಕಟವನ್ನನುಭವಿಸುವಾಗ ನಿನಗೆ ಸ್ವಾಮಿಕಾರ್ಯವನ್ನೆಸಗಿದ ಸಮಾಧಾನವಾದರೂ ಇದ್ದಿತಲ್ಲವೆ? ಆದರೆ ನನಗೆ? ಗುರು ಭರತ ಮುನಿಗೆ ಅವಿಧೇಯ ಶಿಷ್ಯಳಾಗಿ, ಸ್ವಾಮಿ ದೇವೇಂದ್ರನನ್ನು ವಂಚಿಸಿದ ಅಪ್ಸರೆಯೆನಿಸಿ ಶಾಪಕ್ಕೆ ಗುರಿಯಾಗಿರುವ ನನಗಿನ್ನಾವ ಸಮಾಧಾನ

ವಿದ್ದೀತು?......ಸ್ವರ್ಗವನ್ನು ತೊರೆದು, ಅಯ್ಯೋ! ನಾನಿನ್ನೆಲ್ಲಿಗೆ ಹೋಗಲಿ? ಏನು ಮಾಡಲಿ ಈಗ?...ಹಾಯ್, ಸಮುದ್ರ ಮಥನದಿಂದುದಿಸಿದ ಆ ಹಾಳು ಅಮೃತವನ್ನು ನಾನೇಕೆ ಕುಡಿದೆನೊ! ಇಲ್ಲವಾದರೆ ಈಗ ಅಸು ನೀಗಬಹುದಿತ್ತು! ಮಹಾದೇವ ವಿಷಕಂಠ ತಾನುಂಡ ಹಾಲಾಹಲದೊಂದು ಹನಿಯನ್ನಾದರೂ ನನಗಾಗಿಯೀಗ ಹೊರ-ಸುರಿಸಲಾರನೇ? . ಇಲ್ಲ ಇಲ್ಲ; ಗುರುದೇವ-ನಡಿಗಳಲ್ಲಿಯೇ ಕ್ಷಮೆ ಯಾಚಿಸುವೆ. (ಭರತ ಮುನಿಯ ಪಾದಗಳಿಗೆರಗಲು ಹೋಗುವಳು.)

ಭರತ: ಪಾಪಿಣಿ, ನನ್ನ ಪಾದಗಳನ್ನು ಮುಟ್ಟಲೂ ಅನರ್ಹಳು ನೀನು! (ಬಿರಬಿರನೆ ಹೊರಟುಹೋಗುವ.)

ಉರ್ವಶೀ: ಹಾ ಧಿಕ್ ಹಾ ಧಿಕ್! ಶಾಪಕ್ಕಿನ್ನು ಉಃಶ್ಯಾಪವಿಲ್ಲದಾಯ್ತು! ಸ್ವರ್ಗ-ಲೋಕವಿನ್ನು ನನಗೆ ಎರವಾಯ್ತು. ಎಲ್ಲಿ ಹೋಗಲಿ ನಾನು?... ಓ ಉರ್ವಶೀ, ಎಂತಹ ಮೂಢೆ ನೀನು! ಶಾಪಗ್ರಸ್ತಳಾಗಿ ಸ್ವರ್ಗದಲ್ಲಿ ಸರ್ವರ ಅನಾದರಕ್ಕೆ ಪಾತ್ರಳಾಗಿ ಹೊರದೂಡಲ್ಪಟ್ಟ ನಿನ್ನನ್ನು ಇನ್ನು ಆ ಭೂಲೋಕದರಸು ಸ್ವೀಕರಿಸಿಯಾನೇ? ಓ ದೊರೆ ಪುರೂರವ. ನೀನಂದು ನನ್ನನ್ನು ಕ್ರೂರ ರಕ್ಕಸನ ಕೈಯಿಂದ ರಕ್ಷಿಸಿದುದು ಕೊನೆಗೀ ಸ್ಥಿತಿಗೆ ನನ್ನ ತರಲೆಂದೇ?... ಸರಿ.... ಈಗುಳಿದಿರುವುದು..... ಒಂದೇ ಉಪಾಯ! ಯಾವ ಅಸುರನ ವಜ್ರಮುಷ್ಟಿಗಳಿಂದ ಪುರೂರವ ನನ್ನನ್ನು ಬಿಡಿಸಿ ಕಾಪಾಡಿದನೋ ಅದೇ ಅಸುರನ ಬಳಿಗೀಗ ನಡೆಯುವೆ. ಅದರಿಂದ ನನ್ನೊಡೆಯ ಇಂದ್ರನಿಗೂ ಆಚಾರ್ಯ ಭರತಮುನಿಗೂ . ಸಂತೋಷವಾದೀತು. ಅಸುರನ ಕೈಯಲ್ಲಿಂತು ನನಗೆ ಮರಣ ಬಂದರೆ—ಮರಣ? ಓಹ್, ನನ-ಗೆಲ್ಲಿ ಮರಣ? ಆ ಭಾಗ್ಯವೆಲ್ಲಿ! ಬರೀ ಯಾತನೆ! ಅಸುರನಿಂದ ನನಗಿನ್ನು ಅನಂತ ಯಮಯಾತನೆ! ಸ್ವರ್ಗವನ್ನು ತೊರೆದು, ಪುರೂರವನಿಂದಲೂ ಅಗಲಿ ಬಾಳುವ ಘನ ಘೋರ ಯಾತನೆಯೆದುರು ಅದು ಕ್ಷುಲ್ಲಕವೆನಿಸೀತು; ಪ್ರತಿಯಾಗಿ ಸುಖವೆನಿಸೀತು! ಇದೋ, ನಿಮ್ಮನ್ನೆಲ್ಲ ಬಿಟ್ಟೀಗ ಹೊರಟು ಹೋಗುತ್ತಿದ್ದೇನೆ ಸಖಿಯರೆ, ದೇವತೆಗಳೆ! ನಿಮಗೆಲ್ಲ ಶುಭವಾಗಲಿ! ಆಚಾರ್ಯನ ನಾಟ್ಯಪ್ರದರ್ಶನ ನಿರಾತಂಕವಾಗಲಿ...... (ಹೊರಡುತ್ತ ಮೂರ್ಛೆಹೊಂದಿ ಬೀಳುವಳು)



ಇಂದ್ರ: (ಹೋಗಿ ಅವಳ ತಲೆಯನ್ನು ತೊಡೆಯ ಮೇಲಿರಿಸಿಕೊಂಡು ಕುಳಿತು) ಉ ರ್ವ ಶೀ, ಉರ್ವಶೀ, ..

ಚಿತ್ರಲೇಖೆ: ಅಮೃತೋಪಚಾರ ಮಾಡಿರಿ, ಬೇಗ! (ರಂಭೆ ಹೋಗಿ ಒಂದು ಕಲಶದಲ್ಲಿ ಅಮೃತವನ್ನು ತಂದು ಮೂರ್ಛಿತಳ ಮುಖದ ಮೇಲೆ ಸಿಂಪಡಿಸುವಳು.)

ಇಂದ್ರ: ಎಚ್ಚರವಾಯಿತೇ ಪ್ರಿಯೇ?

ಉರ್ವಶೀ: (ಏಳುತ್ತ) ಪ್ರಿಯೆ! ಎಂದರೆ ನಾನಿನ್ನೂ ನನ್ನ ಸ್ವಾಮಿಗೆ ಪ್ರಿಯಳಾಗಿಯೇ ಇರುವೆನೇ?

ಇಂದ್ರ: ಅಹುದು.

ಊರ್ವಶೀ : ಓ! ಹಾಗಾದರೆ ನಾನಿನ್ನು ಸ್ವರ್ಗದಿಂದ ಬಹಿಷ್ಕೃತಳಾಗಬೇಕಿಲ್ಲ, ಅಲ್ಲವೆ ನಾಥಾ?

ಇಂದ್ರ : ಊರ್ವಶೀ, ನಿಷ್ಕ್ರಮಿಸಲೇಬೇಕು.

ಊರ್ವಶೀ : ಅಯ್ಯೋ ಇದೆಂತಹ ಪರಿಹಾಸ?

ಇಂದ್ರ : ನಿನಗಾಗಿ ಬೇರೊಂದು ಸ್ವರ್ಗ ಕಾದಿದೆ ಊರ್ವಶೀ.

ಊರ್ವಶೀ : ಬೇರೊಂದು ಸ್ವರ್ಗ?

ಇಂದ್ರ : ಪುರೂರವನ ಅರಮನೆ!

ಊರ್ವಶೀ : ಓ!

ಇಂದ್ರ : ನಿನಗದು ಇದಕ್ಕಿಂತ ಹೆಚ್ಚಿನ ಸ್ವರ್ಗವೆನಿಸೀತು, ಅಲ್ಲವೆ?

ಊರ್ವಶೀ : ಹಾಯ್! ಪಶ್ಚಾತ್ತಾಪದಗ್ಧಳಾದ ಮೇಲೆಯೂ ನನ್ನನ್ನು ನಾಚಿಸಿ ನೋಯಿಸುವುದೇ ನಾಥಾ?

ಇಂದ್ರ : ನೋಯಿಸಲೆಂದು ನುಡಿಯಲಿಲ್ಲ ಊರ್ವಶೀ. ನೀನು ಅನುರಕ್ತಳಾಗಿರುವುದು ದೇವತೆಗಳ ಸಖನಾದ ಆಪದ್ಬಾಂಧವನೊಬ್ಬನಲ್ಲಿ. ಅದಕ್ಕಾಗಿ ನನಗೆ ಕೋಪವಿಲ್ಲ. ನಿನ್ನಿಂದಗಲಿದ ಪುರೂರವನೂ ಅಲ್ಲಿ ಪರಿತಪಿಸತೊಡಗಿದ್ದಾನೆ. ನೀನೀಗ ಅವನ ಬಳಿ ಹೋಗು. ಅವನನ್ನೇ ನಿನ್ನ ಸ್ವಾಮಿಯೆಂದು ತಿಳಿದು ಓಲೈಸಿ ಸುಖವಾಗಿರು. ಕಾಲಕ್ರಮದಲ್ಲಿ ಅವನಿಂದ ನಿನಗೊಂದು ಮಗುವಾಗಿ ಆ ದಿವ್ಯ ತೇಜೋಮುಖವನ್ನು ಆತ ನೋಡಿದೊಡನೆ ನೀನಾಗ ಈ ಸ್ವರ್ಗಕ್ಕೆ ಹಿಂದಿರುಗಬಹುದು.

ಊರ್ವಶೀ : ಓ ದೇವ! ನೀನೀಗ ಶಾಪವನ್ನು ವರವಾಗಿ ಪರಿವರ್ತಿಸಿದೆ.

ಇಂದ್ರ : ಸರಿ. ನೀನಿನ್ನು ನಿಷ್ಕ್ರಮಿಸು.

ಊರ್ವಶೀ : ಸ್ವಾಮಿ, ನಿನ್ನ ಕರುಣೆ ಅಪಾರವಾದುದು. ನೀನೀಗ ನನ್ನನ್ನು ಕ್ಷಮಿಸದೆ ಕೋಪಗೊಂಡಿದ್ದರೆ ಆಗ ನಿಜವಾಗಿ ನೀನೆಂದಂತೆ ನನಗೆ ಪುರೂರವನ ಅರಮನೆ ಹೆಚ್ಚಿನ ಸ್ವರ್ಗವಾಗಿ ತೋರಬಹುದಿತ್ತು. ಆದರೀಗಲೋ ನಾನಲ್ಲಿಗೆ ಅರೆಮನಸ್ಸಿನಿಂದ ಹೊರಟಿರುವೆ— ನಿನ್ನಾಜ್ಞೆ ಪಾಲಿಸಲೆಂದು. ಎಲೈ ದೇವದೇವತೆಗಳೇ, ಅಪ್ಸರೆಯರೇ, ನಿಮ್ಮ ಸಖಿಯನ್ನು ಹರಸಿ ಬೀಳ್ಕೊಡಿರಿ. ರಂಭೆ, ತಿಲೋತ್ತಮೆ, ಮೇನಕೆ, ಗುರುದೇವ ಭರತಮುನಿಗೆ ನನ್ನ ನಮನಗಳನ್ನು ಹೇಳಿರಿ. ಹೋಗಿ ಬರುವೆ ಸ್ವಾಮೀ. (ಎಂದು ಇಂದ್ರನ ಪಾದಗಳಿಗೆ ನಮಿಸಿ ಚಿತ್ರಲೇಖೆಯೊಂದಿಗೆ ತೆರಳುತ್ತಾಳೆ. ಎಲ್ಲರೂ ಅತ್ತಲೇ ನೋಡುತ್ತ ನಿಲ್ಲುತ್ತಾರೆ).

ಇಂದ್ರ : (ಮುಖ ತಿರುಗಿಸುತ್ತ, ಭಾರವಾದ ಧ್ವನಿಯಲ್ಲಿ) ನಿಷ್ಕ್ರಾಂತಾ ಊರ್ವಶೀ!

( ತೆರೆ )



ಸಣ್ಣ ಬಾಲಕನೊಬ್ಬ ಕಳವು ಮಾಡಿದಾಗ ಅಂಗಡಿಕಾರ ಆತನನ್ನು ಹಿಡಿದು ಪೋಲೀಸರಿಗೆ ಕೊಟ್ಟ. ಪೋಲೀಸರು ಆ ಬಾಲಕನನ್ನು ಕೋರ್ಟಿನಲ್ಲಿ ಹಾಜರುಪಡಿಸಿದರು. ಇದು ಬಾಲಕನ ಪ್ರಥಮ ಅಪರಾಧವಾಗಿದ್ದರಿಂದ ನ್ಯಾಯಾಧೀಶರು ಆತನನ್ನು ಬಿಟ್ಟುಬಿಟ್ಟರು. ಆಗ ಅವರು, "ಹುಡುಗಾ ನೀನಿನ್ನೂ ಚಿಕ್ಕವ. ದುಷ್ಟ ಜನರಿಂದ ಯಾವಾಗಲೂ ದೂರವಿರಬೇಕು ತಿಳಿಯಿತೇ?" ಎಂದರು.

ಆಗ ಬಾಲಕ, "ಮೊದಲೇ ಅದು ಗೊತ್ತಿತ್ತು ಸ್ವಾಮಿ. ಅದ್ದರಿಂದಲೇ ನಾನು ಆ ಅಂಗಡಿಕಾರನಿಂದ ತಪ್ಪಿಸಿಕೊಳ್ಳಲೆತ್ನಿಸಿದೆ. ಆದರೆ ಆತ ಹಿಡಿದೇಬಿಟ್ಟ" ಎಂದ.

# ಇದುವೆ ಜೀವ ಇದು ಜೀವನ

ನನಗೊಬ್ಬ ಗೆಳೆಯನಿದ್ದಾನೆ. ಆತ ಮಾತನಾಡುವಾಗ, ಸಮಯ ಸಂದರ್ಭಗಳ ಪರಿವೆಯಿಲ್ಲದೆ ತನ್ನ ಮಾತಿನಲ್ಲಿ ಗಾದೆಗಳನ್ನು ಪೋಣಿಸಿ ಹೇಳುವುದರಲ್ಲಿ ನಿಸ್ಸೀಮ. ಅವನ ಗಾದೆಗಳು ಬಹುಪಾಲು ವಿನೋದವಾಗಿರುವುದಲ್ಲದೆ, ಕೆಲವು ಬಾರಿ ಆಭಾಸಕ್ಕೆಡೆ ಮಾಡಿಕೊಟ್ಟ ಪ್ರಸಂಗಗಳೂ ಉಂಟು.

ಇತ್ತೀಚೆಗೆ, ನಾವು ನಾಲ್ಕೈದು ಮಂದಿ ಗೆಳೆಯರು, ನಮ್ಮ ಪರಿಚಿತರೊಬ್ಬರ ಮನೆಯಲ್ಲಿ ನಡೆದ ಮದುವೆಗೆ ಹೋಗಿದ್ದೆವು. ನಮ್ಮ ಕೂಟದಲ್ಲಿ, ಈ 'ಗಾದೆ' ಮಿತ್ರನೂ ಇದ್ದನೆಂದೂ ಹೇಳಬೇಕಿಲ್ಲವಷ್ಟೆ. ಮದುವೆಗೆ ಆಮಂತ್ರಿತರು ಬಹುಸಂಖ್ಯೆಯಲ್ಲಿ ಬಂದಿದ್ದುದರಿಂದ ಮದುವೆಯ ಊಟಕ್ಕೆ ನಮ ಸರದಿಗಾಗಿ ಬಹಳ ಹೊತ್ತು ಕಾಯುತ್ತ ಕುಳಿತಿದ್ದೆವು. ಈ ನಡುವೆ, ನಮ್ಮ 'ಗಾದೆ' ಮಿತ್ರ ಎಲ್ಲೋ ನಾಪತ್ತೆ. ಮೊದಲೇ ಹಸಿವು ಬೇರೆ. ಮದುವೆ ಮನೆಯಲ್ಲಿ ಊಟಕ್ಕೆ ಕಾಯಿಸುತ್ತಿದ್ದವರ ಬಗ್ಗೆ ನಮ್ಮ ನಮ್ಮಲ್ಲೇ ಅಸಮಾಧಾನ ವಿನಿಮಯ ಮಾಡಿಕೊಳ್ಳುತ್ತಿದ್ದಂತೆಯೇ, ಆಗಲೇ ಊಟ ಮುಗಿಸಿದ ಸಂಕೇತವಾಗಿ ವೀಳ್ಯ ಮೆಲ್ಲುತ್ತಾ ನಮ್ಮ 'ಗಾದೆ' ಮಿತ್ರ ಹಾಜರಾಗಬೇಕೆ! ಸಾಲದುದಕ್ಕೆ, ನಮ್ಮನ್ನು ಚುಡಾಯಿಸಲು ಆತ "ಏನ್ರೋ, ಇನ್ನೂ ಬೆಪ್ಪರಂತೆ ಊಟಕ್ಕೆ ಕಾಯ್ತಾ ಇದ್ದೀರ? ಹೇಗೋ ಸಾವರಿಸಿಕೊಂಡು 'ಗುಂಪಿನಲ್ಲಿ ಗೋವಿಂದ'ನಂತೆ ಅವಕಾಶ ನೋಡ್ಕೊಂಡು ಊಟಕ್ಕೆ ಕುಳಿತ್ಕೊಳ್ಳೋದು ಬಿಟ್ಟು...ನಾನೇ ವಾಸಿ, 'ಮುಂಡೆ ಮದುವೆಯಲ್ಲಿ ಉಂಡವನೇ ಜಾಣ' ಅಂತ ಊಟ ಮುಗಿಸ್ಬಿಟ್ಟೆ..." ಎಂದು ಜೋರಾಗಿ ಹೇಳಬೇಕೆ!

— ಎಸ್. ವೇಣುಗೋಪಾಲ್

ಬಹಳ ದಿನಗಳ ನಂತರ ನನ್ನ ಧಾರವಾಡದ ಗೆಳೆಯ ನಮ್ಮೂರಾದ ಹಿರಿಯೂರಿಗೆ ರಜೆಗೆಂದು ಬಂದಿದ್ದನು. ಅಂದು ಸಂಜೆ ತಿರುಗಾಡಲು ಹೊರಟ ನಾವು ಕಾಫಿಗೆಂದು ಬಸ್ ನಿಲ್ದಾಣದ ಹೊಟೆಲ್‌ಗೆ ಹೋದೆವು. ನಮ್ಮ ಹಿಂದೆಯೇ ಹೊಟಿಲಿಗೆ ಬಂದ ವ್ಯಕ್ತಿಯೊಬ್ಬರು ನಾವು ಕುಳಿತ ಟೇಬಲಿನಲ್ಲಿಯೇ ಎದುರಿನಲ್ಲಿ ಕುಳಿತರು. ಬಹಳ ದಿನಗಳ ನಂತರ ನಮ್ಮೀರ್ವರ ಭೇಟಿಯಾಗಿದ್ದರಿಂದ ನನ್ನ ಸ್ನೇಹಿತನಿಗೆ ಸಿಹಿ ತಿನ್ನುವ ಆಲೋಚನೆಯಿತ್ತು. ಮಾಣಿ ನಮ್ಮ ಪಕ್ಕದ ಟೇಬಲ್ಲಿಗೆ ಬರುತ್ತಿದ್ದ ಹಾಗೆಯೇ ನನ್ನ ಸ್ನೇಹಿತನು ಎರಡು ಶಿರಾ ಕೊಡ್ರಿ ಎಂದು ಹೇಳಿದ. ಮಾಣಿ ಅತ್ತ ಹೋಗುತ್ತಿದ್ದ ಹಾಗೆಯೇ ಎತ್ತಲೋ ನೋಡುತ್ತಿದ್ದ ನಮ್ಮೆದುರಿನ ವ್ಯಕ್ತಿ ಟಿಕೆಟ್ ಪುಸ್ತಕ ತೆಗೆದು ಶಿರಾಕ್ಕೆ ಎರಡು ಸೀಟ್ ಎಂದು ಟಿಕೆಟ್ ಕೊಟ್ಟರು. ಕಕ್ಕಾಬಿಕ್ಕಿಯಾದ ನನ್ನ ಸ್ನೇಹಿತನಿಗೆ ನಾನು ವಿಷಯ ಏನೆಂದು ಹೇಳುವುದರಲ್ಲಿಯೇ ಹೊಟೆಲಿನ ಮಾಣಿ ಶಿರಾ (ಕೇಸರಿಭಾತ್) ತಂದ. ನಮ್ಮೆದುರಿನ ವ್ಯಕ್ತಿಗೆ ತನ್ನ ತಪ್ಪಿನ ಅರಿವಾಗಿ

ನಗುವಿನೊಂದಿಗೆ ತನಗೂ ಒಂದು ಶಿರಾ ತರಲು ಹೇಳಿದರು. ಅನಂತರ ವಿಚಾರಿಸಲಾಗಿ ಆ ವ್ಯಕ್ತಿ ಇನ್ನರ್ಧ ಗಂಟೆಯಲ್ಲಿ ಶಿರಾಕ್ಕೆ ಹೊರಡಲಿದ್ದ ಖಾಸಗಿ ಬಸ್‌ನ ಏಜೆಂಟ್ ಎಂದು ತಿಳಿಯಿತು. ಅಂದಿನ ಶಿರಾದ ಸಿಹಿ ಇಂದಿಗೂ ನಮ್ಮ ನೆನಪಿನಿಂದ ಮಾಸದೆ ಮಧುರವಾಗಿದೆ. —ತಿ. ನಿರಂಜನ

ನಮ್ಮ ಮದುವೆ ಆದ ಹೊಸತರಲ್ಲಿ ಈ ಊರಿಗೆ ವರ್ಗವಾಯಿತು. ಮನೆಯಲ್ಲಿ ನಾವಿಬ್ಬರೇ. ಅಡಿಗೆ ಎಷ್ಟು ಕಡಿಮೆ ಮಾಡಿದರೂ ಉಳಿದು ಹೋಗುತ್ತಿತ್ತು. ಅಂಥದರಲ್ಲಿ ಒಂದು ದಿನ ಸಂಜೆ ಮಾಡಿದ ಸಾರಿನಲ್ಲಿ ಎರಡು ಬಟ್ಟಲು ಉಳಿಯಿತು. ನನ್ನದು ಯಾವಾಗಲೂ ಶೀಘ್ರ ಕೋಪ ಪ್ರವೃತ್ತಿ. ಅದನ್ನೆ ವಿನೋದವಾಗಿ ಹರಿ ವರ್ಣಿಸುತ್ತಿದ್ದರು ನನ್ನ ವಿನೋದ ಪ್ರಕೃತಿಯ ಯಜಮಾನರು. ಆ ಎರಡು ಬಟ್ಟಲು ಸಾರನ್ನು ನನಗೊಬ್ಬಳಿಗೇ ಕಬಳಿಸೆಂದು ಹೇಳಿ ನನ್ನ ಯಜಮಾನರು ಕೈ ತೊಳೆಯಲೆದ್ದರು. ನನಗೆ ಸಿಟ್ಟು ಬಂದು ನಾನು, "ಅದನ್ನು ಕುಡಿದು ನಾನೇನು ಸಾಯಲೇನು?" ಎಂದು ಬಿರುಸಿನಿಂದಲೇ ಕೇಳಿದೆ. ಒಂದು ನಿಮಿಷ ಮೌನ ಮನೆಯನ್ನಾವರಿಸಿತು. ನಂತರ ಯಜಮಾನರು ನಿದಾನವಾಗಿ, "ನೀನು ಸಾಯಬೇಡ, ಸತ್ತ ಹಾಗೆ ಮಾಡು. ಯಮರಾಯ ಬರುತ್ತಾನೆ. ಅವನು ಪಾಶ ಒಗೆಯುವ ಮೊದಲೇ 'ಹಾತಡಿ' ಎಂದು ಅವನಿಗೆ ಹೇಳು. ಅವನು 'ಏಕೆ' ಅನ್ನುತ್ತಾನೆ. ಆಗ ನೀನು, ಈ ಎರಡು ಬಟ್ಟಲು ಸಾರು ಕುಡಿ. ನೀನು ಹೇಳಿದಲ್ಲಿಗೆ ನಾನು ಬರುವೆನೆಂದು ಹೇಳು. ಅವನು 'ಇಷ್ಟೆ ಅಹುದಲ್ಲೊ' ಅನ್ನುವ. ಅಂದು, ಮುಂದೆ ಬಂದು ಒಂದು ಬಟ್ಟಲನ್ನು ಎತ್ತಿ ಗಂಟಲಿಗಿಳಿಸುವ, ಆಗ ಅವನಿಗೆ ಗೊತ್ತಾಗುವುದು. ಯಾಕೆ ನೀನು ಈ ಕರಾರನ್ನು ಹಾಕಿದಿ ಎಂದು. ಇನ್ನೊಂದು ಬಟ್ಟಲನ್ನು ಅವನಿಂದ ಕಬಳಿಸುವುದಾಗುವುದಿಲ್ಲ. ಅವನಿಗೆ ತಟ್ಟನೆ ಒಂದು ವಿಚಾರ ಹೊಳೆದು ತನ್ನ ವಾಹನವನ್ನು ಕರೆಯುತ್ತಾನೆ. ಅದಕ್ಕೆ ಮುಖ ಮೇಲೆತ್ತುವದಕ್ಕೆ ಹೇಳುತ್ತಾನೆ. ಅದು ಎತ್ತುತ್ತದೆ. ಬಾಯಿ ತೆಗೆ ಎನ್ನುವ. ಬಾಯಿ ತೆಗೆದ ಮೇಲೆ, ಅದರಲ್ಲಿ ಉಳಿದ ಒಂದು ಬಟ್ಟಲು ಸಾರನ್ನು ಹಾಕುತ್ತಾನೆ. ಒಂದೇ ನಿಮಿಷ. ಆ ಕೋಣ ದಿಕ್ಕೆಟ್ಟು ಓಡುತ್ತದೆ. ವಾಹನ ಹೋಯಿತೆಂದು ಯಮನು ಅದನ್ನು ತರಲು ಅದರ ಬೆನ್ನ ಹಿಂದೆ ಓಡುವ. ತಿರುಗಿ ನಿನ್ನ ತಂಟೆಗೆ ಎಂದೂ ಬರಲಾರ. ನೀನು ಸಾಯುವುದೂ ಇಲ್ಲ. ನಿನ್ನ ಸಾರೂ ಖರ್ಚಾಗುತ್ತದೆ." ಇದೆಲ್ಲಾ ಕೇಳುವಾಗ ನಾನು ಹೊಟ್ಟೆ ಹುಣ್ಣಾಗುವಂತೆ ನಕ್ಕೆ ಕಾರಣ, ನನ್ನ ಹೊಟ್ಟೆಯಲ್ಲಿ ಆ ಎರಡು ಬಟ್ಟಲು ಸಾರಿಗೂ ಸ್ಥಳಾವಕಾಶವಾಗಿತ್ತು.

—ಸೌ. ಶಾರದಾ ಮಾಸೂರ



ಯಾವ ಕೆಲಸ ಮಾಡಿದರೆ ಅದರಿಂದ ಕೊನೆಗೆ ಪಶ್ಚಾತ್ತಾಪ-ದುಃಖ ಉಂಟಾಗುತ್ತದೆಯೋ ಅದನ್ನು ಮಾಡದಿರುವುದೇ ಒಳ್ಳೆಯದು. —ಬುದ್ಧ

# ರಾಜಕುಮಾರಿ

ಇದು ಫಿನ್ನಿಶ್ ಕಾದಂಬರಿ Princessanನ ಸಂಗ್ರಹ. ಇದರ ಕರ್ತೃ ಗುನ್ನಾರ್ ಮ್ಯಾಟ್‌ಸನ್. ಆತ ಹುಟ್ಟಿದ್ದು ಫಿನ್ಲೆಂಡಿನ ಹೆಲ್ಸಿಂಕಿಯಲ್ಲಿ. ಸ್ವೀಡಿಶ್ ಇವರ ಮಾತೃಭಾಷೆ. ತಂದೆ ಹಡಗಿನ ಕ್ಯಾಪ್ಟನ್. ಆತ ಸತ್ತಾಗ ಈತನ ವಯಸ್ಸು ಮೂರು. ಹದಿನೈದರಲ್ಲಿ ಶಾಲೆಯನ್ನು ಬಿಟ್ಟು ಕೆಲಸದಲ್ಲಿ ತೊಡಗಿದರು. ೧೯೬೦ ರಲ್ಲಿ ಪತ್ರಿಕೋದ್ಯಮಿಯಾಗಿ ಫಿನ್ನಿಶ್ ದೈನಿಕದಲ್ಲಿ ಸೇರಿ, ೧೯೬೧ ರಲ್ಲಿ ಸ್ವೀಡನ್‌ನ ಒಂದು ಪತ್ರಿಕೆಗೆ ಬದಲಾವಣೆಹೊಂದಿ, ಅಮೇರಿಕ, ಆಫ್ರಿಕಗಳಲ್ಲಿ ವರದಿಗಾರರಾಗಿ ಸಂಚರಿಸಿದರು.

ಮ್ಯಾಟ್‌ಸನ್‌ರವರ ಪ್ರಥಮ ಕಾದಂಬರಿ ೧೯೬೪ ರಲ್ಲಿ ಪ್ರಕಟವಾಯಿತು. ೧೯೬೫ ರಲ್ಲಿ ಎರಡು ಮಕ್ಕಳ ಹೊಣೆಗಾರಿಕೆ ವಹಿಸಿಕೊಂಡ ಒಂಟಿ ತಂದೆಯ ಕಥಾವಸ್ತುವುಳ್ಳ ಕಾದಂಬರಿ 'ಲಾಪಿಟಿಪ್' ಪ್ರಕಟವಾಯಿತು. ಇದು ಅವರಿಗೆ ಬಹಳ ಗೌರವವನ್ನು ತಂದಿತು. ಈ ಕಾದಂಬರಿಯನ್ನು ಕಟ್ಟುಕಥೆಯೆಂದು ನಂಬದೆ, ಅನೇಕ ಅವಿವಾಹಿತ ಯುವತಿಯರಿಂದ ಅವರಿಗೆ ವಿವಾಹದ ಪ್ರಸ್ತಾಪ ಬಂದಿತು !

ಆದರೆ Princessan ಗುನ್ನಾರ್ ಮ್ಯಾಟಸನ್‌ರವರಿಗೆ ಒಂದೇ ರಾತ್ರಿಯಲ್ಲಿ ಪ್ರಪಂಚಖ್ಯಾತಿಯನ್ನು ತಂದಿತು. ಈ ಕಾದಂಬರಿ ವಿಶ್ವದ ಹದಿನಾರು ಭಾಷೆಗಳಲ್ಲಿ ವಿವಿಧರೂಪಗಳಲ್ಲಿ ಪ್ರಕಟವಾಗಿ ಸ್ವೀಡನ್ನಿನ ರಜತ ಪರದೆಯ ಮೇಲೂ ಮೂಡಿದೆ.

ಕೆಲವೇ ತಿಂಗಳುಗಳಲ್ಲಿ ಮೃತ್ಯುವನ್ನು ಆಲಿಂಗಿಸಲು ಸಿದ್ಧಳಾಗಿದ್ದು, ಆದರೆ ಪ್ರೀತಿಯಿಂದ, ಆರೋಗ್ಯಹೊಂದಿ, ತಾಯಿಯಾದ ಫಿನ್ನಿಶ್ ಯುವತಿಯ ಈ ಸತ್ಯ ಕಥೆಯನ್ನು ಪ್ರಕಟಿಸದ ಫಿನ್ಲೆಂಡಿನ ಪತ್ರಿಕೆಯೇ ಇಲ್ಲ. ಸೀಜಾ ಮ್ಯಾಟ್‌ಸನ್ ಆರೋಗ್ಯವಂತಳಾಗಿ, ಫಿನ್ನಿಶ್ ಆಸ್ಪತ್ರೆಯೊಂದರಲ್ಲಿ ನರ್ಸ್ ಆಗಿದ್ದಾರೆ. ಆಕೆಯ ಮಗನಿಗೆ (ಕಾಜ್ ಮೈಕೇಲ್) ಈಗ ಮೂರು ವರ್ಷ.

ಆ ಶರತ್ಕಾಲದಲ್ಲಿ ನಾನಿದ್ದ ಪರಿಯನ್ನುನೆನೆದು ನನಗೆ ನಾಚಿಕೆಯಾಗುತ್ತದೆ. ನನಗಾಗ ಇಪ್ಪತ್ತಾರು ವರ್ಷ. ಒಳ್ಳೆಯ ಕೆಲಸ. ಒಂಟಿ ತಂದೆ, ಐದು ವರ್ಷದ ಹುಡುಗ ಮತ್ತು ಕೈಗೂಸು ಈ ಪಾತ್ರಗಳನ್ನೊಳಗೊಂಡ ಒಂದು ಕಾದಂಬರಿಯನ್ನು ಬರೆದು ನಾನು ಜನಪ್ರಿಯತೆಯನ್ನು ಗಳಿಸಿದ್ದೆ. ನನ್ನನ್ನು ಮದುವೆಯಾಗುತ್ತೇವೆ, ನನ್ನ ಮಕ್ಕಳನ್ನು ಸಾಕುತ್ತೇವೆ, ಎಂದು ಅಸಂಖ್ಯ ಹುಡುಗಿಯರಿಂದ ನನಗೆ ಪತ್ರಗಳ ಸುರಿಮಳೆಯೆ ಆರಂಭವಾಗಿತ್ತು.

ನಾನಾಗ ಯೋಚಿಸಿದೆ—ಬದುಕಬೇಕು ಪುಸ್ತಕಗಳನ್ನು ಬರೆಯಬೇಕು. ಸುಸ್ವಸ್ಥ ದೃಢಕಾಯದ, ಸುಂದರಿ ಕನ್ಯೆಯ ಕೈಹಿಡಿದು ತಂದೆಯಾಗಬೇಕು.

ಆದರೆ—ಆಗಿದ್ದು ಬೇರೆಯೆ ವಿದ್ಯಾರ್ಥಿಗಳ ನರ್ತನಕೂಟವೊಂದರಲ್ಲಿ ಒಂದು ಸಂಜೆ ಆ ಹುಡುಗಿಯನ್ನು ಸಂಧಿಸಿದೆ—ಅದರ ಕಥೆಯೆ ಇದು :

ಯಾವ ಹುಡುಗಿಯೊಡನೆಯೂ ನರ್ತಿಸಲು ಮನಸಾಗದೆ ಸುಮ್ಮನೇ ಕುಳಿತಿದ್ದೆ. ವಾದ್ಯದ ನುಡಿ ಉತ್ಥಾನದಲ್ಲಿದ್ದಾಗ ಎತ್ತರವಾಗಿದ್ದ ಸುಂದರಿಯೊಬ್ಬಳು ನನ್ನ ಕಣ್ಣಿಗೆ ಬಿದ್ದಳು. ಅವಳ ಮುಖ ನೋವಿನಿಂದ ಪೀಡಿತವಾಗಿದ್ದಂತೆ ಅನಿಸಿತು. ನಾವು ನರ್ತಿಸುತ್ತಿದಂತೆ,

"ಯಾವನಾದರೂ ರಾಜಕುಮಾರನನ್ನು ಈ ಸಂಜೆ ಸಂಧಿಸಿದಿರಾ ?" ನಾನೇ ಧೈರ್ಯವಹಿಸಿ ಕೇಳಿದೆ

"ಇಲ್ಲ."

ನಾನು ಅಪರೂಪ ಹುಡುಗಿಯರಿಗೇ ಮೀಸಲಾಗಿಟ್ಟಿದ್ದ ಮುಗುಳ್ನಗೆಯನ್ನು ಬೀರಿದೆ. ಏನೂ ಪ್ರಯೋಜನವಾಗಲಿಲ್ಲ. ಅವಳು ಬೇಕೆಂದೇ ಸೆಟೆದುಕೊಂಡಂತೆ ನರ್ತನದ ವೇಗ ಇಳಿಸಿದಳು.

ಆಕೆಗೆ ಸುಂದರ ಕಿನ್ನರ ಕಥೆಯನ್ನೊಂದು ಹೇಳಬೇಕೆಂದುಕೊಂಡೆ.

"ಒಂದಾನೊಂದು ಕಾಲದಲ್ಲಿ, ನರ್ತಿಸಲು ಅಪ್ಪಣೆ ಇಲ್ಲದ ರಾಜಕುಮಾರಿಯೊಬ್ಬಳಿದ್ದಳು," ನಾನು ಪ್ರಾರಂಭಿಸಿದೆ.

ಆಕೆ ಶುಷ್ಕ ನಗೆಯೊಂದನ್ನು ಬೀರಿದಳು

ನಾನು ಕಥೆಯನ್ನು ಮುಂದುವರಿಸಿದೆ.

"ಆಗ ಕಿನ್ನರ ದೇವತೆಯೊಬ್ಬಳು ಬಂದು, ರಾಜಕುಮಾರಿಗೆ ಮೂರು ವರಗಳನ್ನು ನೀಡಿದಳು ರಾಜಕುಮಾರಿ ಸಂತೋಷಗೊಂಡು, ಬೇಡಿದ ಮೊದಲನೇ ವರ— ಕೋಗಿಲೆಯ ಕಂಠಬೇಕೆಂದು. ಈ ವರ ಸಿದ್ಧಿಸಿದಾಗ, ಆಕೆ ಎರಡನೇ....."

ಆ ಕ್ಷಣದಲ್ಲಿ ಆಕೆ ಏನೋ ಗೊಣಗಿ ಓಡಿದಳು. ಬಾಗಿಲ ಹೊರಗೆ. ನಾನೂ ಹಿಂಬಾಲಿಸಿದೆ. ಆಕೆಯ ಮೈಯಲ್ಲಿ ಸ್ವಸ್ಥವಿರಲಿಲ್ಲ.

"ಕ್ಷಮಿಸಿ". ವಾಂತಿಯಾದ ನಂತರ ಹೇಳಿದಳು. ಆಕೆಯ ಧ್ವನಿಯಲ್ಲಿ ಏನೋ ಸಂಕಟವನ್ನು ಕಂಡು ಆಕೆಯ ಮನೆತನಕ ಬೆಂಗಾವಲಾಗಿ ಹೋಗಬೇಕೆನಿಸಿತು.

"ನಿಮ್ಮಲ್ಲಿ ರಸಿಕತೆ ಇಲ್ಲ. ನರ್ತನ ಕೂಟದ ಮಧ್ಯದಲ್ಲಿ ಹೊರಗೆ ಓಡಿದಿರಿ. ಅದರಲ್ಲಿ ತಪ್ಪೇನೂ ಇಲ್ಲ. ಆದರೆ ಸಾಮಾನ್ಯವಾಗಿ ರಾಜಕುಮಾರಿಯರು, ಮಹಡಿಯ ಮೆಟ್ಟಿಲಿನ ಹಿಂದೆ ತಮ್ಮ ಒಂದು ಪಾದುಕೆಯನ್ನಾದರೂ ಬಿಟು ಹೋಗುತ್ತಾರೆ. ಆದರೆ ನೀವು ನಿಮ್ಮ ಹೊಟ್ಟೆಯೊಳಗಿದ್ದುದನ್ನಷ್ಟೆ ಬಿಟ್ಟುಬಂದಿರಿ..."

ಒಂದು ಹಣನಗೆ ಬೀರಿದಳು ಆಕೆ. ನಾನಾದರೂ ಏನಾದರೂ ಮಾತಾಡಬೇಕೆಂದು ಮಾತಾಡಿದ್ದೆ ಅಷ್ಟೆ. ಅವಳ ಗೊಡವೆಯನ್ನು ಬಿಡಬೇಕು. ನೃತ್ಯಮಧ್ಯದಲ್ಲಿ ಅಸ್ವಸ್ಥಳಾಗುವ ಹುಡುಗಿಯ ತಳ್ಳಿ ನನಗೇಕೆ?

"ಮುಂದೆ ಏನಾಯಿತು ?" ಅವಳು ಕೇಳಿದಳು. ಅವಳೂ ಶಿಷ್ಟಾಚಾರಕ್ಕೆ ಕೇಳಿದ್ದಳಷ್ಟೇ.

ಇಷ್ಟವಿಲ್ಲದೆ ಕಥೆಯನ್ನು ಮುಂದುವರಿಸಿದೆ. ಮುಗಿಯುವ ಹೊತ್ತಿಗೆ ಆಕೆ ವಾಸಿಸುತ್ತಿದ್ದ ಮನೆಯ ಬಳಿ ಬಂದೆವು. ಆಕೆ ಹೊಸತಾಗಿ ತರಬೇತಾದ ನರ್ಸ್ ಆಗಿದ್ದಳು.

"ನನ್ನ ಮೈಯಲ್ಲಿ ಹುಷಾರಿಲ್ಲ. ಕ್ಷಮಿಸಿ."

"ಪರವಾಗಿಲ್ಲ, ರಾಜಕುಮಾರಿ."

ಆಕೆ ಕೊಠಡಿಯ ಕದ ಹಾಕಿಕೊಂಡ ಮೇಲೆ ನಾನು ಓಡುತ್ತಲೇ ಎಂಬಂತೆ, ನರ್ತನ ಕೂಟದ ಜಾಗಕ್ಕೆ—ಉಲ್ಲಾಸದ ಹುಡುಗಿಯರ ಕೂಟಕ್ಕೆ ಹಿಂತಿರುಗಿದೆ.

ರಾಜಕುಮಾರಿ ಒಳಗೆ ಹೋದಕೂಡಲೇ ಹಾಸಿಗೆಯ ಮೇಲೆ ಉರುಳಿದಳು. ಮತ್ತೆ ನೋವು, ಆರಂಭವಾಗಿದ್ದರಿಂದ, ಆಕೆಗೆ ಒಂಟಿತನ ಬೇಕಾಗಿತ್ತು. ಮಾರನೆಯ ದಿನ ಮತ್ತೆ ದೀರ್ಘ ಚಿಕಿತ್ಸೆಯನ್ನು ಹೊಂದಬೇಕಾಗಿತ್ತು. ಮೈಯಲ್ಲಿ ಸ್ವಸ್ಥವಿಲ್ಲದಿದ್ದರೂ ನರ್ತಿಸಬೇಕೆಂಬ ಆಶೆ ಬಹಳವಾಗಿತ್ತು. ಅದಕ್ಕೇ ಬಂದಿದ್ದಳು.

ಆಕೆಗಾಗ ವಯಸ್ಸು ಇಪ್ಪತ್ತಮೂರು.

*

ನಾನು ಮತ್ತೆ ನರ್ತನ ಕೂಟಕ್ಕೆ ಹಿಂದಿರುಗಿದಾಗ, ಅಲ್ಲಿ ಇನ್ನೊಬ್ಬ ನರ್ಸ್ ಅನ್ನು ಭೇಟಿಯಾದೆ. ಸುಂದರಿ. ನರ್ತಿಸುವುದರಲ್ಲಿಯೂ ಚತುರೆ. ನಾನು ರಾಜಕುಮಾರಿಯೊಂದಿಗೆ

ಹೋಗಿದ್ದನ್ನೂ ನೋಡಿದ್ದಳು. ನನ್ನ ಹೆಸರನ್ನೂ ಅರಿತಿದ್ದಳು. ಅವಳ ಹೆಸರು ಬಿರ್ಜೋ. ಆದರೆ ಅವಳನ್ನು ಮದುವೆಯಾಗಿ, ನಾನು ಕನಸು ಕಂಡಂತೆ ಒಂದು ದ್ವೀಪವನ್ನು ಕೊಂಡು ಅವಳೊಡನೆ ನೆಲಸಿ ಸಂಸಾರಿಯಾಗಬೇಕೆಂದು ನನಗೇನೂ ಅನಿಸಲಿಲ್ಲ.

ನನ್ನ ಮನೆಗೆ ಹಿಂತಿರುಗುವಾಗ, ನನ್ನ ಜತೆಯಲ್ಲಿದ್ದ ಬಿರ್ಜೋ ರಾಜಕುಮಾರಿಯ ಬಗ್ಗೆ ಮಾತನಾಡಿದಳು.

"ನಾವಿಬ್ಬರೂ ಒಟ್ಟಿಗೇ ತರಬೇತಿಯನ್ನು ಮುಗಿಸಿದೆವು. ಆದರೆ ಅವಳ ಆರೋಗ್ಯ ಏನೇನೂ ಚೆನ್ನಾಗಿಲ್ಲ."

"ಏನು ಕಾಹಿಲೆ?"

"ಅದರ ಹೆಸರು Lymphogranuloma maligna. ಕ್ಯಾನ್ಸರ್ ರೋಗದ ಉಲ್ಬಣಾವಸ್ಥೆ. ಅದನ್ನು ಹಾಜಕಿನ್ಸ್ ಡಿಸೀಸ್ ಎನ್ನುತ್ತಾರೆ. ಆಕೆ ಬಹಳ ದಿನ ಉಳಿಯಲಾರಳು."

ಬಟ್ಟೆಯನ್ನೂ ಬಿಚ್ಚದೆ, ಹಾಸಿಗೆಯ ಮೇಲೆ ರಾಜಕುಮಾರಿ ಬಿದ್ದಿದ್ದಳು, ಬಹಳ ಹೊತ್ತಿನ ತನಕ - ಬಟೆ ಬಿಚ್ಚುವಾಗ ವಾಂತಿಯಾದೀತೆಂಬ ಭಯದಿಂದ.

ನಿದ್ದೆ ಬಂದಾಗ ಬೆಳಗಿನ ಝಾಮವಾಗಿರಬಹುದು.

ಇದ್ದಕ್ಕಿದ್ದಂತೆ ಅವಳಿಗೆ ಉಸಿರು ಸಿಕ್ಕಿದಂತಾಯಿತು. ಅವಳೊಳಗಿನ ಯಾವುದೊ ನರ ಭಯದಿಂದ ಕಂಪಿಸುತ್ತಿತ್ತು. ಕ್ಷಣ ಕ್ಷಣಕ್ಕೆ ರೂಪು ಬದಲಿಸುವ ಯೋಚನೆಗಳು ಮುತ್ತುತ್ತಿದ್ದವು. ತಿಂಗಳುಗಳಿಂದ ಅವಳನ್ನು ಕಳ್ಳ ಹೆಜ್ಜೆಯಿಂದ ಸುತ್ತುವರಿದು ಗಂಟಲಿಗೆ ಗಾಳ ಹಾಕುತ್ತಿದ್ದ ರೋಗದ ಹೆಸರು ಮನಸ್ಸಿನಲ್ಲಿ ಮಿಂಚುತ್ತಿತ್ತು.

ಆತ್ಮಹತ್ಯೆ ಮಾಡಿಕೊಳ್ಳಲೆ? ಮಾತ್ರೆಗಳು ಕೈಗೆ ಸಿಕ್ಕುವಂತಿದ್ದುವು. ಆದರೆ ತನ್ನ ತಂದೆ ತಾಯಿಗಳು ಏನನ್ನುತ್ತಾರೋ! ಅಥವಾ ತಾನೇ ಕೂಗಿಕೊಂಡುಬಿಡಬಹುದೇನೋ!

ಎಷ್ಟೋ ರಾತ್ರಿಗಳಲ್ಲಿ ಹೇಗೋ ಹಾಗೆ ಇಂದು ಕೂಡ ಹೊರಗಿನ ಪ್ರಕಾಶವನ್ನು ಕಾಣುತ್ತಿದ್ದರೂ, ಆಕೆಯಲ್ಲಿ ನಿರಾಶಾಭಾವನೆ ಹೆಚ್ಚಾಗುತ್ತಿತ್ತು. ಆದರೆ ನೋವು ಅವಳನ್ನು ಹಿಂ[illegible] ಸುತ್ತಿದ್ದರೂ ಆತ್ಮಹತ್ಯೆಯ ಅಚಲ ನಿರ್ಧಾ[illegible] ಅವಳನ್ನು ಎಂದೂ ಪೂರ್ತಿ ಹಿಡಿದುಕೊಳ್ಳಲಿಲ್ಲ[illegible] ನಾಳೆ ಮತ್ತೆ ಜನರಲ್ಲಿ ಬೆರೆತು ಓಡಾಡುತ್ತೇ[illegible] ಎಂಬ ಆಶಾ ಭಾವನೆ ಯಾತನೆಯ ಮಧ್ಯದ[illegible]ಲ್ಲಿಯೂ ಮೂಡುತ್ತಿತ್ತು.

ಅಸಹಾಯಕತೆ ಅವಳ ಚಿತ್ತವಿಕ್ಷೇಪ[illegible] ಮೂಲವಾಗಿತ್ತು. ಅವಳ ಜೀವನದಲ್ಲಿ [illegible] ವಿಮನಸ್ಕತೆಯನ್ನು ತೂಕಕ್ಕೆ ತರಬಲ್ಲ ಯಾ[illegible] ಆಕರ್ಷಣೆಯೂ ಇರಲಿಲ್ಲ.

ನೋವು, ನವೆ ವಿಪರೀತವಾದಾಗ, ರ[illegible] ಬರುವಷ್ಟು ಕೆರೆದುಕೊಳ್ಳುತ್ತಿದ್ದಳು. ಎಷ್ಟೊ[illegible] ಮುಂಜಾನೆಗಳಲ್ಲಿ ಹಲ್ಲನ್ನೂ ಉಜ್ಜುತ್ತಿರಲಿಲ್ಲ[illegible]

ಒಂದು ಸಂಜೆ ಇನ್ನು ನೋವನ್ನು ತಡೆಯ[illegible]ಲಾರೆ ಎಂದುಕೊಂಡು ಆತ್ಮಹತ್ಯೆಯೇ ಗ[illegible] ಎಂದು, ಒಗೆದ ಬಟ್ಟೆಗಳನ್ನು ಧರಿಸಿಕೊಂಡು[illegible] ತಲೆಯನ್ನು ಬಾಚಿಕೊಂಡಳು. ಆದರೆ ಆಶ್ಚರ್ಯ[illegible] ಆ ರಾತ್ರಿ ಏನೂ ಆಗಲಿಲ್ಲ. ಬರೀ ಹೆದರಿ[illegible] ಅಷ್ಟೇ!

ನಿದ್ದೆಯ ಮಂಪರಿನಲ್ಲಿ ಎರಡು ನೇತ್ರಗಳ[illegible] ಅವಳಿಗೆ ಕಂಡವು. ಯಾರ ನೇತ್ರಗಳೆಂದ[illegible] ಮಾತ್ರ ಗೊತ್ತಾಗಲಿಲ್ಲ. ಅವು ಹಾಗೇ ದೂ[illegible] ದೂರ ಪಕ್ಕಕ್ಕೆ ಸರಿದು, ಉರಿಯುತ್ತ ಲೀನವಾ[illegible]ದಂತೆ ಕಂಡಿತು, ಅವಳಿಗೆ.

೨

ಮಾರನೆಯ ದಿನ ಬೆಳಿಗ್ಗೆ, ಆಕೆ ಇತರ ನರ್ಸ್[illegible]ಗಳೊಂದಿಗೆ ಸಮುದ್ರ ದಂಡೆಗೆ ಹೋ[illegible] ಸಮುದ್ರ ಸ್ನಾನ ಮಾಡಬೇಕೆಂದುಕೊಂಡಳ[illegible] ಆತ್ಮಹತ್ಯೆಯ ಗಡಿಯನ್ನು ಮುಟ್ಟಿ ಬಂ[illegible] ಆಕೆಗೆ ಯಾವುದೋ ಹೊಸ ಹುಮ್ಮಸ[illegible] ಮೂಡಿತ್ತು.

ನಾನೂ ಬಿರ್ಜೋಳ ಸಂಗಡ ಬಂದಿದ್ದ[illegible] ಅವಳ ಪಕ್ಕದಲ್ಲಿ ಮರಳಿನ ಮೇಲೆ ಪವಡಿಸಿದ[illegible] ನಾವು ಮಾತನಾಡುತ್ತ ತಮಾಷೆ ಮಾಡಿದಾ[illegible] ರಾಜಕುಮಾರಿ ಒಮ್ಮೆ ಮಾತ್ರ ನಕ್ಕಿದ್ದಳು. [illegible] ನಗುವನ್ನು ಕಂಡಾಗ, ಅರಳುವ ಮು[illegible] ಮಂಜು ಮುತ್ತಿಟ್ಟ ಹೂವಿನ ನೆನಪಾಯಿತು.

ರಾಜಕುಮಾರಿಯನ್ನು ಬಿಟ್ಟು ಉಳಿದವರು ಯಾರೂ ನೀರಿಗಿಳಿಯಲಿಲ್ಲ. ನೀರು ಕೊರೆಸುತ್ತಿತ್ತು. ಇನ್ನೂ ಬೇಸಿಗೆ ಆರಂಭವಾಗಿರಲಿಲ್ಲ. ಆದರೆ ಆತ್ಮಹತ್ಯೆಯ ಸಾಮೀಪ್ಯವನ್ನು ಕಂಡವರು ಅಂಥಿಂಥದಕ್ಕೆ ಅಂಜುವುದಿಲ್ಲ.

ನಂತರ ಆಕೆಯೊಂದಿಗೆ ಮಾತನಾಡಿದೆ. ಮುಖದಲ್ಲಿ ಅಷ್ಟು ನಿರಾಶೆ ಕಾಣಿಸದಿದ್ದರೂ ಆಕೆಯ ಕಂಠದಲ್ಲಿ ಕಂಪನವನ್ನು ಗುರುತಿಸಿದೆ.

ಪಿಜೋರ್ ಈಜುವ ಉಡುಪಿನಲ್ಲಿ ಬಹಳ ಸುಂದರಿಯಾಗಿ ಕಣ್ಣಿಗೆ ಹಬ್ಬವನ್ನುಂಟುಮಾಡುತ್ತಿದ್ದಳು. ಅವಳ ಅಂಗಸೌಷ್ಠವ ಆಕರ್ಷಕವಾಗಿತ್ತು. ರಾಜಕುಮಾರಿ ಅವರಲ್ಲಿ ಎಲ್ಲರಿಗಿಂತ ಚೆಲುವೆಯಾಗಿದ್ದಳು. ಆದರದು ಜೀವಂತ ಸೌಂದರ್ಯವಲ್ಲ. ಅವಳನ್ನು ಒಳಗಿನಿಂದಲೇ ಅವಳ ರೋಗ ತಿಂದು ಹಾಕುತ್ತಿತ್ತು. ಅವಳ ಸೌಂದರ್ಯದಲ್ಲಿ ಕಾಮೋತ್ತೇಜಕವಾದುದೇನೂ ಇರಲಿಲ್ಲ. ಅದು ಪ್ರತಿಮೆಯ ಸೌಂದರ್ಯದಂತೆ ಕೇವಲ ಕಲಾತ್ಮಕವಾಗಿತ್ತಷ್ಟೇ.

ನೋವಿನಿಂದ ಆಕೆ ನಮ್ಮ ಮಾತುಕತೆಗಳಲ್ಲಿ ಭಾಗವಹಿಸಲಿಲ್ಲ. ಆದರೂ ನಾವು ಮಕ್ಕಳ ಲಾಲನೆ-ಪಾಲನೆಯ ಬಗ್ಗೆ ಮಾತನಾಡುತ್ತಿದ್ದಾಗ ಆಕೆ ಒಮ್ಮೆ ಮಾತ್ರ ನಮ್ಮ ಜತೆ ಚರ್ಚೆಯಲ್ಲಿ ಭಾಗವಹಿಸಿದ್ದಳು. ಆಗ ಮಾತ್ರ ಆಕೆಯ ಕಣ್ಣುಗಳಲ್ಲಿ ಪ್ರಕಾಶ ಚಿಮ್ಮಿತ್ತು.

ಆಕೆ ತಾಯಿಯಾಗುವ ಹಾಗಿರಲಿಲ್ಲ. ತನಗೇ ಆರೋಗ್ಯವಿಲ್ಲದಿರುವಾಗ, ತನಗೇ ಶಕ್ತಿ ಇಲ್ಲದಿರುವಾಗ, ಮಗುವನ್ನೇನು ಹೆರಬಲ್ಲಳು? ಆಕೆಯ ಜೀವನದ ಮೇಣದ ಬತ್ತಿ ಬಹಳ ಕಾಲ ಉರಿಯುವಂತಿರಲಿಲ್ಲ. ಒಂದು ವರ್ಷ ಕಾಲ ಬದುಕಿದರೆ ಒಂದು ಅದ್ಭುತ ಸುದ್ದಿಯೇ. ತಬ್ಬಲಿ ಮಗುವನ್ನು ಬಿಟ್ಟುಹೋಗುವುದಕ್ಕಾಗಿಯೇ ಹಡೆಯುವುದರಲ್ಲಿ ಏನು ಪುರುಷಾರ್ಥ.

ಅವಳ ಬುದ್ಧಿ ಈ ಮಾತನ್ನು ಗ್ರಹಿಸಿ ಒಪ್ಪಿಕೊಂಡಿತ್ತು. ಆದರೆ ಒಳಮನಸ್ಸಿನಲ್ಲಿ ಆಕೆ ತಾನು ತಾಯಿಯಾದರೆ, ಮಗುವನ್ನು ಪಡೆದರೆ ಎಂಬ ಆಲೋಚನೆಯನ್ನು ಗಳಿಗೆಯೂ ಬಿಡಲಾರದವಳಾಗಿದ್ದಳು.

ಅಕಸ್ಮಾತ್ತಾಗಿ ಅವಳ ಕೈಯನ್ನು ಮುಟ್ಟಬೇಕೆಂದು ಆತುರ ಹುಟ್ಟಿತ್ತು. ಮಲಗಿದಲ್ಲಿಂದಲೆ ಕೈಯಾಡಿಸಿದೆ. ಆದರೆ ಸೋಂಕುವ ಮೊದಲೇ ಕೈಹಿಂದೆಳೆದುಕೊಂಡೆ ಏನು ದೆವ್ವ ಹೊಕ್ಕಿದೆ ನನ್ನ ತಲೆಯಲ್ಲಿ ಎಂದುಕೊಂಡೆ.

ಎರಡು ದಿನಗಳ ನಂತರ ಮತ್ತೆ ನನ್ನ ರಾಜಕುಮಾರಿಯನ್ನು ಸಮುದ್ರ ತೀರದಲ್ಲಿ ಭೇಟಿಯಾದೆ. ಪಿಜೋರ್‌ಳನ್ನು ದೂರಮಾಡಿದೆ. ನಾನು ರಾಜಕುಮಾರಿಯ ಕೈ ಮುಟ್ಟಿದೆ ಅದನ್ನು ಬಿಗಿಯಾಗಿ ಹಿಡಿದುಕೊಂಡೆ. ಅದು ಸುಡುತ್ತಿತ್ತು.

ಆಕೆಯ ದೇಹ ಸುಂದರವಾಗಿದ್ದರೂ ಔಷಧಗಳು ಆಕೆಯ ದೇಹದಲ್ಲಿ ಬಹಳ ಮಾರ್ಪಾಡನ್ನು ತಂದಿದ್ದವು. ಆಕೆಯ ಕೈಗಳು ಊದಿಕೊಂಡಿದ್ದು, ಬ್ರೆಡ್ಡಿನ ಚೂರುಗಳಂತೆ ಕಾಣುತ್ತಿದ್ದವು.

"ಶೀತಲ ಪಾನೀಯ ಬೇಕೆ ?" ಎಂದೆ. ಆಕೆ ಉತ್ತರ ಕೊಡಲಿಲ್ಲ. ಅವಳ ಮುಖದಲ್ಲಿ ಕಟುತ ತುಂಬಿತ್ತು. ಮತ್ತೊಮ್ಮೆ ಪ್ರಶ್ನಿಸಿದೆ.

"ನಿನಗೆ ಕಷ್ಟವಿರಬಹುದು. ಆದರೆ ಮಾತಿಗೆ ಉತ್ತರ ಕೊಟ್ಟು ಮನುಷ್ಯತ್ವ ತೋರಿಸಬಹುದಲ್ಲ" ಎಂದು ಕೂಗಿದೆ. ಏನೋ ಗೊಣಗಿ ಒಪ್ಪಿ ಎಂದಳು. ನಾನೊಬ್ಬನೇ ಹೋಗಿ ಕುಡಿದೆ; ಆದರೆ ಸಮಾಧಾನವಾಗಲಿಲ್ಲ.

ಮರಳಿನ ಮೇಲೆ ಅಂಗಾತನಾಗಿ ಮಲಗಿ ಕೇಳಿದಳು, ನನ್ನನ್ನು :

"ನನ್ನ ವಿಚಾರವೆಲ್ಲ ನಿನಗೆ ಗೊತ್ತು. ನನ್ನ ಮೇಲೆ ಕನಿಕರಪಟ್ಟು ನನ್ನ ಗೆಳೆತನ ಬೆಳೆಸುತ್ತಿದ್ದೀ, ಅಲ್ಲವೆ ?"

ನನಗೆ ಸಂಕೋಚದಿಂದ ತಕ್ಷಣ ಉತ್ತರ ಕೊಡಲು ಆಗಲಿಲ್ಲ.

ಆಕೆಯ ಕಡೆ ನೋಡಿ ಮುಗುಳ್ನಕ್ಕು, ದಂಡೆಯ ಮೇಲಿದ್ದ ಗೋರಿಗಳ ಕಡೆ ವಿಷಾದದಿಂದ ನೋಡಿದೆ. ಮತ್ತೆ ಆಕೆಯ ಕಡೆ ನೋಡಿ ನಗಲು ಪ್ರಯತ್ನಪಟ್ಟೆ.

ನಾನು ಉತ್ತರ ಕೊಡಲು ತೀರ ನಿಧಾನ ಮಾಡಿದೆ ಎನಿಸಿತು. ಇನ್ನೇನು ಆಕೆ ಪುನಃ ಅದೇ ಪ್ರಶ್ನೆ ಕೇಳಬಹುದು. ನನ್ನ ಕೈಗಳು ಬೆವರೊಡೆದ ಅನುಭವವಾಯಿತು. ಉತ್ತರ ಕೊಡುವ

ಸಮಯ ಆಗಲೇ ಮಿಂಚಿಹೋಗಿತ್ತು. ಮತ್ತೊಮ್ಮೆ, ನನ್ನ ಎರಡೂ ಕೈಗಳಿಂದ ಆಕೆಯ ಕೈಯನ್ನು ಹಿಡಿದುಕೊಂಡೆ. ಆಕೆ ತಣ್ಣಗಿದ್ದರೂ ಕೈಗಳು ಸುಡುತ್ತಲೇ ಇದ್ದವು. ಕೈಗಳನ್ನು ಹಿಡಿದುಕೊಂಡೇ ಆಕೆಯ ಮುಖದ ಕಡೆ ನೋಡದೆ, ದಿಗಂತದೆಡೆಗೆ ಕಣ್ಣು ತಿರುಗಿಸಿದೆ. ಆಕೆಯ ಕೆ ಬೆಚ್ಚಗಾಗಲಿಲ್ಲ. ಬೆವರಿಡಲೂ ಇಲ್ಲ. ನನ್ನ ಕೈಗಳ ಬೆವರಿನಿಂದ ಸ್ವಲ್ಪ ಒದ್ದೆಯಾದಂತೆ ತೋರಿತು ಅಷ್ಟೇ.

ರೇಡಿಯೋ ಥೆರಾಪಿ ಚಿಕಿತ್ಸಾಲಯಕ್ಕೆ ಹೋದೆವು. ಆದರೆ ಅವಳು ಒಳಗೆ ಹೋದವಳು ಹಾಗೆಯೇ ತಿರುಗಿ ನಿರೀಕ್ಷಣಾಲಯದಲ್ಲಿ ಕುಳಿತಿದ್ದ ನನ್ನ ಬಳಿಗೆ ಬಂದಳು.

"ಇವತ್ತೇನು, ಇಷ್ಟು ಬೇಗ ಚಿಕಿತ್ಸೆ ಮುಗಿಯಿತೇ?" ನಾನು ಆಶ್ಚರ್ಯಪಟ್ಟೆ

"ಇಲ್ಲ. ನನಗೆ ಜ್ವರಬಂದಂತಿದೆಯಂತೆ. ಆದ್ದರಿಂದ ಅವರು ಚಿಕಿತ್ಸೆಯನ್ನು ನೀಡಲಿಲ್ಲ."

"ಆಪರೇಷನ್ನನ್ನೂ ಮಾಡಲು ಸಾಧ್ಯವಿಲ್ಲವೇ?"

"ಇಲ್ಲ. ಅಪಧಮನಿಗಳಿಗೆ ಬಹಳ ಸಮೀಪದಲ್ಲಿದೆ. ಎಲ್ಲ ಗ್ರಂಥಿಗಳನ್ನೂ ಆವರಿಸಿದೆಯಂತೆ. ನನ್ನ ಶರೀರವನ್ನೆಲ್ಲವನ್ನೂ ತೆಗೆದುಹಾಕಲು ಸಾಧ್ಯವೇ ? ಅದೂ ನನಗೆ ಬಹಳ ತಡವಾಗಿ ತಿಳಿಯಿತು."

"ಅದು ತಿಳಿದಿದು ಹೇಗೆ?"

"ಅವತ್ತೊಂದು ದಿನ ಜ್ವರ ಬಂದಂತಿತ್ತು. ಮನೆಯಲ್ಲಿಯೇ ಮಲಗಿದೆ. ಅದರಿಂದ ಯಾವ ಪ್ರಯೋಜನವೂ ಆಗಲಿಲ್ಲ. ಜ ರದೊಂದಿಗೆ ವಿಶೇಷ ನವೆ. ವೈದ್ಯರ ಬಳಿ ಹೋದೆ. ನನ್ನ ರಕ್ತದ ಪರೀಕ್ಷೆ ನಡೆದಾಗ ಅದು ಗಸಿಗಟ್ಟುವ ದರ ೨೨ ಎಂದು ತಿಳಿಯಿತು. ಎಲ್ಲಿಯೋ ಸಾಂಕ್ರಾಮಿಕ ರೋಗ ತಗಲಿರಬೇಕು ಎಂದರು, ವೈದ್ಯರು. ದಂತ ವೈದ್ಯರ ಬಳಿ ಹೋದೆ. ಆದರೆ ನನ್ನ ಹಲ್ಲುಗಳಿಂದ ಯಾವ ತೊಂದರೆಯೂ ಇಲ್ಲವೆಂದು ತಿಳಿಯಿತು.

"ಒಂದು ವಾರದ ನಂತರ ಮತ್ತೆ ರಕ್ತದ ಪರೀಕ್ಷೆ ನಡೆಸಿದಾಗ, ಅದರ ತಿಳಿಯಾಗುವ ದರ ೨೮ ಎಂದು ಗೊತ್ತಾಯಿತು. ಒಂದು ವಾರದ ನಂತರ ೪೪. ನನ್ನ ಗಂಟಲಿನಿಂದ ಒಂದು ಚೂರನ್ನು ಪರೀಕ್ಷೆಗಾಗಿ ಹೊರತೆಗೆದರು ಈ ಎಲ್ಲ ಪರೀಕ್ಷೆಗಳು ನಡೆಯುತ್ತಿರುವಾಗ ನನಗೆ ಕ್ಷಯ ವೇನೋ ಎಂದು ಹೆದರಿದೆ. ಆದರೆ ನನ್ನ ಎಣಿಕೆ ತಪ್ಪಾಯಿತು."

ಬಹಳ ಹೊತ್ತಿನ ವಾಯುವಿಹಾರದ ಬಳಿಕ ಇಬ್ಬರೂ ಅಗಲಿದೆವು.

ಇಲ್ಲ. ನನಗೆ ಅವಳ ಮೇಲೆ ಮರುಕ ಮಾತ್ರ ಇದೆ. ಸುಮ್ಮನೆ ಹೀಗೆ ಅವಳನ್ನು ಸಂಧಿಸುತ್ತ ಹೋಗುವುದರಿಂದ ಏನೂ ಒಳಿತಾಗುವುದಿಲ್ಲ ಎಂದು ನನ್ನಲ್ಲೇ ಅಂದುಕೊಂಡೆ.

೩

ಆ ಸಂಜೆ ನಾನು ಆಕೆಗೆ ಟೆಲಿಫೋನ್ ಮಾಡುವುದಕ್ಕೆ ಹೋದವನು ಹಾಗೆಯೇ ನನ್ನ ಮನಸ್ಸನ್ನು ಹಿಡಿತದಲ್ಲಿಟ್ಟುಕೊಂಡೆ. ನಾನು ನನ್ನ ಕನಸಿನ ರಾಣಿಯ ಅನ್ವೇಷಣೆಗಾಗಿ ನರ್ತನ ಕೂಟಕ್ಕೆ ಹೋಗತಕ್ಕವನು. ಈ ಬಿಳಿಚಿ ಹಳದಿಯಾದ ತೊಗಲಿನ ಹುಡುಗಿಯೊಡನೆ ಕೊಡಕಿಕೊಳ್ಳುವುದು ಹುಚ್ಚುತನ ಎಂದುಕೊಂಡೆ.

*

ಆಕೆ ಯಾರದಾದರೂ ಟೆಲಿಫೋನ್ ಕರೆಗೆ ಕಾಯುತ್ತ ಕುಳಿತಿದ್ದಳು. ಕರೆಗಳು ಬಂದವೇನೋ ಸರಿ. ಆದರೆ ಅವು ಬೇರೆ ನರ್ಸುಗಳಿಗೇ. ಅವರೆಲ್ಲ ನರ್ತನಕೂಟಕ್ಕೆ ಹೊರಟು ಹೋಗಿದ್ದರು. ಟೆಲಿಫೋನಿಗೆ ಉತ್ತರ ಕೊಡುವುದಷ್ಟೆ ಅವಳ ಪಾಲಿಗೆ ಬಂದದ್ದು.

ತಲೆದಿಂಬನ್ನೇ ಪ್ರಿಯಕರನಂತೆ ಎದೆಗೊತ್ತಿಕೊಂಡು ಇನ್ನೇನು ಕ್ಷಣಗಳಲ್ಲಿ ಸಾವು ಬರುತ್ತದೆ, ಆ ವರೆಗೆ ನಲ್ಲನನ್ನು ತಬ್ಬಿಕೊಳ್ಳುತ್ತಿರಬೇಕೆಂಬಂತೆ ಬಿದ್ದುಕೊಂಡಳು.

ಆ ಮೇಲೆ ಅವಳು ಇದಕ್ಕಿದ್ದಂತೆ "ಒಂದು ಮಗು" ಎಂದು ಗಟ್ಟಿಯಾಗಿ ನುಡಿದಳು. ಯಾಕೋ ಅವಳಿಗೇ ತಿಳಿಯದು. ಆಕೆ ಎಳೆ ಮಗುವಾಗಿದ್ದಾಗ ಹೊಲಿಸಿದ್ದ ಬಟ್ಟೆಗಳ ರಾಶಿಯೇ ಇತ್ತು. ತನ್ನರೋಗದ ಸುದ್ದಿ ಕೇಳಿದ ಮೇಲೆ ಆ ಬಟ್ಟೆಗಳ ಪೆಟ್ಟಿಗೆಯನ್ನವಳು ಮುಟ್ಟಿಲ್ಲ.

ಯಾವುದೋ ಆಸೆಯ ಜ್ವಾಲೆ ಆಕೆಯ ಎದೆ

ಯಲ್ಲಿ ಒಮ್ಮೆ ಪ್ರಜ್ವಲಿಸಿ ನಾಯವಾಯಿತು.

ತನ್ನ ಶಕ್ತಿ ಕುಂಠಿತವಾಗುತ್ತಿದೆಯೆಂದು ಅವಳಿಗೆ ಅರಿವಾಗಿತ್ತು. ಆಕೆ ಹಿತೋಷ್ಣ ಸೂರ್ಯ ಕಿರಣಗಳಿಗಾಗಿ ಹಂಬಲಿಸುತ್ತಿದ್ದಾಳೆ. ಆದರೆ ಆಕೆ ಕೊಠಡಿಯಲ್ಲಿ ಒಂಟಿಯಾಗಿರುವಾಗಲೆಲ್ಲ ದೀಪವನ್ನು ನಂದಿಸಿಬಿಟ್ಟಿರುತ್ತಾಳೆ.

ದೀಪ ಹಾಕಿಕೊಂಡು ನೋಡಿದ್ದರೆ ಅವಳ ಮೈ ಹೊಗರು ಕೆಸರು ಕೆಸರಾಗಿ ನೀಲಿ ಬಣ್ಣವಾಗಿ ಅವಳಿಗೆ ಕಾಣುತ್ತಿತ್ತು. ಕೆನ್ನೆಯ ಮೂಳೆಗಳ ಮೇಲೆ ಮಾತ್ರ ರಕ್ತದ ಛಾಯೆ ಕಾಣುತ್ತಿತ್ತಷ್ಟೇ. ಸಂಜೆಯ ಮಬ್ಬು ಬೆಳಕಿನಲ್ಲಿ ಅವಳು ಮೈಲಿ ರಕ್ತವಿಲ್ಲದ ಕಣ್ಣು ಬಾಯಿ ಮಾತ್ರ ಇರುವ ಪ್ರೇತದಂತೆ ಕಾಣಿಸುತ್ತಿದ್ದಳು.

ಕಿಟಕಿಯ ಪರದೆಯ ಸಂದಿಯಿಂದ ಸ್ವಲ್ಪ ಬೆಳಕು ಕೊಠಡಿಯೊಳಗೆ ತೂರಿ ಬರುತ್ತಿತ್ತು. ಗಾಳಿಯಿಂದ ಕಿಟಕಿಯ ಬಾಗಿಲಿಗೆ ತೋಟದ ಗಿಡದ ಟೊಂಗೆ ಬಡಿದದ್ದರಿಂದ, ಶಬ್ದವಾಗಿ, ಅವಳ ಆಲೋಚನಾ ತರಂಗಗಳನ್ನು ತಡೆಯಿತು. ಇದ್ದಕ್ಕಿದ್ದಂತೆಯೇ ಎಂದಿನ ನೋವು ಹಾಗೂ ತುರಿಕೆಯ ಅನುಭವ ಆರಂಭವಾಯಿತು. ಸಂಗಡಲೇ ಆ ದೂರದ ಆಸೆ ತೇಲಿ ಬಂದಿತು— ಮಗುವಿನ ಸ್ಪರ್ಶದ ಮತ್ತು ಪುರುಷಪ್ರೀತಿಯ ಸುಖದ ಕನಸನ್ನು ಕಾಣುವ ಸಾಮಾನ್ಯ ಆರೋಗ್ಯವಂತ ಹೆಂಗಸಿನ ಆಸೆ.

ಈ ಆಸೆ ಕೆಲ ಕ್ಷಣ ಮಾತ್ರ. ಅನಂತರ ಅವಳು ಒಂದು ಗಂಟೆಗೂ ಹೆಚ್ಚಾಗಿ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ಮುಂದಿನ ಒಂದು ಗಂಟೆ ಕೂಡ ಬದುಕಿದ್ದೇನೆಂದು ಕಲ್ಪಿಸುವ ಧೈರ್ಯ ಅವಳಿಗಿರಲಿಲ್ಲ. ನಾನು ಆರೋಗ್ಯವಂತಳಾಗಬೇಕು. ನೆಟ್ಟಗಾಗಬೇಕು, ನೆಟ್ಟಗಾಗಬೇಕು ಎಂದು ಗೊಣಗಿಕೊಂಡಳು. ನಾನೊಂದು ಮಗುವಿನ ತಾಯಿಯಾಗಬೇಕು, ಚೆನ್ನಾಗಿರಬೇಕು, ಸಂತೋಷವಾಗಿರಬೇಕು ಮತ್ತು...

ಹಾಗೆಯೆ ಆಯಾಸ ಹೊಂದಿ, ಹಾಸಿಗೆಯ ಮೇಲೆ ಬಿದ್ದುಕೊಂಡಿದ್ದಳು. ನಿದ್ದೆ ಬರುತ್ತಿದ್ದಂತೆಯೆ ಅವೇ ಆ ಕಣ್ಣುಗಳನ್ನು ಕಂಡಳು. ಹೊಳೆಯುವ, ಸುಳಿಯುವ ಆ ಕಣ್ಣುಗಳು.

ನಾನು ಮನೆಯಲ್ಲಿಯೇ ಇದ್ದು, ಕೆಲವು ಲೇಖನಗಳನ್ನು ಬರೆದು ರೆಸ್ಟುರಾಗೆ ಹೋದೆ.

ಊಟ ಮಾಡಿ, ಒಂದು ಲೋಟ ಮದ್ಯವನ್ನು ಕುಡಿದ ಮೇಲೆ ಸ್ವಲ್ಪ ಮತ್ತೇರಿದಂತೆ ಕಂಡಿತು. ಮೇಜಿನ ಸುತ್ತ ತುಂಬ ಹುಡುಗಿಯರಿದ್ದರು.

ನನಗೆ ನಾನೇ ಹೇಳಿಕೊಂಡೆ. "ಗುನ್ನಾರ್ ಬಾ. ಏಳು ಮೇಲಕ್ಕೆ." ಹಳದಿ ಕೂದಲಿನ ಮದವೇರಿಸುವ ಚೆಲುವಿನ ಒಬ್ಬ ಹುಡುಗಿಯನ್ನು ಆರಿಸಿ ನರ್ತಿಸಿದೆ. ಆಕೆ ನನ್ನೆದೆಗೆ ಒರಗಿದಾಗ, ಮನೆಗೆ ಬರುತ್ತೀಯಾ ಎಂದು ಕೇಳಿದೆ, ಆಕೆ ಒಪ್ಪಿದಳು. ನಂತರ ನಮ್ಮಿಬ್ಬರ ಪರಿಚಯ ಬೆಳೆಯಿತು.

*

೪

ಮಾರನೆಯ ದಿನ ಅವಳಿಗೆ ಫೋನ್ ಮಾಡಿದೆ. ಉತ್ತರ ಕೊಡಲಿಕ್ಕಿಲ್ಲ ಎಂದಾಶಿಸಿದ್ದೆ. ಆದರೆ ಬಿಸು ಮಾತಿನಲ್ಲೆಂಬಂತೆ ಉತ್ತರವಿತ್ತಳು "ನಿನ್ನನ್ನು ಕಾಣಲು ಬರುತ್ತೇನೆ" ಎಂದೆ. ಯಾಕೆ ಹಾಗೆಂದೆನೋ ನನಗೇ ತಿಳಿಯಲಿಲ್ಲ. ಬೇಡ ಎಂದಾಳೆಂದು ಆಶಿಸಿದ್ದೆ. ಅವಳು "ಬಾ" ಎಂದಳು. ನನಗೆ ತುಸು ಕೋಪವೇ ಬಂತು. ಸಂಜೆ ಹೂವುಗಳೊಂದಿಗೆ ಅವಳನ್ನು ನೋಡಲು ಹೋದೆ. ಬಾಗಿಲನ್ನೇ ನೋಡುತ್ತ ಹಾಸಿಗೆಯ ಮೇಲೆ ಮಲಗಿದ್ದ ಆಕೆ ಬಹಳ ಸುಸ್ತಾದವಳಂತೆ ನಿಸ್ತೇಜಳಾಗಿ ಕಂಡಳು.

ಆಕೆಗೆ ಯೋಗ್ಯ ಸಹವಾಸ ಬೇಕಿದ್ದರೂ, ಯಾರೂ ತನ್ನ ಬಳಿ ಸುಳಿಯದಂತೆ ಅಭೇದ್ಯ ಕೋಟೆಯೊಂದನ್ನು ನಿರ್ಮಿಸಿಕೊಂಡಿದ್ದಳು. ನನ್ನಲ್ಲಿ ಅವಳು ಆಸಕ್ತಳಾಗಿದ್ದಕ್ಕೆ ಕಾರಣ ತಾಯಿಯಿಲ್ಲದ ಸಂಸಾರವೊಂದರ ಬಗ್ಗೆ ನಾನು ಬರೆದಿದ್ದ ಒಂದು ಕಾದಂಬರಿ. ಅದರಲ್ಲಿ ತಾಯಿ ಮಗುವಿಗೆ ಜನ್ಮ ನೀಡಿ ಸತ್ತು ಹೋಗಿದ್ದಳು. ಈ ವಿಚಾರ ನನಗೆ ಆ ಮೇಲೆ ತಿಳಿಯಿತು.

ಅಲ್ಲಿ ಕುಳಿತು ಅವಳ ಕಾಹಿಲೆಯ ಹೊರತಾಗಿ ಬೇರೆಲ್ಲ ವಿಷಯಗಳ ಬಗ್ಗೆ ಮಾತುಕತೆಯಾಡಿದೆ. ಆ ಕಾರ್ಯದಲ್ಲಿ ಜಯಶೀಲನಾಗಿದಕೆ ನನಗೇ ಸಂತೋಷವಾಯಿತು.

ಅವಳ ಅಸ ಸ್ಥದಿಂದ ನನ್ನಲ್ಲುಂಟಾದ ಆರ್ದ್ರ ಭಾವನೆ ಕಾಲಾಂತರದಲ್ಲಿ ಮಾಯವಾದೀತೆಂದು ಎಣಿಸಿದ್ದೆ. ಆದರೆ ಅದು ಆಳವಾಗುತ್ತ ನನ್ನ ಮರ್ಮಸ್ಥಾನದ ವರೆಗೂ ರಂಧ್ರ ಕೊರೆದುದನ್ನು ಮನಗಂಡೆ.

ಸಾವು ಸನ್ನಿಹಿತವೆಂದು ಗೊತ್ತಾದಾಗ ಲೈಂಗಿಕ ಹಸಿವು ಅದಮ್ಯವಾಗುವುದೆಂದು ಕೇಳಿದ್ದೆ. ಇವಳೂ ನನ್ನಿಂದ ಅದರ ತೃಪ್ತಿಯನ್ನು ಬಯಸುತ್ತಿರಬಹುದೇ ಎಂಬ ಶಂಕೆ ಸುಳಿದುಹೋಯಿತು. ಆದರೆ ಇಲ್ಲ. ಅದರ ಲಕ್ಷಣವೇನೂ ಕಾಣಿಸಲಿಲ್ಲ. ನನ್ನ ಸಾಮೀಪ್ಯದಿಂದ ಅವಳಲ್ಲಿ ಯಾವುದೋ ಸಂತುಷ್ಟಿ ಉಂಟಾಗುತ್ತಿದ್ದಂತೆ ತೋರುತ್ತಿತ್ತು. ನಾವು ಮುತ್ತಿಟ್ಟುಕೊಳ್ಳುತ್ತಿದ್ದೆವು. ಆದರೆ ಅದರಲ್ಲಿ ಆರ್ದ್ರತೆ ಇರುತ್ತಿತ್ತೇ ಹೊರತು ಉದ್ರೇಕವಿರುತ್ತಿರಲಿಲ್ಲ.

ಎಷ್ಟೋ ಮುಂಜಾನೆಗಳಲ್ಲಿ ಅವಳೊಂದಿಗೆ ಮಾತನಾಡುತ್ತಿದ್ದಾಗ ಆ ವರೆಗೂ ನನ್ನ ಕಣ್ಣು ತಪ್ಪಿಸಿದ್ದ ಹೊಸ ಹೊಳಪನ್ನು ಆಕೆಯ ಮುಖದಲ್ಲಿ, ಚಲನವಲನಗಳಲ್ಲಿ ನಾನು ಕಾಣುತ್ತಿದ್ದೆ. ಅನಾರೋಗ್ಯ ಸಾಮಾನ್ಯವಾಗಿ ರೋಗಿಯನ್ನು ಮಾನಸಿಕ ಯಾತನೆಗೆ ಗುರಿ ಮಾಡುತ್ತದೆ. ತನ್ನ ರೋಗದ ವಿಚಾರವೇ ಮುತ್ತಿದ ಅವನ ಮನಸ್ಸಿಗೆ ಪ್ರಪಂಚವೇ ಶೂನ್ಯವಾಗಿರುತ್ತದೆ. ಆದರೆ ಸಾವಿನ ಪ್ರಜ್ಞೆ ಇದಕ್ಕೆ ವಿರುದ್ಧವಾದ ಪ್ರತಿಕ್ರಿಯೆಯನ್ನು ಉಂಟುಮಾಡುತ್ತದೆ. ಆಗ ಮನುಷ್ಯ ಪೂರ್ಣ ಸೋಲದಿದ್ದಲ್ಲಿ ಅವನ ಆತ್ಮದಲ್ಲಿ ಒಂದು ಜಾಗ್ರುತಿ ಮೂಡುತ್ತದೆ. ಈ ವಿಷಯ ಮಾತಾಡಿದಾಗ ಅವಳು ಹೀಗೆ ಯೋಚಿಸಿಟ್ಟಂತೆ ಅನಿಸಿತು.

"ಸಾವಿನ ಆಗಮನದ ಸೂಚನೆ ಮನುಷ್ಯನನ್ನು ಪ್ರೌಢನನ್ನಾಗಿ ಮಾಡುತ್ತದೆ ಎಂದು ಕೆಲವರು ಹೇಳುತ್ತಾರೆ." ಎಂದು ಅವಳು ಒಮ್ಮೆ ಹೇಳಿದಳು.

"ಜನರಿಗೆ ಸಾವು ಇದೆಯೆಂದು ಗೊತ್ತು, ಆದರೆ ಅದನ್ನೇ ಗುರಿಯೆಂದು ಅವರು ತಿಳಿದುಕೊಳ್ಳುವುದಿಲ್ಲ. ಆದರೆ ನಾನು ಅದೇ ನಿಜವೆಂದು ಮನಗಂಡಿದೇನೆ. ನಾನು ಎಲ್ಲವನ್ನೂ ಈಗ ಸ್ಪಷ್ಟವಾಗಿ ನೋಡಬಲ್ಲವಳಾಗಿದ್ದೇನೆ."

"ಆದರೆ ನನ್ನ ಜೀವನ ಬದಲಾಯಿಸಿದೆ ಎಂಬುದು ನಿಜ" ಆಕೆ ಮುಂದುವರಿಸಿದಳು, "ಇತರರಂತೆ ನಾನೂ ಮುಂದಾಲೋಚಿಸಿ, ನಾನಾ ಯೋಜನೆಗಳನ್ನು ರೂಪಿಸುತ್ತಿದ್ದೆ. ಆದರೆ ಈಗ ಇದ್ದದರಲ್ಲಿ ಸುಖಪಡಲು ಕಲಿತಿದೇನೆ..."

"ನಿನ್ನ ಮೊದಲ ಪ್ರತಿಕ್ರಿಯೆ ಹೇಗಿತ್ತು?"

"ಆಗ ಸತ್ತುಹೋದರೇ ಸುಖ ಅನಿಸಿತು. ಆದರೆ ಈಗ ಹಾಗೆ ಯೋಚಿಸುವುದಿಲ್ಲ. ಬದುಕಬೇಕು ಎನ್ನುವ ಪ್ರಬಲ ಆಸೆ ನನ್ನಲ್ಲಿ ಬೇರೂರಿದೆ. ನನಗೆ ಓಕರಿಕೆಬಾರದೆ ಇರುವಾಗ ನಾನು ಸಂತೋಷವಾಗಿಯೇ ಸುಖವಾಗಿಯೇ ಇರುತ್ತೇನೆ. ಸಾಯುತ್ತೇನೆಂಬ ಅರಿವಾದಾಗ ದೇಹದ ಎಲ್ಲ ಶಕ್ತಿಗಳೂ ಎರಡು ಪಟ್ಟು ಬಲವಾಗುತ್ತವೆ. ಹಿಂದಿನ ದಿನಗಳಲ್ಲಿ ಯಾವುದನ್ನೋ ನಿರೀಕ್ಷಿಸುವುದೇ ನನ್ನ ಜೀವನದ ಕೇಂದ್ರ ಬಿಂದುವಾಗಿತ್ತು. ಈಗ ಹಾಗಿಲ್ಲ."

ಹೊರಗಡೆಯ ಬೆಳಕು ಹೆಚ್ಚುತ್ತಿತ್ತು. ಅದರಲ್ಲಿ ರಾಜಕುಮಾರಿಯ ಮುಖ ಸ್ಪಷ್ಟವಾಗಿ ಕಾಣಿಸುತ್ತಿತ್ತು. ಗುಳಿಬಿದ್ದ ಕಣ್ಣುಗಳನ್ನು ಆಕೆಯ ನೀಲಿಯ ರೆಪ್ಪೆಗಳು ಮುಚ್ಚಿದ್ದವು. ಆಕೆ ಶಾಂತಳಾಗಿದ್ದಳು.

ಸಾವಿನ ಬಗ್ಗೆ ಆಕೆ ಚಿಂತಿಸುತ್ತಿರಲೇ ಇಲ್ಲ. ಸಾವುನೋವಿಲ್ಲದೆ ಸುಖಕರವಾಗಿರುತ್ತದೆ ಎಂದು ಖಚಿತವಿದ್ದರೆ ಆಕೆ ಸಾಯುವುದೇ ಮೇಲೆಂದು ನನಗೆ ಅನೇಕ ವೇಳೆ ಹೊಳೆಯುತ್ತಿತ್ತು.

ಆದರೆ ರಾಜಕುಮಾರಿ ಸಾವಿನ ಕೈತ್ಯವನ್ನು ಗುರುತಿಸಿದ್ದಳು. ಅದು ಅವಳಿಗೆ ಬಲ ಕೊಟ್ಟಿತ್ತು. ಬದುಕಿನ ಒಂದು ಕ್ಷಣವನ್ನೂ ನಿರರ್ಥಕಗೊಳಿಸಲು ಅವಳು ಬಯಸುತ್ತಿರಲಿಲ್ಲ. ರೋಗ ಅವಳ ಒಳಗೆಲ್ಲ ಧ್ವಂಸಕ್ರಿಯೆ ನಡೆಸಿದ್ದರೂ ಅಂತರಂಗದ ಮೂಲೆಯಲ್ಲಿ ಎಲ್ಲ ಪ್ರಮಾಣಗಳನ್ನು ಧಿಕ್ಕರಿಸಿ ಒಂದು ಆಶೆಯ ಕುಡಿ ಅವಳಲ್ಲಿ ಉರಿಯುತ್ತಲೇ ಇತ್ತು. ಹೀಗೆಂದು ನಾನು ಅವಳ ಭಾವನೆಗಳನ್ನು ತರ್ಕಿಸಿದೆ.

ಒಂದು ದಿನ ಸಂಜೆ ಪತ್ರಿಕೆಯನ್ನು ಓದುತ್ತ,

"ಬರ್ಗಾಲ್‌ನಲ್ಲಿ ಎರಡು ಕೋಣೆಯ ಮನೆ ಬಾಡಿಗೆಗೆ ಇದೆಯಂತೆ" ಎಂದೆ ನಾನು. ಅವಳು ನಿದ್ದೆಯ ಮಬ್ಬಿನಿಂದ ಮೈ ಮುರಿದಳು.

ಸಂಜೆಯ ಹೊತ್ತಿಗೆ ಅದನ್ನು ಬಾಡಿಗೆಗೆ ತೆಗೆದುಕೊಂಡಿದ್ದೆ. ಆ ವಿಷಯವನ್ನು ಅವಳಿಗೆ ತಿಳಿಸಿ " ಒಟ್ಟು ಜಲಂ ಚದರಡಿ ಇದೆಯಂತೆ" ಎಂದೆ.

"ನಿನಗೇತಕ್ಕೆ ಅಷ್ಟು ದೊಡ್ಡ ಮನೆ ?" ಎಂದಳು.

"ಸದ್ಯದಲ್ಲಿಯೇ ನಾವು ಮದುವೆಯಾಗುವವರಿದ್ದೇವಲ್ಲ. ನೋಡು, ಆ ವಿಷಯವನ್ನು ನಿನಗೆ ಹೇಳಲು ಮರೆತಿದ್ದೆ ಅಂತ ಕಾಣುತ್ತದೆ." ಎಂದೆ.

"ನಿನಗೆಲ್ಲೋ ಹುಚ್ಚು. ನನಗಿಷ್ಟವಿದೆಯೋ ಇಲ್ಲವೋ ಎನ್ನುವುದನ್ನೂ ಕೇಳುವುದಿಲ್ಲವೇ ?"

"ಇಷ್ಟವಿದೆಯೇ ? ನಾನು ಸುಂದರನಾಗಿದ್ದೇನೆ. ಡಿಕ್ಕಸ್ ಏಸೆತದಲ್ಲಿ ರಿಕಾರ್ಡ್ ಸ್ಥಾಪಿಸಿದ್ದೇನೆ. ಕ್ರಿಸ್ಮಸ್ ಹಾಡುಗಳನ್ನು ಚೆನ್ನಾಗಿ ಹೇಳಬಲ್ಲೆ."

ಆಕೆಯ ಮುಖ ಗಂಭೀರವಾಯಿತು. "ಹೊರಟು ಹೋಗು. ನನ್ನ ಮುಂದಿರಬೇಡ."

"ಅದು ಸರಿ. ನಾನು ಹೋಗುತ್ತೇನೆ." ನಾನು ಹೇಳಿದೆ. "ಆದರೆ ಮದುವೆಯ ದಿನವನ್ನು ನಿಶ್ಚಯಿಸಬೇಕಲ್ಲ.

ಆಕೆ ಮಾತನಾಡಲಿಲ್ಲ. ಕೇಳಿಸಿಕೊಂಡಂತೆಯೆ ತೋರಲಿಲ್ಲ. ದುಪ್ಪಟಿಯ ಹಿಂದೆ ಮರೆಯಾದಳು. ನಾನು ನಿರಾಶನಾಗಿ ಹೊರಡುವುದರಲ್ಲಿದ್ದೆ. ಅಷ್ಟರಲ್ಲಿ "ಬಟ್ಟೆಗಳಿಗೆ ಕೊರತೆಯಿಲ್ಲ. ಆದರೆ ಫರ್ನಿಚರುಗಳನ್ನು ಮೊದಲು ಕೊಳ್ಳಬೇಕು" ಆಕೆಯ ಮಾತುಗಳು ಕೇಳಿಸಿತು.

ದುಪ್ಪಟ್ಟಿಯ ಹಿಂದೆ ಮರೆಯಾಗಿದ್ದ ಮುಖವನ್ನು ನೋಡಿದೆ, ಹತ್ತಿರ ನಿಂತು. ಪ್ರಫುಲ್ಲವಾಗಿತ್ತು.

"ನಿನ್ನ ಅದೃಷ್ಟ ಚೆನ್ನಾಗಿಲ್ಲ. ಈಗಿನಿಂದಲೇ ಕಷ್ಟಕಾಲಕ್ಕೆ ಸಿದ್ಧನಾಗು. ನನ್ನನ್ನು ಅಷ್ಟು

ಮನಸ್ಸಿಗೆ ಹಚ್ಚಿಕೊಳ್ಳಬೇಡ. ನನ್ನನ್ನು ಪ್ರೀತಿಸುವುದಿಲ್ಲವೆಂದು ಪ್ರಮಾಣಮಾಡುತ್ತೀಯಾ?"

ನನ್ನಿಂದ ಉತ್ತರ ಬರಲಾಗದ ಯಕ್ಷ ಪ್ರಶ್ನೆಯನ್ನು ಕೇಳಿದ್ದಳು.

೩೫

ಮಾರನೆಯ ಸಂಜೆ ನಾನು ಮತ್ತು ರಾಜಕುಮಾರಿ ರೆಸ್ಟುರಾಗೆ ಕೂಡ ಹೋದೆವು. ಆದರೆ ಆಕೆ ತೊಟ್ಟಿದ್ದ ಉಡುಪು ನವೆಯುಂಟುಮಾಡುವಂಥದಿರಬೇಕು. ಅವಳು ತೀರ ಕಂಗಾಲಾದಳು. ಬಹಳ ಬೇಗನೇ ರೆಸ್ಟುರಾವನ್ನು ಬಿಟ್ಟು, ನಾವಿಬ್ಬರೂ ಅವಳ ಮನೆಗೆ ಹೊರಟೆವು. ಅವಳಿಗೆ ತಾಳಲಾರದಷ್ಟು ಆಯಾಸವಾಗಿತ್ತು. ಸ್ನಾನಮಾಡಿ ನಯವಾದ ರೇಶ್ಮೆ ತೊಟ್ಟರೂ ಅವಳ ಸುಸ್ತು ಕಡಿಮೆಯಾಗಲಿಲ್ಲ.

ಆಕೆಯ ದೇಹವನ್ನು ನನ್ನ ಕೈಯಿಂದ ಬಳಸಿ, ಹೇಳಿದೆ.

"ನಾಳೆ ಫೋನ್ ಮಾಡುತ್ತೇನೆ. ಮಧ್ಯಾಹ್ನ ಊಟಕ್ಕೆ ಬರುತ್ತೀಯಾ ?"

"ಸಾಧ್ಯವಿಲ್ಲ. ಚಿಕಿತ್ಸೆಗಾಗಿ ಹೋಗಬೇಕಲ್ಲ. ಅನೇಕ ಪರೀಕ್ಷೆಗಳಿಗೆ ಸಿದ್ಧಳಾಗಬೇಕು"

"ಹಾಗಾದರೆ ಕಾಗದ ಬರೆದು ಹೂಗಳನ್ನು ಕಳುಹಿಸುತ್ತೇನೆ."

"ಮಕ್ಕಳಿಗೆ ತಾಯಿ, ತಂದೆ ಇಬ್ಬರೂ ಬೇಕು," ಕುಗ್ಗಿದ ಧ್ವನಿಯಲ್ಲಿ ಹೇಳಿದಳು.

ನಾನು ಹೇಳುವುದೇನೂ ಇರಲಿಲ್ಲ.

"ಮಕ್ಕಳಿಗೆ ತಾಯಿತಂದೆ ಇಬ್ಬರೂ ಬೇಕು. ತಾಯಿತಂದೆಯರಿಲ್ಲದ ಮಗುವನ್ನು ಪ್ರಪಂಚದಲ್ಲಿ ಬಿಡುವುದು ಮಹಾಪರಾಧವಲ್ಲವೇ ?" ಆಕೆಯೇ ಮತ್ತೆ ನನ್ನನ್ನು ಕೇಳಿದಳು.

"ಟೀ ಮಾಡಿ ಕೊಡಲೇ ?" ನಾನೇ ಕೇಳಿದೆ, ಮಾತನ್ನು ಮರೆಸಲು.

"ನೀನು ತಾಯಿಯೂ ಆಗಬಲ್ಲೆ ಎಂದು ನನಗೆ ಗೊತ್ತು," ಆಕೆ ಮತ್ತೆ ಮಾತನ್ನು ಮುಂದುವರೆಸಿದಳು. "ನಿನ್ನ ಒಂದು ಪುಸ್ತಕವನ್ನೂ ಓದಿದ್ದೇನೆ. ಕೋಮಲತೆ ಅಲ್ಲಿ ಮೂಡಿಬಂದಿದೆ. ಅದೇ ಮುಖ್ಯ. ನೀನು ಪ್ರತ್ಯಕ್ಷದಲ್ಲಿ ಆ ರೀತಿ ನನಗೆ ಕಾಣದಿದ್ದರೂ ಪುಸ್ತಕದಲ್ಲಿ ಬರೆದಂತೆ, ಕೋಮಲತೆಯಿಂದ ವರ್ತಿಸುತ್ತೀ ಯೆಂದು ನಾನು ಭಾವಿಸಿದ್ದೇನೆ"

ಹೀಗೇ, ಬಡಬಡಿಸುತ್ತ ಅವಳು ತಣ್ಣಗಾಗಿ ಸಣ್ಣಗಾಗಿ, ನನ್ನ ಬಾಹುಗಳ ವರ್ತುಳದಿಂದ ಜಾರಿ ನೆಲದ ಮೇಲೆ ಕುಸಿದಳು.

ಅವಳನ್ನು ಹಾಸಿಗೆಯ ಮೇಲೆ ಮಲಗಿಸಿ ರಗ್ಗನ್ನು ಹೊದಿಸಿದೆ. ಹೊರಗಡೆ ಮಳೆ ಬೀಳುತ್ತಿತ್ತು. ಅವಳ ಪಕ್ಕದಲ್ಲಿ ಕುಳಿತು, ಅವಳ ವದನವನ್ನು ಮೃದುವಾಗಿ ಚುಂಬಿಸಿದೆ. ಅ ವದನ ತಣ್ಣಗಾಗಿದ್ದರೂ ಹೂವಿನಂತೆ ಮೃದುವಾಗಿತ್ತು.

ನನ್ನ ಕನಸಿನ ಬಗ್ಗೆ, ಕನಸಿನ ರಾಜಕುಮಾರಿಗೆ ದ್ವೀಪ ಕೊಳ್ಳುವ ಬಗ್ಗೆ ಆಕೆಗೆ ಹೇಳಲೇ ಎಂದು ಯೋಚಿಸಿದೆ. ಅದು ಉಪಯೋಗಕ್ಕೆ ಬಾರದ ಕೆಲಸವೆಂದು ಸುಮ್ಮನಾದೆ. ಆಕೆ ಸಾಯುವ ಸ್ಥಿತಿಯಲ್ಲಿದ್ದವಳು. ನನ್ನನ್ನು ಮರು ಚುಂಬಿಸಲೂ ಸಾಧ್ಯವಾಗದಷ್ಟು ಅಶಕ್ತಳಾಗಿದ್ದಳು.

ಒಂದು ವಾರದಿಂದ ಮಳೆ ಬಿದ್ದಿರಲಿಲ್ಲ.

*

ಎಷ್ಟೋ ದಿನ ಆಕೆಗೆ ಯಾರೂ ಬೇಡವಾಗಿ, ತನ್ನಷ್ಟಕ್ಕೆ ತಾನೇ ಬಿದ್ದುಕೊಂಡಿರುತ್ತಿದ್ದಳು. ನಾನು ಅವಳ ಕೊಠಡಿಯಲ್ಲಿ ಇದ್ದರೂ ಅವಳ ಹಾವಭಾವಗಳು ಆಕೆಯನ್ನು ಮಾತನಾಡಿಸದೆ ತೆಪ್ಪಗೆ ಮಲಗಲು ಬಿಡಬೇಕೆಂಬ ಸೂಚನೆಯನ್ನು ನೀಡುತ್ತಿದ್ದವು.

ನಾನು ಆಕೆಯ ಇಷ್ಟಕ್ಕೆ ವಿರುದ್ಧ ನಡೆಯಲಿಲ್ಲ. ಕಾರಣ ನನಗೇ ತಿಳಿಯದು. ಆಕೆಯನ್ನು ಅವಳಷ್ಟಕ್ಕೆ ನಿರಾಶೆಗೆ ಪೂರ್ತಿ ಶರಣಾಗಿರಲು ಸ್ವಲ್ಪ ಹೊತ್ತು ಅಥವಾ ಒಂದು ದಿನದ ಮಟ್ಟಿಗೆ ಬಿಟ್ಟರೆ ಒಳ್ಳೆಯದೆಂದೆನಿಸಿತು ನನಗೆ.

ಸದ್ಯದಲ್ಲಿಯೇ ಮದುವೆಯಾಗಲಿರುವ ಹೆಣ್ಣನ್ನು ಅವಳ ವರ ಹೀಗೆ ನಿರಾಶೆಯ ಅಧೀನಳಾಗಲು ಬಿಟ್ಟದ್ದು ಯಾರಿಗಾದರೂ ವಿಚಿತ್ರವಾಗಿ ಕಾಣಬಹುದು. ಆದರೆ ನನ್ನ ವರ್ತನೆಯನ್ನು ನಾನು 'ನನಗೆ ಆಗ ಅದೇ ಯುಕ್ತ ಎನಿಸಿತು' ಎಂದಲ್ಲದೆ ಬೇರೆ ರೀತಿಯಾಗಿ ಸಮರ್ಥಿಸಿಕೊಳ್ಳಲಾರೆ. ನಿಜವಾಗಿ ಆಗ ನಡೆದ ಅನೇಕ

ವಿಷಯಗಳನ್ನು ಸರಿಯಾಗಿ ವಿವರಿಸುವುದು ನನಗೆ ಸಾಧ್ಯವೇ ಇಲ್ಲ. ಉದಾಹರಣೆಗೆ ಎಷ್ಟೋ ಬಾರಿ ನಾವು ಅಳಬೇಕೆಂದಿದ್ದಾಗ, ನಗುವಿನ ಲಹರಿಯನ್ನು ಹರಿಸುತ್ತಿದ್ದೆವು, ನಗಬೇಕೆಂದಿದ್ದಾಗ, ಅತ್ತಿದ್ದೂ ಉಂಟು.

ಅವಳ ಸಹನ ಶಕ್ತಿ ಅಪವ್ಯಯವಾಗದಂತೆ ಆಕೆಯ ಒಳಗುದಿಯನ್ನು ಒಳಗೆ ಶಾಂತವಾಗಲು ಬಿಡಬೇಕೆಂದೆನಿಸುತ್ತಿತ್ತು, ನನಗೆ. ಹತಾಶ ವ್ಯಕ್ತಿಗೆ ಒಮ್ಮೆಲೆ ತೀರ ಹೆಚ್ಚು ಆಶಾದಾನಮಾಡಬಾರದು, ಏಕೆಂದರೆ ಬಂದ ಆಶೆ ಮತ್ತೆ ಮರೆಯಾದಾಗ ಅದು ಅಸಹ್ಯವಾಗುತ್ತದೆ.

ಮಾನವ ಗೌರವಕ್ಕೆ ಸಲ್ಲದ ಈ ಅವಸ್ಥೆಯಿಂದ ಅವಳು ಪ್ರತಿಬಾರಿಯೂ ಮೇಲೆದ್ದು ಮಾನವ ಗೌರವದ ಸ್ಥಿತಿಗೆ ಮರಳುತ್ತಿದ್ದಳು. ಬರಬರುತ್ತ ಅವಳು ಹತಾಶಳಾಗಿ ತನ್ನೊಳಗೇ ಸೇದಿಕೊಳ್ಳುವ ಅವಧಿಗಳು ಕಡಿಮೆಯಾದವು.

ಅವಳು ತನ್ನ ವೈದ್ಯಕೀಯ ಚಿಕಿತ್ಸೆಗೆ ಚಾಚೂ ತಪ್ಪದಂತೆ ಒಳಗಾಗಿ, ತನ್ನ ಕಾಹಿಲೆಯ ಪಥವನ್ನು ಅನುಸರಿಸುವುದೇ ಎಲ್ಲಕ್ಕೂ ಮುಖ್ಯ ಎಂಬುದನ್ನು ಕಂಡುಕೊಂಡೆ. ಔಷಧಿಗಳು, ಕ್ಷಕಿರಣಗಳು, ಪ್ರತಿರೋಧ ಶಕ್ತಿಯ ಹೆಚ್ಚಳ, ಒಳ್ಳೆಯ ಹಾಸ್ಯ, ಬದುಕುವ ಆಸೆ, ಒಳ್ಳೆಯ ಗಾಳಿ, ಮತ್ತು ಅತ್ಯಂತ ಮುಖ್ಯವಾಗಿ ಪ್ರೇಮ ಇವೇ ಆಕೆಯ ಆಶಾಸೌಧದ ಒಳಿಗೆ ಹೋಗಲು ಸೋಪಾನಗಳಾಗಿದ್ದುವು.

ಕ್ಯಾನ್ಸರ್ ರೋಗದ ಬಗ್ಗೆ ಅನೇಕ ಪುಸ್ತಕಗಳನ್ನು ಓದಿ ತಿಳಿದುಕೊಂಡೆ. ಈ ರೋಗಿಗಳ ಬಗ್ಗೆ ಪುಸ್ತಕವನ್ನೇಕೆ ಬರೆಯಬಾರದು. ಎಂಬ ಆಲೋಚನೆಯೂ ಬಂದಿತು. ಕ್ಯಾನ್ಸರ್ ರೋಗದಲ್ಲಿ ಮನಸ್ಸಿನ ಪರಿಣಾಮ ಬಹು ಮುಖ್ಯ. ಅಂಕಿ ಅಂಶಗಳನ್ನು ನೋಡಿದರೆ ಫಿನ್ಲೆಂಡಿನಲ್ಲಿ ಕ್ಯಾನ್ಸರ್ ಬಹಳ ಬಲವಾಗಿಯೇ ತಳಊರಿತ್ತು. ಜನಪ್ರಿಯ ಬರಹಗಾರನೊಬ್ಬ ಕ್ಯಾನ್ಸರಿನ ಬಗ್ಗೆ ಬರೆಯಬಲ್ಲನಾದರೆ ಸಾವಿರಾರು ಜನ ಓದುತ್ತಾರೆ ಎಂದುಕೊಂಡೆ. ಕ್ಯಾನ್ಸರನ್ನು ತಡೆಗಟ್ಟಬಹುದು ಎಂಬ ಭಾವನೆ ಜನರಲ್ಲಿ ಬರುತ್ತದೆ ಎಂದೂ ಭಾವಿಸಿದೆ.

ರಾಜಕುಮಾರಿಗೆ ನನ್ನೀ ಯೋಚನೆಯನ್ನು ತಿಳಿಸಿದೆ.

"ನಿನ್ನ ಬಗ್ಗೆಯೇ ಬರೆದರೆ?" ನಾನು ಕೇಳಿದೆ. ನಿನಗೆ ಕ್ಯಾನ್ಸರಿದೆ ಎಂದು ನಿನ್ನ ಜನರಿಗೆ ಗೊತ್ತು. ನೀನು ಗುಣಮುಖವಾಗುತ್ತಿರುವ ವರದಿ ಬರೆದರೆ ಅವರ ಮೇಲೆ ಅದರ ಪ್ರತಿಕ್ರಿಯೆ ಹೇಗಾದೀತು ?"

"ನಿಜವಾಗಿಯೂ ಅವರಿಗೆ ಅದು ಒಳ್ಳೆಯದನ್ನೇ ಉಂಟುಮಾಡಬಹುದು. ಕೆಲವರಂತೂ ನನ್ನನ್ನು ಮರಣದಂಡನೆಗೆ ಗುರಿಯಾದವಳಂತೆ ನೋಡುತ್ತಾರೆ."

"ಆದರೆ ಅದು ತಪ್ಪಲ್ಲವಲ್ಲ ? ನನಗೇನೋ ಅದು ಸರಿ ಎಂದೇ ಕಾಣಿಸುತ್ತದೆ. ನೀನಂತೂ ಎಲ್ಲಾ ಪ್ರಮಾಣಗಳ ಪ್ರಕಾರ ಮರಣದಂಡನೆಗೆ ಗುರಿಯಾದಂತೆಯೇ ಅಲ್ಲವೇ ?"

"ಅದೂ ಸರಿಯೇ," ಎಂದಳು.

ನಮ್ಮ ಮದುವೆಯಾಯಿತು. ನನ್ನ ಅತ್ತೆ, ತಮ್ಮ ಮಗಳ ಅನಾರೋಗ್ಯದ ಬಗ್ಗೆ ನನ್ನನ್ನು ಎಚ್ಚರಿಸಿದ್ದರು. ನನ್ನ ತಾಯಿಗೆ ಎಲ್ಲವೂ ವಿಚಿತ್ರವಾಗಿ ತೋರಿದರೂ ಆಕೆ ತನ್ನ ಸೊಸೆಯನ್ನು ಕಂಡು ಮುಗ್ಧಳಾದಳು.

ನಾವಿನ್ನೂ ಬರ್ಗಾಲ್‌ನ ಮನೆಗೆ ಬದಲಾಯಿಸಿರಲಿಲ್ಲ. ರಾಜಕುಮಾರಿ ನರ್ಸುಗಳ ಕ್ವಾರ್ಟರ್ಸ್‌ನಲ್ಲಿಯೇ ಇದ್ದಳು. ನಮ್ಮ ಹೊಸ ಮನೆಗೆ ಸುಣ್ಣಬಣ್ಣವಾಗಿರಲಿಲ್ಲ. ಮರದ ಸಾಮಾನುಗಳು ಇನ್ನೂ ಬಂದಿರಲಿಲ್ಲ.

ಒಂದು ದಿನ ಪಿರ್ಜೋ ನನ್ನನ್ನು ನೋಡಲು ಬಂದಳು.

"ಜ್ಞಾಪಕವಿದೆಯೇ ?" ಎಂದು ಕೇಳಿದಳು.

"ಹೇಗಿದ್ದಾಳೆ ?" ನನ್ನಾಕೆಯ ಬಗ್ಗೆಯೂ ವಿಚಾರಿಸಿದಳು.

"ರಾಜಕುಮಾರಿ ಸುಧಾರಿಸುತ್ತಿದ್ದಾಳೆ. ರಕ್ತದ ಹೆಮೋಗ್ಲೋಬಿನ್ ಪ್ರಮಾಣ ಹನ್ನೊಂದಕ್ಕೆ ಏರಿದೆ. ಇಷ್ಟರಲ್ಲಿಯೇ ಅವಳು ರಕ್ತದಾನಿಯೂ ಆಗಬಹುದು. ನೀನೂ ಸಹ ಏಕೋ ರಕ್ತಹೀನಳಂತೆ ಕಾಣುತ್ತೀಯಲ್ಲ."

" ಹೋಗು ನೀನು ಹುಚ್ಚು ಹುಚು ಮಾತಾಡುತ್ತೀ."

ಸ್ವಲ್ಪಕಾಲ ರಾಜಕುಮಾರಿಯ ಬಗ್ಗೆ ಮಾತನಾಡುತ್ತಿದ್ದೆವು. ಆಕೆ ಹೇಗಿದ್ದಾಳೆಂದು ತಿಳಿಯುವುದಕ್ಕೇ ತಾನು ನನ್ನ ಬಳಿ ಬಂದದ್ದೆಂದು ಪಿರ್ಜೋ ಹೇಳಿದಳು.

ನಾನು ನಸುನಗೆ ಬೀರಿದರೂ ಅವಳ ಮಾತುಗಳನ್ನು ನಂಬಲಿಲ್ಲ. ಆಕೆ ನನ್ನನ್ನೇ ನೋಡಲು ಬಂದಿದ್ದಳು. ರಾಜಕುಮಾರಿಯನ್ನು ನೋಡಬೇಕಾಗಿದ್ದರೆ ಆಕೆಯ ಬಳಿಗೇ ನೇರವಾಗಿ ಹೋಗಬಹುದಾಗಿತ್ತು.

ಪಿರ್ಜೋಳಿಗೆ ಮತ್ತೇನೋ ಬೇಕಾಗಿತ್ತು. ತನಗೆ ಬೇಕಾದುದನ್ನು ಪಡೆಯಲು ಆಕೆ ಸಿದ್ಧಳಿದ್ದಳು.

ಆಕೆ ಗಿಡ್ಡ ಲಂಗವನ್ನು ಹಾಕಿಕೊಂಡಿದ್ದಳು, ಅದು ತೊಡೆಯ ಮೇಲ್ಭಾಗಕ್ಕೆ ಬಂದಿತ್ತು. ಅವಳು ನಿಧಾನವಾಗಿ ಒಂದು ಕಾಲಿನ ಮೇಲೆ ಇನ್ನೊಂದನ್ನು ಹಾಕುತ್ತಿದ್ದಾಗ ಆಕೆಯ ಸುಂದರ ಕಾಲುಗಳಿಂತಲೂ ಹೆಚ್ಚಿನ ಭಾಗವನ್ನು ನೋಡಬಹುದಾಗಿತ್ತು.

ಆಕೆಯ ಚರ್ಯೆ ಕಂಡು ನನಗೇ ನಾಚಿಕೆಯಾಯಿತು. ಅವಳ ಸುಂದರ ಮುಖದ ಹಿಂದಿದ್ದ ಭಾವನೆ, ನನಗೆ ರಣಹದ್ದಿನ ಜ್ಞಾಪಕವನ್ನುಂಟು ಮಾಡಿತು. ಅವಳೂ ಒಂದು ಬಗೆಯ ರಣಹದ್ದೇ.

ಆಕೆ ಮೇಲೆದ್ದು ನನ್ನೆಡೆಗೆ ಬಂದಾಗ ನಾನು ಅವಳನ್ನು ಹಿಂದಕ್ಕೆ ಬಲವಾಗಿ ತಳ್ಳಿದೆ. ಆಕೆ ವಿವರ್ಣಳಾಗಿ ನೆಲದ ಮೇಲೆ ಕುಸಿದಳು.

ಆಗ್ಗತಾನೇ ರಾಜಕುಮಾರಿಯ ನೆನಪುಂಟಾಯಿತು, ನನಗೆ. ಆಕೆಯನ್ನು ನಾನು ಪ್ರೀತಿಸುತ್ತಿದ್ದೆ. ಬಹಳ ಕಾಲದ ವರೆಗೆ ಆಕೆಯೊಂದಿಗೆ ಸಂಸಾರ ನಡೆಸಬೇಕೆಂದುಕೊಂಡಿದ್ದೆ. ಆಕೆಯ ಆರೋಗ್ಯದಲ್ಲಿ ಸುಧಾರಣೆಯಾದಾಗಲೆಲ್ಲ ನನಗೆ ಸಂತೋಷವಾಗುತ್ತಿತ್ತು.

ಇದ್ದಕ್ಕಿದ್ದಂತೆಯೇ ಪಿರ್ಜೋ ಬಿರುಗಾಳಿಯಂತೆ, ಅಬ್ಬರಿಸುವ ಜ್ವಾಲೆಯಂತೆ ನನ್ನೆಡೆಗೆ ತಿರುಗಿದಳು. "ನಿನಗೆ ಬುದ್ಧಿ ಇಲ್ಲ. ಆಕೆಯನ್ನು ಮದುವೆಯಾದ ನೀನು ಶತ ಹುಚ್ಚ. ಆಕೆಯ ಕಥೆ ಮುಗಿದಿದೆ. ಇನ್ನೇನೂ ಬಹಳ ವಾರ ಬದುಕುವ ಬಾಬಲ್ಲ. ನೀನು, ನಿನ್ನನ್ನೂ ಆಕೆಯನ್ನೂ ಹಿಂಸಿಸುತ್ತಿದ್ದೀ ಅಷ್ಟೆ," ಎಂದು ಹೇಳಿ ಸ್ವಲ್ಪಹೊತ್ತು ಸುಮ್ಮನಿದ್ದು ಬಳಿಕ ಮೇಲೆದ್ದು ಹಾಸಿಗೆಯ ಮೇಲೆ ಕುಳಿತಳು. "ನಾನು ಅನೇಕ ಹಾಜ್ಕಿನ್ಸ್ ರೋಗಿಗಳನ್ನು ನೋಡಿದ್ದೇನೆ. ಅವರ ಅಂತ್ಯ ಎಂದೂ ಸುಖವಾಗಿರುವುದಿಲ್ಲ. ಅವರು ಕರಿಬೆಹೋಗುತ್ತಾರೆ."

ನಾನು ಶಾಂತವಾಗಿ, ಸಿಗರೇಟೊಂದನ್ನು ಹತ್ತಿಸಿದೆ. "ನಾನೂ ಕಿಮಿಟೋ ಸ್ವೀಡಿಷ್ ಕೊ-ಎಜುಕೇಷನಲ್ ಶಾಲೆಯಲ್ಲಿ ನಾಲ್ಕಾರು ವರ್ಷಗಳನ್ನು ಕಳೆದಿದ್ದೇನೆ. ನೀನು ವಿಶೇಷ ತರಬೇತಿಯನ್ನು ಹೊಂದಿದ್ದರೂ ನಿನಗೆ ಹಲವಾರು ವಿಷಯಗಳನ್ನು ಕಲಿಸಬಲ್ಲೆ. ನಿನಗೆ ಹೆದರಿಕೆಯಾದಾಗ ನೀನು ವಿವರ ಳಾದೆ. ಬಿಳಿಚಿಕೊಂಡೆ. ದೇಹದ ಮೇಲೆ ಮನಸ್ಸಿನ ಪರಿಣಾಮ ಇದು ಒಳ್ಳೆಯ ಉದಾಹರಣೆ. ಮಾನಸಿಕ ಪ್ರತಿಕ್ರಿಯೆಗಳು, ರಕ್ತ ಚಲನೆಯನ್ನೂ ಗ್ರಂಥಿಗಳಲ್ಲಿನ ರಸಗಳನ್ನೂ ವ್ಯತ್ಯಾಸಗೊಳಿಸಿ ಎಲ್ಲ ಅಂಗಗಳನ್ನು ನಿಯಂತ್ರಿಸುತ್ತವೆ. ನರ್ಸಿಂಗ್‌ಬಗ್ಗೆಯೂ ನನಗೆ ಸ್ವಲ್ಪ ಗೊತ್ತು. ಮಕ್ಕಳೇ ಆಗುವುದಿಲ್ಲವೆಂದು ಹೇಳಿದ್ದ ಸ್ತ್ರೀಯರಿಗೆ ಮಕ್ಕಳನ್ನು ದತ್ತು ಹಿಡಿದ ಮೇಲೆ ಆ ಉತ್ಸಾಹದಿಂದ ಬೇಕಾದಷ್ಟು ಮಕ್ಕಳಾಗುವುದುಂಟು."

"ಸರಿ, ನನಗೆಲ್ಲ ಗೊತ್ತು. ಹೇಳಬೇಕೆಂದಿರುವುದನ್ನು ನೇರವಾಗಿ ಹೇಳಬಾರದೆ?" ಪಿರ್ಜೋಳಿಗೆ ಬೇಸರ ಬಂದಿತ್ತು.

"ರಾಜಕುಮಾರಿ ಇದಕ್ಕೆ ಮತ್ತೊಂದು ಉದಾಹರಣೆ" ನಾನೆಂದೆ. "ಹೊಸ ವಾತಾವರಣ, ತನ್ನದೇ ಆದ ಮನೆ, ಹೊಸ ಭಾವನೆಗಳ ಹೊಸ ಸುಳಿಗಾಳಿಯ ಆವರಣ ಮತ್ತು ಪ್ರೇಮದ ಕೆಲವು ಬಿಂದುಗಳು ಆಕೆಯನ್ನೂ ಉಳಿಸಲೂ ಬಹುದು. ಆಕೆಗೆ ಮನೆ, ಆಕೆಯನ್ನು ಪ್ರೀತಿಸುವ ವ್ಯಕ್ತಿ ಮತ್ತು ಮಕ್ಕಳು ಬೇಕು."

"ನಿನಗೆಲ್ಲೋ ಹುಚ್ಚು. ಹಾಜ್ಕಿನ್ಸ್ ರೋಗಿಗಳಿಗೆ ಮಕ್ಕಳಾಗುವುದಿಲ್ಲ. ನೀನು ತಂದೆಯಾಗಬೇಕೆಂದು ಪ್ರಯತ್ನಪಟ್ಟರೆ, ರಾಜಕುಮಾರಿಗೆ ಗರ್ಭಸ್ರಾವ ಕಟ್ಟಿಟ್ಟದ್ದೇ. ನಂತರ ಅವಳ ಗರ್ಭಕೋಶವನ್ನು ತೆಗೆದುಹಾಕುತ್ತಾರೆ. ನೀನೊಬ್ಬ ಹುಚ್ಚ, ಹುಚ್ಚ."

"ಸ್ವಲ್ಪ ದಿನ ಕಳೆಯಲಿ, ನಮ್ಮ ಮಕ್ಕಳ ಫೋಟೋವನ್ನು ನಿನಗೆ ಕಳಿಸುತ್ತೇನೆ," ಎಂದು ಹೇಳಿ ಆಕೆಯನ್ನು ಹೊರಕ್ಕೆ ತಳ್ಳಿದೆ.

*

ನಾನು ಕೆಲವು ಹೂಗಳನ್ನು ಕೊಳ್ಳಲು ಹೊರಗೆ ಹೊರಟು ರಾಜಕುಮಾರಿಗೆ ಹೊಸ ಮನೆಗೆ ಬರಲು ಫೋನ್ ಮಾಡಿದೆ.

ಅವಳು ಬಂದಾಗ ಹಾಸಿಗೆಯೆಲ್ಲ ನನ್ನ ಕಣ್ಣೀರಿನಿಂದ ತೊಯ್ದು ಹೊಯಿತು.

ಆಕೆಯಲ್ಲಿ ಉತ್ಸಾಹ ಮೂಡಿಬಂದಿರಲಿಲ್ಲ. ಆಕೆ ಬಹಳ ವರ್ಷಗಳನ್ನು ಕಳೆದ ಮುದುಕಿಯಂತೆ ಕಂಡಳು.

"ಚಿಕಿತ್ಸೆಯಾದ ಮೇಲೆ ಅಂಗಡಿಗೆ ಹೋಗಬೇಕಾಯಿತು. ಅಡಿಗೆ ಮಾಡಬೇಕಾಯಿತು. ಆದ್ದರಿಂದ ಸ್ವಲ್ಪ ಬಳಲಿದ್ದೇನೆ. ಅಷ್ಟೇ ಇನ್ನೇನು ನಮ್ಮಿಬ್ಬರಿಗೇ ಅಡಿಗೆ ಮಾಡಿದರೆ ಸಾಲುತ್ತಲ್ಲ" ಎಂದಳು.

ಆಕೆ ಸಂತೋಷವಾಗಿ, ಉತ್ಸಾಹದಿಂದ ಮಾತಾಡಲು ಪ್ರಯತ್ನಪಟ್ಟಳು. ಆದರೆ ಅವಳ ಕೈಲಾಗಲಿಲ್ಲ. ನಮ್ಮಿಬ್ಬರ ಮಧ್ಯ ಮಾತುಕತೆಯನ್ನು ನಿಲ್ಲಿಸುವ ರೀತಿಯಲ್ಲಿ ಇದ್ದಕಿದ್ದಂತೆಯೇ ಮೌನ ತಳೆದಳು.

ಹಾಸಿಗೆಯ ತುದಿಯಲ್ಲಿ ಸುಮ್ಮನೇ ತೂಕಡಿಸುವವಳಂತೆ, ಕಣ್ಣುಗಳಲ್ಲಿಯಾಗಲೀ ವದನದಲ್ಲಿಯಾಗಲೀ ಕಳೆ ಇಲ್ಲದೆ ಕುಳಿತಳು.

ಈ ಕಳಾಹೀನಭಾವ ಇತರ ಯಾವುದೇ ರೋಗ ಅಥವಾ ಗಾಯ, ಮಾತುಗಳಿಗಿಂತಲೂ ನನಗೆ ಹೆಚ್ಚು ಭಯಪ್ರದವಾಗಿತ್ತು.

ಆಕೆಯಲ್ಲಿ ಉತ್ಸಾಹದ, ಆಶಾಕಿರಣದ ಕಿಡಿ ಮೂಡಲೇ ಇಲ್ಲ. ಈ ಸಂಯಮದ ವರ್ತನೆ ನನ್ನನ್ನು ಮತ್ತಷ್ಟು ಭಯಪಡುವಂತೆಮಾಡಿತು. ನಾನೇ ಧೈರ್ಯ ವಹಿಸಿ, ಆಕೆಯನ್ನು ಚುಂಬಿಸಿ ನಾಳೆಯ ಬಗ್ಗೆ ಮಾತನಾಡಲಾರಂಭಿದೆ.

ಆಕೆಯಲ್ಲಿ ಯಾವ ಬದಲಾವಣೆ ತೋರದಿದ್ದರೂ, ಆಕೆಯ ತುಟಿಯ ಕೊನೆಗಳು ಕಂಪಿಸತೊಡಗಿದವು

"ನಾಳೆ ಹೊರಗೆ ಹೋಗೋಣ. ಬೀಚಿಗೋ ಪಾರ್ಕಿಗೋ ಹೋಗೋಣ. ನಾಳೆ ಹವಾ ಚೆನ್ನಾಗಿರುತ್ತದೆ ಎಂದೆನಿಸುತ್ತೆ, ನನಗೆ," ಆಕೆ ಹೇಳಿದಳು.

"ಹಾಗೆಯೇ ಮಾಡೋಣ"

"ಸೂರ್ಯ ಬೆಳಗಿದರೆ ಕಿನ್ನರ ಕಥೆಯನ್ನು ಹೇಳುತ್ತೀಯಾ ?"

"ನಿನಗೆ ಬೇಕಾದಷ್ಟು."

"ಸುಖಾಂತ್ಯದ ಕಿನ್ನರ ಕಥೆಗಳು ? ನಿಜವಾಗಿಯೂ...?"

"ನೀನು ಸಂತೋಷವಾಗಿರಲು ಬೇಕಾದಷ್ಟು."

ಅಬ್ಬ ! ಅಷ್ಟು ಹೊತ್ತಾದ ಮೇಲೆ ಆಕೆಯ ತುಟಿಗಳು ಅರಳಿದವು. ನಗೆಮಲ್ಲಿಗೆ ತಂಪು

ಬೀರಿತು. ಕ್ಷಣಮಾತ್ರದಲ್ಲಿ ತೊಳ್ತೆಕ್ಕೆಯಲ್ಲಿ ಬಂಧಿತರಾಗಿದ್ದೆವು. ಚಳಿಯಿಂದ ರಕ್ಷಣೆ ಪಡೆಯುತ್ತಿದ್ದಾರೇನೋ ಎನ್ನುವಹಾಗಿತ್ತು, ನಮ್ಮ ಸ್ಥಿತಿ.

ಮಲಗಬೇಕೆಂದರೂ, ನಿದ್ದೆ ಬರಲಿಲ್ಲ. ರೇಡಿಯೋ ಹಚ್ಚಿ ಸಿಗರೇಟು ಸೇದುತ್ತಾ ಕುಳಿತೆ.

"ನಿದ್ದೆ ಮಾಡುವಾಗಲಾದರೂ ನಿನ್ನನ್ನು ನೀನು ಸ್ವಲ್ಪವಾದರೂ ಮರೆಯಬಲ್ಲೆಯಾ ?" ನಾನು ಕೇಳಿದೆ.

"ಆದರೆ ಕನಸು ಕಾಣುತ್ತೇನೆ," ಆಕೆಯ ಉತ್ತರ.

"ಕನಸುಗಳ ಮಾತು ಬೇರೆ. ನಮಗೆ ಬೇಡವಾದರೆ ಅವುಗಳಲ್ಲಿ ನಂಬಿಕೆ ಇಡುವ ಅಗತ್ಯವಿಲ್ಲ."

"ಆದರೆ ನಾಳೆ..."

ನಾನು ಯಾವ ಉತ್ತರವನ್ನೂ ಕೊಡಲಿಲ್ಲ. ನನಗೇಕೋ ಸಿಟ್ಟು ಬಂದಿತು. ನಾನು ಕೇಳದೆ ಎಂದೂ ಆಕೆ ತನ್ನ ಕಾಹಿಲೆಯ ಬಗ್ಗೆ ಹೇಳುತ್ತಿರಲಿಲ್ಲ. ನಿಜವಾಗಿಯೂ ಯಾತನೆ ನೋವು ಯಾರ ಮನಸ್ಸನ್ನಾದರೂ ಬೇಸರಗೊಳಿಸುತ್ತದೆ. ಅದೂ ಅಲ್ಲದೆ ರಾಜಕುಮಾರಿ ಎದ್ದಾಗ, ಬೇಸರವೇ ಮೂರ್ತಿಮತ್ತಾದಂತೆ ಕಾಣುತ್ತಿತ್ತು. ಸಲ್ಪ ಹೊತ್ತು ಹಾಗೆಯೇ ನರಳುತ್ತಿದ್ದಳು.

"ಒಂದು ಮಾತ್ರೆಯನ್ನಾದರೂ ನುಂಗು," ಅದು ಉಪಯೋಗವಿಲ್ಲವೆಂದು ಗೊತ್ತಿದ್ದರೂ ಹೇಳಿದೆ. ಮಾತ್ರೆಗಳು ಸಹಾಯಮಾಡದಷ್ಟು ಅವಳು ಸುಸ್ತಾಗಿದ್ದಳು. ಪ್ರಯತ್ನಪಟ್ಟರೂ ನಿದ್ದೆ ಬರುತ್ತಿದ್ದಿಲ್ಲ. ಆಕೆ ಬರೇ ಒದ್ದಾಡುತ್ತಿದ್ದಳು.

ಅವಳ ಕಷ್ಟ ಸಾಧಾರಣವಾಗಿರಲಿಲ್ಲ. ಕೆಲವೊಮ್ಮೆ ಪ್ರಪಂಚವೇ ಯಾತನಾಮಯವಾಗಿರುತ್ತಿತ್ತು. ಆದರೆ ಅದಕ್ಕಿಂತಲೂ ಕೆಡುಕೆಂದರೆ ನೋವೇ ಏನೋ ಮಬ್ಬು ಬಣ್ಣದ್ದಾಗುವುದು. ಆಗ ಹೋರಾಡುವುದಕ್ಕೆ ಮನಸ್ಸಾಗುವುದಿಲ್ಲ. ಆಗ ಒಂದೇ ವಿಚಾರ, ಒಂದೇ ಸುಖದ ಚಿಂತನೆ ಉಳಿಯುತ್ತದೆ. ಅದೇ ಕೊನೆಯ ವಿಚಾರ.

ನಾನು ಎದ್ದು ಅಡಿಗೆ ಮನೆಗೆ ಹೋದೆ. ನಮ್ಮ ವೈವಾಹಿಕ ಜೀವನದ ಪ್ರಾರಂಭದಲ್ಲಿ ಪ್ರಪ್ರಥಮವಾಗಿ ಕೊಂಡುಕೊಂಡಿದ್ದ ರೆಫ್ರಿಜಿರೇಟರನೊಂದಿಗೆ ಆಟವಾಡಿದೆ. ಮರಳಿ ಬಂದಾಗ,

"ನೀನು ಹೊರಟುಹೋಗಿದ್ದೆಯಲ್ಲ, ಆಗ ನನ್ನಷ್ಟಕ್ಕೇ ಮಾತನಾಡಿಕೊಂಡೆ," ಎಂದು ರಾಜಕುಮಾರಿ ಹೇಳಿದಳು.

"ನಾನು ಎಲ್ಲಿಯೂ ಹೋಗಿರಲಿಲ್ಲ. ಅಡಿಗೆ ಮನೆಯಲ್ಲಿದ್ದೆ."

"ನನ್ನ ಕೈಗೆಟುಕದಷ್ಟು ದೂರ ಹೋದಾಗೆಲ್ಲ ನೀನು ದೂರ ಇದ್ದ ಹಾಗನಿಸುತ್ತದೆ. ಒಂದು ಮುದ್ದು ಕೊಡಬಾರದೇ !" ಎಂದಳು.

ಅವಳ ಸ್ಥಿತಿಯೇನೂ ಚೆನ್ನಾಗಿ ಕಾಣಿಸಲಿಲ್ಲ. ನಾವು ಚುಂಬಿಸಿದೆವು. ಅವಳು ನನ್ನನ್ನು ಗತಿಯಿಲ್ಲದವಳ ಹಾಗೆ ತಬ್ಬಿಕೊಂಡಳು. ಆ ಚುಂಬನದಲ್ಲಿ ಯಾವುದೋ ಹೊಸ ಅನುಭವವಿತ್ತು, ಮಗುವಿನ ಚುಂಬನದಂತೆ ನವಚೇತನವಿತ್ತು. ಆಕೆಯ ಮುಖದ ಕಡೆ ನೋಡಿದೆ.

ನನ್ನ ಬಾಹುಗಳಲ್ಲಿ ರಕ್ಷಣೆ ಪಡೆದಾಗ, ತನ್ನ ರೋಗದ ವಿರುದ್ಧವೂ ರಕ್ಷಣೆ ಪಡೆದಂತೆ ಆಕೆಗೆ ಅನಿಸುತ್ತಿರಬೇಕು. ಆದರೂ ಆ ರಕ್ಷಣೆ ತಾತ್ಕಾಲಿಕ ತಾನೇ.

ಇದ್ದಕ್ಕಿದ್ದಂತೆಯೇ ಅವಳು ತುಂಟ ಮಗುವಿನಂತಾದಳು.

"ನೀನು ಬೇರೆ ಹುಡುಗಿಯರೊಡನೆ ಎಂದಾದರೂ ಮಲಗಿದ್ದೆಯಾ ?"

"ಇಲ್ಲ."

"ಸುಳ್ಳು ಹೇಳುತ್ತೀಯೆ."

"ಹೌದು"

"ಅದು ಸರಿ. ನೀನು ಸುಳ್ಳು ಹೇಳಬೇಕೆಂದೇ ನನ್ನ ಆಸೆ. ಎಷ್ಟು ಜನ ಹುಡುಗಿಯರೊಡನೆ ?"

"ನಿನ್ನನ್ನು ಬಿಟ್ಟು ಮತ್ತಾರೊಡನೆಯೂ ಇಲ್ಲ."

"ಜಾಣ ಉತ್ತರ."

"ಅಯ್ಯೋ. ಹಣ್ಣಿನ ರಸವನ್ನೆಲ್ಲ ಖಾಲಿ ಮಾಡುತ್ತಿದ್ದೀಯಲ್ಲ. ನನಗೂ ಸ್ವಲ್ಪ ಇರಲಿ"

"ನಿನಗೂ ಬಾಯಾರಿಕೆಯೇನು ?"

"ಹೌದು, ನಿನ್ನಂತೆಯೇ."

ಸೂರ್ಯ ಆಗಲೇ ಮೇಲೇರಿದ್ದ. ನಮ

ಯಾವುದೂ ಬೇಕಾಗಿರಲಿಲ್ಲ. ಆಲಿಂಗನದ ಮಾದಕತೆಯೇ ಸಾಕಾಗಿತ್ತು.

ನಮ್ಮ ಚರ್ಮಗಳು ಬಿಸಿಯೇರುತ್ತಿದ್ದವು. ಮೈಯಲ್ಲಿ ಬೆಳಕು ತುಂಬುತ್ತಿತ್ತು. ಬುದ್ಧಿಗಳು ಓಡುತ್ತಲೇ ಇರಲಿಲ್ಲ. ಕ್ಷಣಿಕ ಯೋಚನೆಗಳು ಸುಳಿದು ಮಾಯವಾಗುತ್ತಿದ್ದವು. ಅವು ನಮ್ಮ ಶರೀರಗಳ ಉತ್ತೇಜನದ ಪ್ರತಿಕ್ರಿಯೆಗಳಾಗಿದ್ದವಷ್ಟೇ.

ಕಣ್ಣು ತೆರೆದು, ಆಕೆಯನ್ನು ದಿಟ್ಟಿಸಿದೆ. ಹೆದರಿಕೆಯಾಯಿತು. ಆಕೆಯ ಮುಖಭಾವದಲ್ಲಿ ಯಾವುದೋ ಅವಿನಾಶಿ ನಿಶ್ಚಯ ಇತ್ತು. ಯಾವುದೋ ನಿರ್ಣಯ ಮನೆಮಾಡಿದಂತಿತ್ತು. ಗಾಬರಿಯಿಂದ, ಆಕೆಯಿಂದ ಬೇರ್ಪಟ್ಟು, ಆಕೆಯ ಮುಖವನ್ನು ನನ್ನ ಬೊಗಸೆಯಲ್ಲಿ ಹಿಡಿದುಕೊಂಡೆ.

"ಇದು ಹೀಗೆಯೆ ನಡೆಯಲಾರದು. ನಾವು ಎಚ್ಚರಿಕೆ ತಪ್ಪಿದರೆ, ನೀನು ತಾಯಿಯಾಗಬೇಕಾಗುತ್ತೆ. ಕೇಳಿಸಿತೆ?"

"ನನಗೆ ಮಗು ಬೇಕೇ ಬೇಕು."

"ಅದರಿಂದ ಏನೂ ಲಾಭ ಇಲ್ಲ."

"ಇಲ್ಲ, ನನಗೆ ಬೇಕು."

ಭಯ ಹಾಗೂ ವಿಚಾರ ಶಕ್ತಿಯನ್ನು ಮೂಲೆಗೊತ್ತಿ, ಜ್ವಾಲೆ ಮತ್ತೆ ದೊಡ್ಡದಾಯಿತು. ಸಂತೋಷ ಹಾಗೂ ಕೋಮಲತೆಯ ಪ್ರವಾಹದಲ್ಲಿ ನಾವು ಮಿಂದೆವು. ಅದೇ ಕ್ಷಣದಲ್ಲಿ ನಮ್ಮ ಇಡೀ ಪ್ರಪಂಚದ ರಹಸ್ಯವನ್ನು ಕಣ್ಣಾರೆ ಕಂಡೆವು. ನಿರ್ಣಯ ಬಲವಾಗಿತ್ತು. ಯಾವುದೂ ನಮ್ಮನ್ನು ತಡೆಯುವಂತಿರಲಿಲ್ಲ.

ಸಂತೋಷದ ನಗುಮುಖದೊಂದಿಗೆ ರಾಜಕುಮಾರಿ ನಿದ್ದೆಮಾಡಿದಳು. ನಿಶ್ಚಲವಾಗಿ, ಬಹಳ ಹೊತ್ತು ಮಲಗಿದ್ದಳು. ಕನಸು ನೋವುಗಳಿಲ್ಲದ ನಿದ್ದೆ ಇರಬೇಕು. ನಾನು ಭವಿಷ್ಯತ್ತಿನ ಬಗ್ಗೆ ಚಿಂತಿಸತೊಡಗಿದೆ. ಆಕೆಯ ವೈದ್ಯರೇನಾದರೂ ನ್ಯಾಯಬದ್ಧ ಗರ್ಭಸ್ರಾವದ ಬಗ್ಗೆ ಮಾತನಾಡತೊಡಗಿದರೆ...

ಆದರೆ ಯಾವ ಯೋಚನೆಗಳೂ ನನ್ನ ಸಂತೋಷಕ್ಕೆ ಅಡ್ಡ ಬರಲಿಲ್ಲ. ಹಾಗೆಯೇ ಉರುಳಿದಾಗ, ಆಯಾಸಪರಿಹಾರದ ಆಯಾಸ ನನ್ನನ್ನಾವರಿಸಿತು.

*

ಮಧ್ಯಾಹ್ನ ಹನ್ನೆರಡು ಘಂಟೆ ದಾಟಿ, ಟೆಲಿಫೋನ್ ಗಂಟೆ ಬಾರಿಸುವ ತನಕ ನಾವು ಏಳಲೇ ಇಲ್ಲ.

"ಆರು ಘಂಟೆಗೂ ಮಿಕ್ಕಿ ನಿದ್ದೆ ಮಾಡಿದೆನಲ್ಲ. ನಾನು ಇಷ್ಟು ಹೊತ್ತು ನಿದ್ದೆಮಾಡಿ ಎಷ್ಟೋ ತಿಂಗಳುಗಳು, ವರ್ಷಗಳಾಗಿದ್ದವು," ಎನ್ನುತ್ತ ಅವಳು ಹಾಸಿಗೆಯ ಮೇಲೆ ಕುಳಿತಳು.

ಮತ್ತೆ ಹಾಸಿಗೆಯ ಮೇಲೆ ಉರುಳಿದಳು.

"ಸುಂದರ ದಿನ. ಪಾರ್ಕಿನಲ್ಲಿ ಒಂದಿಷ್ಟು ದೂರ ಹೋಗಬೇಕೆನಿಸುತ್ತದೆ. ಹೋಗಿ, ಮಕ್ಕಳನ್ನು ನೋಡಬೇಕೆನಿಸಿದೆ. ಬಾ. ನನ್ನೊಂದಿಗೆ...ಸ್ವಲ್ಪ ಹೊತ್ತು ಅಷ್ಟೇ."

"ಇನ್ನೊಂದು ಘಂಟೆಯಲ್ಲಿ ಆಫೀಸಿನಲ್ಲಿರ ಬೇಕಲ್ಲ."

"ಅದಕ್ಕೆ ಮುಂಚೆಯೇ."

"ಅದಕ್ಕೆ ಮುಂಚೆ ಒಂದು ಲೇಖನವನ್ನು ಸಿದ್ಧಗೊಳಿಸಬೇಕಲ್ಲ."

"ಅದಕ್ಕೆ ಒಂದು ಘಂಟೆ ಬೇಕೇನು? ಏನು, ಸ್ಫೂರ್ತಿ ಬರುತ್ತಾ ಇಲ್ಲವೆ?"

"ನಿನ್ನನ್ನು ಮದುವೆಯಾಗಿದೇನಲ್ಲ. ಇನ್ನೆಲ್ಲಿ ಸ್ಫೂರ್ತಿ?"

"ಇದು ಮೆಚ್ಚಿಗೆಯ ಮಾತೋ, ಮತ್ತೇನೋ ನನಗೆ ಅರ್ಥವಾಗಲಿಲ್ಲ."

ಅವಳು ಹಾಸಿಗೆಯಿಂದ ಮೇಲಕ್ಕೆದ್ದಳು. ಕನ್ನಡಿಯಲ್ಲಿ ನೋಡಿಕೊಂಡಳು. ಕೇಶ-ಶೃಂಗಾರದ ಕಡೆ ಗಮನ ಹೋಯಿತು. ಕೇಶ ಪ್ರಸಾಧನದ ಅಂಗಡಿಗೆ ಹೋಗಬೇಕೆಂದಳು.

ಈ ಘಟನೆಯ ನಂತರ ಪ್ರತಿವಾರವೂ ಅಂಗಡಿಗೆ ಹಾಜರಿ ಹಾಕುತ್ತಿದ್ದಳು. ಹೊಸ ಹೊಸ ಆಭರಣ ಹಾಗೂ ಒಟ್ಟೆಯ ಕಡೆ ವಿಶೇಷ ಗಮನ ಕೊಡಲಾರಂಭಿಸಿದ್ದಳು. ಒಂದು ದಿನ ಸುವಾಸನಾ ದ್ರವ್ಯದ ಕಂಪು ಆಕೆಯ ಕಡೆಯಿಂದ ತೇಲಿಬಂತು.

ವಾರಗಳು ಉರುಳಿದವು. ಆಶಾಂಕುರ ಮೊಳೆಯುತ್ತಿತ್ತು. ನನ್ನ ವಿರಾಮ ವೇಳೆಯನ್ನೆಲ್ಲ ಒಟ್ಟಿಗೆ ಕಳೆಯುತ್ತಿದ್ದೆವು.

ನಾವು ವಾಕಿಂಗ್ ಹೋದಾಗಲೆಲ್ಲ ಅನೇಕ ವೇಳೆ ಮಗುವಿನ ಆರೈಕೆಯ ಬಗ್ಗೆ ಚರ್ಚಿಸುತ್ತಿದ್ದೆವು. ಹಿಂದೆಂದೂ ಆಡಿರದಂತೆ ಈಗ ಮಾತಾಡಿ ನನ್ನನ್ನು ಆಶ್ಚರ್ಯಪಡಿಸುತ್ತಿದ್ದಳು.

ಅವಳು ಇನ್ನೂ ಆಗಾಗ್ಗೆ ಕಾರಿಕೊಳ್ಳುತ್ತಿದ್ದಳು. ಆಕೆ ತಾಯಿಯಾಗಲಿದ್ದರಿಂದ ದೇಹದ ನವೆ ಒಮ್ಮೊಮ್ಮೆ ಅಸಾಧ್ಯವಾಗಿ ಪರಿಣಮಿಸುತ್ತಿತ್ತು—ಆಕೆ ಔಷಧ ತೆಗೆದುಕೊಳ್ಳುವುದನ್ನು ಕಡಿಮೆ ಮಾಡಿದ್ದರಿಂದಲೋ ಏನೋ. ಕಾರ್ಟಿಸೊನ್- ಏಟಮಿನ್ನನ್ನು ಮಾತ್ರ ತೆಗೆದುಕೊಳ್ಳುತ್ತಿದ್ದಳು. ಔಷಧ ತೆಗೆದುಕೊಳ್ಳುತ್ತಿಲ್ಲವೆಂದು ಗೊತ್ತಾದಾಗ ಒಮ್ಮೆ ಪ್ರಶ್ನಿಸಿದೆ.

"ನವೆ ವಿಪರೀತವಾಗಿ, ನೀನಂತೂ ನಿದ್ದೆ ಮಾಡುತ್ತಲೇ ಇಲ್ಲ. ಔಷಧವನ್ನೇಕೆ ತೆಗೆದುಕೊಳ್ಳುತ್ತಿಲ್ಲ?"

"ಮಗುವಿಗೆ ಒಳ್ಳೆಯದಲ್ಲ. ಆದ್ದರಿಂದ..."

"ಡಾಕ್ಟರು ಏನಾದರೂ ಹೇಳಿದ್ದಾರೇನು?"

ಅವಳು ಉತ್ತರ ಕೊಡಲಿಲ್ಲ. ಆಕೆಗೆ ಮಗುವನ್ನು ಕಳೆದುಕೊಳ್ಳಬೇಕಲ್ಲ ಎಂಬ ಭಯ ಇದೆ ಎಂದು ಭಾವಿಸಿದೆ. ಗರ್ಭಪಾತದ ಸಾಧ್ಯತೆಯ ಅವಧಿ ಮುಗಿಯುವ ತನಕ ತಾನು ಬಸುರಿ ಎಂಬುದನ್ನು ತಿಳಿಸದೆ ನನ್ನಿಂದ ಬಚ್ಚಿಡುತ್ತಿದ್ದಾಳೆ ಎಂದುಕೊಂಡೆ.

ಆಕೆಯೇನೋ ಮಗುವಿಗೆ ತನ್ನ ಜೀವವನ್ನೇ ಕೊಡಲು ಸಿದ್ಧಳಿದ್ದಳು. ಆದರೆ, ನಾನು ಸಿದ್ಧನಿರಲಿಲ್ಲ. ಅವಳು ತನ್ನ ವೈದ್ಯಕೀಯ ಪರೀಕ್ಷೆಗಳಿಗೆ ಬಂದಾಗ, ಅವಳ ಶರೀರದಲ್ಲಿನ ಬದಲಾವಣೆಗಳನ್ನು ಗಮನಿಸುವಂತೆ ಅವಳ ವೈದ್ಯರುಗಳಿಗೆ ಗುಟ್ಟಾಗಿ ಹೇಳಿದ್ದೆ.

"ನಮಗೇನೋ ಮಗು ಬೇಕು. ಆದರೆ ಆಕೆಯ ಜೀವವನ್ನು ಬಲಿಗೊಡಲಾರೆ" ನಾನೆಂದೆ.

ಆಕೆಯ ದೇಹಸ್ಥಿತಿಯ ಬಗ್ಗೆ ಡಾಕ್ಟರ್ ಅನುಮಾನ ತಳೆದಿದ್ದರು. ರಕ್ತದ ಚಾರ್ಟ್ ಅಧೋಗತಿಯನ್ನು ತೋರಿಸುತ್ತಿತ್ತು. ಆದರೆ ನಮ್ಮ ನಂಬಿಕೆಯನ್ನು ತಿಳಿಸಿದಾಗ, ಆತನೂ ನನಗೆ ಧೈರ್ಯ ಹೇಳಿದ್ದ.

ಆಕೆ, ತಾನು ತಾಯಿಯಾಗುವೆನೆಂದು ಗೊತ್ತಾದ ಮೇಲೆ, ತನ್ನ ಕಾಹಿಲೆಯನ್ನು ಹೊಸ ಬಗೆಯಿಂದ ಎದುರಿಸುತ್ತಿದ್ದಳು. ಸಾವಿಗಾಗಿ ನರಳುತ್ತಿರಲಿಲ್ಲ ಪುನರ್ಜನ್ಮಕ್ಕಾಗಿ ಒದ್ದಾಡುತ್ತಿದ್ದಳು ಸಂಕಟದಲ್ಲಿಯೂ ಸಂತೋಷವನ್ನನುಭವಿಸುತ್ತಿದ್ದಳು.

"ಅತ ಆರೋಗ್ಯವಾಗಿದ್ದು, ಹೊಟ್ಟೆಯಲ್ಲಿ ಚೆನ್ನಾಗಿ ಬೆಳೆದರೆ ಸಾಕು, ನಾನು ಕ್ಷೀಣಿಸಿದರೂ ಪರವಾಗಿಲ್ಲ," ಎಂದಳು, ಒಮ್ಮೆ.

ಆಕೆಯ ಯೋಚನೆಗಳೆಲ್ಲ ಒಮ್ಮೊಮ್ಮೆ ಕನಸಾಗಿ ಪರಿಣಮಿಸುತ್ತಿದ್ದವು. ಒಂದು ದಿನ ಮನೆಗೆ ನಿಧಾನವಾಗಿ ನಡೆದುಕೊಂಡು ಬರುತ್ತಿದ್ದಾಗ,

# ಕೇವಲ 'ಆಸ್ಪ್ರೋ' ಮಾತ್ರವೇ ಮೈಕ್ರೋಫೈನ್ಡ್ ಮಾಡಲಾಗಿದೆ ನೋವನ್ನು ತೀವ್ರವಾಗಿ ನಿವಾರಿಸುವುದಕ್ಕಾಗಿ












ಇವುಗಳಿಗೆ ಹೊಸ ಮೈಕ್ರೋಫೈನ್ಡ್ 'ಆಸ್ಪ್ರೋ' ತೆಗೆದುಕೊಳ್ಳಿರಿ: • ನೋವು • ತಲೆಸಿಡಿತ • ಫ್ಲೂ • ಮೈನೋವು • ನೆಗಡಿ • ಸಂದುನೋವು • ಗಂಟಲುನೋವು • ಹಲ್ಲುನೋವು.

ಪ್ರಮಾಣ: ದೊಡ್ಡವರಿಗೆ: 2 ಮಾತ್ರೆಗಳು ಅವಶ್ಯವೆನಿಸಿದರೆ ಪುನ: ತೆಗೆದುಕೊಳ್ಳುವುದು.

ಮಕ್ಕಳಿಗೆ: 1 ಮಾತ್ರೆ ಅಥವಾ ನಿಮ್ಮ ಡಾಕ್ಟರರ ಸಲಹೆಯಂತೆ.

ಹೊಸ ಮೈಕ್ರೋಫೈನ್ಡ್ 'ಆಸ್ಪ್ರೋ' ಇಂದೀಗ ಸಿಗುವ ನೋವು ನಿವಾರಕ ಔಷಧಗಳಲ್ಲಿ ಅತ್ಯಾಧುನಿಕವಾದುದು.

## ಹೊಸ ಮೈಕ್ರೋಫೈನ್ಡ್ 'ಆಸ್ಪ್ರೋ'

ನೋವನ್ನು ತೀವ್ರವಾಗಿ ನಿವಾರಿಸುವುದು.

ನಿಕೊಲಸ್ (N) ತಯಾರಿಕೆ

AG.38 KAN

ನನ್ನ ಮನಸ್ಸಿನಲ್ಲಿ ಆಕೆಯ ಬಗ್ಗೆ ಅಗಾಧ ಕನಿಕರ ಉಕ್ಕಿ ಬಂತು. ನಮ್ಮ ವಿವಾಹದ ನಂತರ ಈ ಬಗೆಯ ಕನಿಕರ ಅವಳ ಬಗ್ಗೆ ಮೂಡಿದ್ದು ಅದೇ ಮೊದಲು, ಅದೇ ಕೊನೆ ಸಲ ಎಂದು ತೋರುತ್ತದೆ.

ನೀನು ಕಾಹಿಲೆಯಿಂದ ನರಳುತ್ತಿದ್ದೀ, ನಾನು ಕನಿಕರ ಪಡುವುದಕ್ಕೆ ಇದೊಂದೇ ಕಾರಣವಲ್ಲ. ಮತ್ತೇನೋ ಇರಬೇಕು ಎಂದು ಕೊಂಡೆ. ಕೇವಲ ಕನಿಕರದ ಕಾರಣಗಳಿಂದಲೇ ಒಬ್ಬ ಸ್ತ್ರೀಯನ್ನು ಮದುವೆಯಾಗುತ್ತೇನೆಂಬ ಹೃದಯ ವೈಶಾಲ್ಯ ನನ್ನಲ್ಲಿಲ್ಲ. ನಾನು ಅವಳನ್ನೂ ಜೀವನವನ್ನೂ ಪ್ರೀತಿಸುತ್ತೇನೆ. ನೆರಳು ಬೀಳುವುದಕ್ಕೆ ಮುಂಚೆ ಬಿಸಿಲಿನಲ್ಲಿ ಬಹಳ ದೂರ ನಡೆಯಬೇಕೆನ್ನುತ್ತೇನೆ. ರಾಜಕುಮಾರಿ ದ್ವೀಪಕ್ಕೆ ಬರಬೇಕೆಂದೂ ನೆರಳು ಮೂಡುವ ಮುನ್ನ ಬಹಳ ಹೊತ್ತು ಬಿಸಿಲಿರಬೇಕೆಂದೂ ನನಗಾಸೆ.

ನವೆ ಇದ್ದರೂ ಅವಳೀಗ ಬಹಳ ಹೊತ್ತು ನಿದ್ದೆ ಮಾಡುತ್ತಿದ್ದಳು. ಮಲಗುವ ಮುನ್ನ ರಗ್ಗುಗಳನ್ನು ಟೆಂಟಿನಂತೆ ಹೊದ್ದುಕೊಂಡು ಹೇಳುತ್ತಿದ್ದಳು. "ನಾವಿಲ್ಲಿದ್ದೇವೆ — ನಾನು ಮತ್ತು ನನ್ನ ಮಗ...ಹಾ ಹಾ! ಮಳೆಯೇ ಬೀಳಲಾರದು ಇಲ್ಲಿ."

ನಾನು ಹಾಸಿಗೆಯಲ್ಲಿ ಉರುಳಿಕೊಂಡೇ ನಗುತ್ತಿದ್ದೆ. ಆಕೆಯ ಆರೋಗ್ಯ ಸುಧಾರಿಸುತ್ತಿತ್ತು. ನೋವು ಅಷ್ಟಿಲ್ಲದಿದ್ದಾಗ, ಮಕ್ಕಳಂತೆ ಚೆಲ್ಲಾಟವಾಡುತ್ತಿದ್ದೆವು. ತನ್ನ ರೋಗದ ಗಂಟುಗಳೇ ಒಮ್ಮೊಮ್ಮೆ ತನಗೆ ಸುಖಾವಹವಾಗಿ ಪರಿಣಮಿಸುತ್ತಿದ್ದವೆಂದು ಅವಳು ಹೇಳುತ್ತಿದ್ದಳು.

೨

ಅಂದವಳು ಸ್ನಾನದ ಟಬ್ಬಿನಲ್ಲಿದ್ದಾಗ ರಕ್ತದ ಕಹಿರುಚಿ ಬಾಯಿಗೆ ಬಂತು. ಆದರವಳು ನಿಶ್ಚಿಂತೆಯಿಂದ ಸಾಬೂನು ಹಚ್ಚಿಕೊಂಡಳು. ಹೊಟ್ಟೆಗಂತೂ ಬಲು ಮಮತೆಯಿಂದೆಂಬಂತೆ ಎರಡು ಬಾರಿ ಸೋಪು ಹಚ್ಚಿ ಮೆದುವಾಗಿ ತಿಕ್ಕಿಕೊಂಡಳು.

ಆ ಮೇಲೆ ಹಾಸಿಗೆ ಸೇರಿ ಪುಸ್ತಕದ ಹಾಳೆಗಳನ್ನು ತಿರುಗಿಸುತ್ತ ಮಲಗಿದ್ದಳು. ಅದನ್ನು ಬಿಟ್ಟು ಗೋಡೆಗೆ ಮುಖ ಹಾಕಿ ಮಲಗಿದಳು. ಎಷ್ಟೋ ಹೊತ್ತು ಹೀಗಿದ್ದ ಮೇಲೆ ಒಮ್ಮೆಲೇ ಯಾವುದೋ ನಿರೀಕ್ಷೆ, ಅವ್ಯಕ್ತ ಭಯ ಅವಳನ್ನು ತತ್ತರಗೊಳಿಸಿತು. ಅದೇ ಕ್ಷಣದಲ್ಲಿ ರೋಮಾಂಚವಾದಂತಾಯಿತು. ಅವಳ ಹೊಟ್ಟೆಯ ಒಳಭಾಗದಲ್ಲಿ ಯಾವುದೋ ಹತ್ತಿಯ ಉಂಡೆ ಅಪ್ಪಳಿಸುತ್ತಿರುವಂತೆ ಅವಳಿಗೆ ಭಾಸವಾಗುತ್ತಿತ್ತು.

ನನಗಾಗಿ ಕೂಗಬೇಕೆಂದುಕೊಂಡರೂ ಮತ್ತೊಮ್ಮೆ ಹಾಗಾದರೆ ಮಾತ್ರ ಕರೆಯಬೇಕೆಂದು ಸುಮ್ಮನಾದಳು. ಆ ಹತ್ತಿಯುಂಡೆ ಇನ್ನೊಮ್ಮೆ ಚಲಿಸುವ ಅನುಭವ ಬರುವುದಕ್ಕೆ ಅನಂತ ಕಾಲ ಕಾಯಬೇಕೋ ಎನಿಸಿತು.

ಅವಳು ನನ್ನತ್ತ ನೋಡಿದಳು. ಅವಳು ಏನನ್ನೂ ಹೇಳದೇನೇ ಎಲ್ಲವೂ ನನಗೆ ಅರ್ಥವಾಯಿತೆಂದು ಅವಳಿಗೆ ಗೊತ್ತಾಯಿತು. ಇಬ್ಬರ ಕಣ್ಣುಗಳಿಂದಲೂ ಅಶ್ರುಗಳು ಸುರಿಯುತ್ತಿದ್ದವು.

ಅವಳು ನಿಶ್ಚಲಳಾಗಿ ನಿರೀಕ್ಷಿಸುತ್ತ ಹಾಗೆಯೆ ಮಲಗಿದ್ದಳು. ಯಾವುದೋ ವನ್ಯಮೃಗದ ಸುಳಿವು ಹಿಡಿಯುತ್ತಿರುವವಳ ಹಾಗೆ, ತಾನು ಚಲಿಸಿದರೆ ಸಾಕು, ಮೃಗ ಕಣ್ಮರೆಯಾದೀತೆಂಬ ಭಯವಿದ್ದವರ ಹಾಗೆ. ಅವಳಿಗೀಗ ಯಾವ ನೋವೂ ಇರಲಿಲ್ಲ.

ಮತ್ತೆ ಆ ಅನುಭವ ಬಂತು! ಗರ್ಭಸ್ಥ ಶಿಶುವಿನ ಒದೆ ಎನಿಸುವಷ್ಟು ಬಲವಾದ್ದೇನಲ್ಲ ಅದು ಇನ್ನೂ ಬಲು ಪುಟ್ಟದಾಗಿತ್ತು. ಆದರೂ ಯಾವುದೋ ಚಿಕ್ಕ ಮೀನು ಚಲಿಸಿದ ಹಾಗೆ.

ಹೌದು, ಹೊಸ ಜೀವ ಉದಯವಾಗುತ್ತಿತ್ತು.

ಆಕೆಯ ದೇಹದಲ್ಲಿ ಶಾಂತಿ ತುಂಬಿತುಳುಕುತ್ತಿತ್ತು. ತಾನು ನಿರೋಗಿಯಾಗಿರುವಂತೆ ಭಾಸವಾಗುತ್ತಿತ್ತು. ಹೊತ್ತು ಮುಳುಗುತ್ತಿತ್ತು. ಅವಳು ಹಾಗೇ ಮಲಗಿ ಕಿಟಕಿಯ ಕಡೆ ನೋಡತೊಡಗಿದಳು. ತನ್ನೊಳಗೆ ಇಂಥ ಅದ್ಭುತವಾಗುವುದು ಅತಿ ವಿಚಿತ್ರವೆಂದೇ ಅವಳಿಗನಿಸುತ್ತಿತ್ತು.

ಅವಳು ಎದ್ದು ನಿಂತಳು. ತಲೆ ಸುತ್ತಿದಂತನಿಸಿತು. ಆದರೆ ತನ್ನಲ್ಲಿ ಯಾವುದೋ ಆನಂದ ಪ್ರಜ್ವಲಿಸುವ ಅನುಭವ.

ಅವಳ ಸಂಕಲ್ಪಶಕ್ತಿ ತಾನು ಬದುಕಿ ಬಾಳ ಬೇಕೆಂಬಾಸೆಗೆ ಬಲಕೊಡುತ್ತಿತ್ತು. ಮತ್ತೆ ಅವಳು ಮಲಗಿದಾಗ ನಾನು ಅವಳ ಪಕ್ಕದಲ್ಲೇ ಕುಳಿತೆ

"ನನಗೆ ಹೊಳೆಯುವುದಿಲ್ಲ. ಅನಿರ್ವಚನೀಯ ಆನಂದ ಗೊತ್ತಾಯಿತೇ, ಗೊತ್ತಾಯಿತೇ ?"

"ಗೊತ್ತಾಯಿತು," ಮೆಲ್ಲನೆ ಅವಳ ಕಿವಿಯಲ್ಲಿ ನುಡಿದೆ, "ಅರ್ಥವಾಯಿತು. ಆದರೆ ಇದಕ್ಕಾಗಿಯೇ ನಿನ್ನ ಜೀವವನ್ನು ಬಲಿಕೊಡಲು ಸಿದ್ಧಳಾಗಿದ್ದೀಯೆಂದೂ ನಾನು ಯೋಚಿಸುತ್ತಿದ್ದೇನೆ. ರಾಜಕುಮಾರಿ, ಅದನ್ನು ನೆನೆದಾಗ, ಆಗ ನನಗೆ ಅರ್ಥವಾಗುತ್ತದೆ."

ಆ ಸಂಜೆ, ಆ ರಾತ್ರಿ, ಆಕೆ ಎಂದಿಗಿಂತ ಹೆಚ್ಚು ಸುಂದರಳಾಗಿ, ಸಶಕ್ತಳಾಗಿ ಕಂಡಳು. ಮುಂದೆ ಕೂಡ ಹಾಗೇ ಇದ್ದಳು. ಹೋರಾಡುವ ಹೊಸಬಗೆ ಎಂದುಕೊಂಡೆ. ಜೀವದಾನ—ಸಾವಿನ ವಿರುದ್ಧ ವಿಚಿತ್ರ ಹೋರಾಟ.

ಮೂರನೆಯ ದಿನ ಬೆಳಿಗ್ಗೆ ಎದ್ದಾಗ ಆಕೆಯಲ್ಲಿ ಯಾವ ಬದಲಾವಣೆಯೂ ಆಗಿರಲಿಲ್ಲ. ಆಕೆಯ ಹೃದಯ ಹಗುರಾಗಿತ್ತು. ಹಾಗೆಯೇ ಮಲಗಿದ್ದಳು. ಅಲ್ಲಿಗೆ ಹೋಗಿ ಬ್ರೆಡ್, ಹಾಲನ್ನು ಕೊಟ್ಟೆ. ಅವಳಿಗೆ ಕಿನ್ನರ ಕಥೆಯೊಂದನ್ನು ಹೇಳಿದೆ. ಅಂದು ನಾನು ಆಫೀಸಿಗೆ ಹೋಗಬೇಕಾಗಿರಲಿಲ್ಲವಾದ್ದರಿಂದ, ಇಡೀ ದಿನ ಅವಳ ಬಳಿ ಕುಳಿತಿದ್ದೆ.

ಅವಳ ನಡಿಗೆ ಲಾವಣ್ಯವನ್ನು ಹೊರಸೂಸುತ್ತಿತ್ತು. ಅದು ಅನನುಕರಣೀಯವಾಗಿತ್ತು. ನಡಿಗೆಯಲ್ಲಿ ಅವಳ ತತ್ಕಾಲದ ಭಾವ ಎಷ್ಟೋ ವೇಳೆ ವ್ಯಕ್ತವಾಗುತ್ತಿತ್ತು. ಆಕೆಯ ದೇಹ ಧಾರ್ಢ್ಯ, ಸಹನಶಕ್ತಿಯ ಅರಿವು ಒಮ್ಮೊಮ್ಮೆ ನನಗಾಗುತ್ತಿತ್ತು. ಒಂದು ಸಲ ಹೆಲ್ಸಿಂಕಿಯ ಹೊರಗೆ, ಮಂಜಿನಲ್ಲಿ ಮೂರು ಮೈಲಿಗಳಷ್ಟು ದೂರ ಹಿಮದಲ್ಲಿ ನನ್ನೊಡನೆ ನಡೆದಳು. ನನಗೆ ಆಯಾಸವಾಗಿದ್ದರೂ ಅವಳಿಗೇನೂ ಆಗಿರಲಿಲ್ಲ.

ನಂತರದ ದಿನಗಳಲ್ಲಿ ನಾವು ಮಗುವಿಗಾಗಿ ಅನೇಕ ವಸ್ತುಗಳನ್ನು ಕೂಡಿಹಾಕುತ್ತಿದ್ದೆವು. ಆಕೆಗೇನಾದರೂ ಮಗು ದಕ್ಕದಿದ್ದರೆ ಬಹಳ ಅನ್ಯಾಯ ಎಂದುಕೊಂಡೆ. ಆಕೆಗಾಗಿ ಯಾವುದೇ ಅಡೆತಡೆಯ ವಿರುದ್ಧ ಹೋರಾಡಲು ನನ್ನಲ್ಲಿ ಶಕ್ತಿಯಿದೆ ಎಂದುಕೊಂಡೆ.

ಈಗವಳು ಸದಾ ಕಾರ್ಯತತ್ಪರಳಾಗಿರುತ್ತಿದ್ದಳು. ಆದರೂ ಮಗುವಿಗಾಗಿ ಬಹಳ ಎಚ್ಚರ ವಹಿಸುತ್ತಿದ್ದಳು. ಬಗ್ಗಿದರೆ ಮಗುವಿಗೆ ನೋವಾದೀತೋ ಎಂದು ಸೊಂಟ ಬಗ್ಗಿಸದೆ ಕುಳಿತು ಕೆಲಸ ಮಾಡುತ್ತಿದ್ದಳು. ಅವಳ ಶರೀರವೀಗ ಅಪಾಢವ್ಯವಾಗುತ್ತಿದ್ದರೂ ಅವಳ ಚಲನ ವಲನದ ಧೃತಿಯನ್ನು ನೋಡಿ ನನಗೆ ಸೋಜಿಗವಾಗುತ್ತಿತ್ತು. ಅವಳ ಮುಖದಲ್ಲಿ ಅನುಪಮವಾದ ಮಾಧುರ್ಯವಿರುತ್ತಿತ್ತು. ಹಿಂದೆ ಅವಳ ಪಾಲಿಗೆ ಏನೂ ಅರ್ಥವಿಲ್ಲದಿದ್ದ ಪದಾರ್ಥಗಳು ಈಗ ಮಹಾ ಅರ್ಥಪೂರ್ಣವಾಗಿದ್ದವು.

ನನ್ನ ಮಗುವಿನ ಬಗ್ಗೆ ಪುಸ್ತಕವನ್ನು ಏಕೆ ಬರೆಯಬಾರದು ಎಂದುಕೊಂಡೆ. ಆದರೆ ನನಗೆ ವಿರಾಮವೆಲ್ಲಿದೆ ಎಂದೂ ಪ್ರಶ್ನಿಸಿಕೊಂಡೆ. ಅದೂ ಅಲ್ಲದೆ, ನನ್ನ ಮಗುವಿನ ಬಗ್ಗೆ ಆಗಲೇ ಒಂದು ಪುಸ್ತಕವನ್ನು ಬರೆದಿದ್ದೇನಲ್ಲ. ಅದನ್ನು ಬರೆದಾಗ, ನನಗೆ ಮದುವೆಯಾಗಿರಲಿಲ್ಲ, ಮಕ್ಕಳಾಗಿರಲಿಲ್ಲ. ಆದರೂ ಅದು ಸತ್ಯಕಥೆಯಂತಿತ್ತು.

೮.

ಅವಳ ಬಾಯ ಸುತ್ತ ಕೆತ್ತಿದಂತಿದ್ದ ಕಟುತ್ವದ ರೇಖೆಗಳು ಮಾಯವಾಗಿದ್ದವು ಈಗಲೂ ಅವಳು ಕಾಲುಗಳನ್ನು ತುರಿಸಿಕೊಳ್ಳುತ್ತಿದ್ದಳು, ಆದರೂ ಮೃದುವಾಗಿ. ದೂ ಕೆಲ ದಿನಗಳಲ್ಲಿ ಮಾಯವಾಯಿತು. ಮಗುವಿನ ಚಲನವಲನದ ನಿರೀಕ್ಷೆಯಲ್ಲಿ ಅವಳ ನರಮಂಡಲಕ್ಕೆ ಹೊಸತೊಂದು ಸಮತೋಲನ ಬಂದಿತ್ತು.

"ಮಗು ನಡೆಯುವ ಹೊತ್ತಿಗೆ ನಾವು ಹಳ್ಳಿಗೆ ಹೋಗಬೇಕಾಗುತ್ತೆ" ಅವಳು ಹೇಳಿದಳು.

"ಏಕೆ ? ಇಲ್ಲಿ ಅನುಕೂಲವಿಲ್ಲವೇ ?"

"ಆದರೂ ಮಗು ಕೆಲವರ್ಷದ್ದಾದಾಗ ಅದು ಸ್ವಲ್ಪ ಕಾಲ ಹಳ್ಳಿಯಲ್ಲಿದ್ದರೇ ವಾಸಿ."

"ಅದೇನೋ ಸರಿ ಹನ್ನೊಂದು ತಿಂಗಳಿಗೆ ನಡೆಯಲಾರಂಭಿಸಬಹುದು. ಅದಕ್ಕಿಂತ ಮುಂಚೆ ನಮಗೆ ಹೋಗಲು ಸಾಧ್ಯವಿಲ್ಲ."

"ಅವನು ಭಲೋ ಹುಡುಗನಾಗುತ್ತಾನೆ."

"ಭಲಿ ಭಲೋ ಲುಚ್ಚನಾಗುತ್ತಾನೆ."

"ಹಾಗೆಲ್ಲ ಹೇಳಬಾರದು," ರಾಜಕುಮಾರಿ ನನ್ನನ್ನು ದುರುಗುಟ್ಟಿಕೊಂಡು ನೋಡಿದಳು. ಹಾಗೆಲ್ಲ ಕೆಟ್ಟ ಮಾತಾಡುವುದು ನನಗೆ ಸರಿ ಬೀಳುವುದಿಲ್ಲ. ಅದು ಅವನಿಗೆ ಒಳ್ಳೆಯದಲ್ಲ."

"ಆದರೆ ಇನ್ನೂ ಇದೆಲ್ಲ ಅವನ ಕಿವಿಗಾಗಲಿ, ಕಣ್ಣಿಗಾಗಲಿ ಬೀಳುವಂತಿಲ್ಲವಲ್ಲ."

"ಅವನಿಗೆ ಕೇಳಿಸುತ್ತೆ. ನನ್ನ ಹೊಟ್ಟೆಯ ಮುಖಾಂತರ ಕೇಳಿಸುತ್ತೆ."

"ಆತ ನೋಡುತ್ತಾನೆಯೆ ?"

"ಹೌದು, ನನ್ನ ಹೊಕ್ಕಳಿನಿಂದ ನೋಡುತ್ತಾನೆ. ತನ್ನ ತಂದೆ ತಾಯಿಗಳು ಒಳ್ಳೆಯವರೋ ಅಲ್ಲವೋ ಎಂದು ನೋಡುತ್ತಾನೆ."

ಅವಳು ಕ್ಷಣ ಕಾಲ ಸುಮ್ಮನಿದಳು. ಮತ್ತೊಮ್ಮೆ ಆಕೆಗೆ ಹೊಟ್ಟೆಯಲ್ಲಿ ಮಗು ಒದೆದ ಅನುಭವವಾಯಿತು. ಹಾಗೆಯೇ ಹಾಸಿಗೆಯ ಮೇಲೆ ಒರಗಿ ಆಕೆ ಅರೆಗಣ್ಣಾದಳು. ಅವಳೊಳಗೆ ಏನೋ ತುಂಬಿಕೊಂಡಿತ್ತು. ಏನೆಂದು ಅವಳಿಗೇ ಗೊತ್ತಾಗುತ್ತಿರಲಿಲ್ಲ.

ಅವಳ ಧ್ವನಿ, ಬಣ್ಣ ಒಮ್ಮೊಮ್ಮೆ ಹಳೇ ನೋವಿನ ಛಾಯೆಯನ್ನು ತೋರಿಸುತ್ತಿತ್ತು. ಆದರೆ ಅದು ಕ್ಷಣಿಕ ಕಾರ್ಮೋಡವಾಗಿರುತ್ತಿತ್ತಷ್ಟೇ. ಅವಳ ಆರೋಗ್ಯ ಬಲಗೊಳ್ಳುತ್ತಿತ್ತು. ಮುಖದಲ್ಲಿ ಸುಖಛಾಯೆ ಏರುತ್ತಿತ್ತು.

"ಈಗ ನಿನ್ನ ರಕ್ತದ ಮಡಿಗಟ್ಟುವ ಗತಿ

'ನಾನು ಹೊಸ ಲಕ್ಸ್ ಉಪಯೋಗಿಸಿ,
ಸುಖವೈಭವದ ಅನುಭವವನ್ನು ಪಡೆಯುವೆ'

ಎನ್ನುತ್ತಾಳೆ ಸಿನೆಮ ತಾರೆ
ಕಾಂಚನ




ಹೊಸ ಲಕ್ಸ್‌ನಲ್ಲಿ ಅಮೂಲ್ಯವಾದ
ಹೊಸ ಪರಿಮಳವಿದೆ.
ಹೊಸ ಅಂತರ್-ರಾಷ್ಟ್ರೀಯ
ರೂಪವಿದೆ. ನೀವೇ
ಉಪಯೋಗಿಸಿ ಕಂಡುಕೊಳ್ಳಿರಿ...

ಶ್ರೀಮಂತ ಸುಖವೈಭವದ ಏಕೈಕ ಸೋಪು- ಲಕ್ಸ್

ಲಿಂಟಾಸ್. LTS. 229-77 KN ಹಿಂದುಸ್ಥಾನ್ ಲೀವರ್ ಅವರ ಉತ್ಕೃಷ್ಟ ತಯಾರಿಕೆ

ಎಷ್ಟಿದೆ?" ಎಂದು ಒಂದು ದಿನ ಕೇಳಿದೆ.

"ತೊಂಭತ್ತರ ಮೇಲೆ."

"ಆದರೆ ಅದು ಇನ್ನೂ ಮೇಲಕ್ಕೆ ಹೋಗಿ ನಿನ್ನ ಮಗನ ಅವಶ್ಯಕತೆಗಳು ಜಾಸ್ತಿಯಾದರೆ?"

ನನ್ನ ಪ್ರಶ್ನೆಗೆ ನಾನೇ ಪಶ್ಚಾತ್ತಾಪಪಟ್ಟೆ. ಹಾಗೆ ಕೇಳಬಾರದಾಗಿತ್ತು, ಎಂದುಕೊಂಡೆ. ಆದರೆ ಮನುಷ್ಯ ಸಹಜ ಶಂಕೆಯಿಂದ ಹಾಗೆ ಕೇಳದಿರುವುದು ನನಗೆ ಸಾಧ್ಯವಿರಲಿಲ್ಲ

"ತನ್ನಷ್ಟಕ್ಕೆ ಅದೇ ಸರಿ ಹೋಗುತ್ತೆ," ಎಂದಳವಳು. ನನ್ನ ಚಿಂತೆಯು ಲೇಶವೂ ಅವಳಿಗಿರಲಿಲ್ಲ ಒಳಗಿದ್ದ ಮಗುವಿನಿಂದ ಅವಳಲ್ಲಿ ಮೂಡಿದ ಆಂತರಿಕ ಸಮತ್ವವನ್ನು ಹೊರಗಿನ ಪ್ರಭಾವ ಸುಲಭವಾಗಿ ವಿಪರ್ಯಸ್ತಗೊಳಿಸಲು ಅಸಮರ್ಥವಾಗಿತ್ತು.

ಒಂದು ದಿನ ನಾನು ಮಧ್ಯಾಹ್ನ ಮನೆಗೆ ಬಂದಾಗ ರಾಜಕುಮಾರಿ ತಂತಾನೆ ಮಾತನಾಡುತ್ತಿದ್ದಳು.

"ನಾನು ಅವನೊಂದಿಗೆ ಮಾತನಾಡುತ್ತಿದ್ದೇನೆ. ನೋಡಿ ನನಗೆ ಉತ್ತರ ಕೊಡುತ್ತಿದ್ದಾನೆ! ಹುಡುಗಿಯಾಗಿದ್ದರೆ ಬಲಗಡೆಗೆ, ಹುಡುಗನಾಗಿದ್ದರೆ ಎಡಗಡೆ ಒದೆಯೋ ಕಳ್ಳ!"

ಆಕೆಯ ಹೊಟ್ಟೆಯ ಮೇಲೆ ಕೈಯಿಟ್ಟು ಸುಮಾರಾಗಿ ಸೂಕ್ಷ್ಮ ಚಲನೆಯನ್ನು ಅನುಭವಿಸಿದೆ.

"ಅಯ್ಯೋ, ಅದು ನಿನ್ನ ನಾಡಿ," ಎಂದೆ.

"ಸ್ವಲ್ಪ ತಾಳ್ಮೆ ಬೇಕು," ಎಂದಳು.

ನನಗೆ ತಾಳ್ಮೆ ಇತ್ತು, ಕಾಲುಗಂಟೆಯಾದ ಮೇಲೆ ಎಡಭಾಗದಲ್ಲಿ ಚಲನೆಯ ಅರಿವಾಯಿತು.

"ತಾನು ಹುಡುಗ ಎನ್ನುತ್ತಿದ್ದಾನೆ!"

ನಾವು ನಕ್ಕೆವು. ಚೆಲ್ಲಾಟವಾಡಿದೆವು. ಅವನ ಬಗ್ಗೆ ನಮ್ಮ ಆಸಕ್ತಿ ಹೆಚ್ಚಾಗಿತ್ತು. ಎಷ್ಟೋ ಸಾರಿ, ಮಗುವನ್ನು ಹಳ್ಳಿಗೆ ಕರೆದೊಯ್ಯಬೇಕೆಂಬ ಆಸೆ ಮನದಲ್ಲಿ ಮೂಡುತ್ತಿತ್ತು ನನಗೆ. ಹಾಸಿಗೆಯ ಮೇಲೆ ಕಣ್ಮುಚ್ಚಿದ್ದಾಗ ಹಳ್ಳಿಗೆ, ಹೂವುಗಳ ಮಧ್ಯಕ್ಕೆ, ಜೇನುಗಳ ಮಧ್ಯೆ, ಸೂರ್ಯನ ಮಡಲಿಗೆ... ನನ್ನ ಕನಸಿನ ದೀಪಕ್ಕೆ

೬

ಒಂದು ಸಂಜೆ ಮನೆಗೆ ಬಂದಾಗ, ಆಕೆ ಗೋಡೆಗೆ ಒರಗಿಕೊಂಡು, ಮೌನವಾಗಿದ್ದಳು. ಬಹಳ ದೂರ ನಡೆದು ದಣಿವಾಗಿರಬೇಕೆಂದುಕೊಂಡೆ. ಅವಳು ನನ್ನ ಕಡೆ ತಿರುಗಿದಾಗ ಅವಳ ಕಣ್ಣಲ್ಲಿ ನಿರಾಶೆಯನ್ನು ಕಂಡೆ

ತನ್ನ ದೇಹದ ಹೊಸ ಕಡೆಗಳಲ್ಲಿ ಕ್ಯಾನ್ಸರ್ ಉಲ್ಬಣವಾಗಿದ್ದುದು ಆಕೆಗೆ ಗೊತ್ತಾಗಿತ್ತು. ಆಯಾಸದ ಜತೆಗೆ, ದೇಹದ ಅನೇಕ ಕಡೆಗಳಲ್ಲಿ ನೋವು ಆರಂಭವಾಗಿತ್ತು. ಆಕೆ ಬಿಳಿಚಿಕೊಂಡಿದ್ದಳು.

ಆಕೆ ತನಗಾಗಿ ಹೆದರಿರಲಿಲ್ಲ, ದಾದಿಯಾಗಿದ್ದುದರಿಂದ, ತನ್ನ ಕಾಹಿಲೆ ತೀವ್ರಗತಿಯಲ್ಲಿ ಮಗುವಿನ ಸಮೀಪ ಹರಿಯುತ್ತಿದೆಯೆಂದು ಅವಳಿಗೆ ಗೊತ್ತಾಗಿ. ದಾದಿಯಾಗಿದ್ದುದರಿಂದ ಎಕ್ಸ್‌ರೇ ಚಿಕಿತ್ಸೆ ತನಗೆ ಅಗತ್ಯವೆಂದೂ ಮನಗಂಡಿದ್ದಳು. ವೈದ್ಯರ ನಿರ್ಣಯವೇನೆಂದೂ ಅವಳು ಬಲ್ಲವಳಾಗಿದ್ದಳು. ಅವರು ಗರ್ಭ ಅಥವಾ ಗರ್ಭಕೋಶವನ್ನು ತೆಗೆಯಲು ಹೇಳಬಹುದಾಗಿತ್ತು.

ಮೂರು ವಾರಗಳ ಚಿಕಿತ್ಸೆ ಎಂದರೆ, ಮೂರು ಸಾವಿರದ ಐನೂರು ರೇಡಿಯೇಶನ್ ಯೂನಿಟುಗಳು. ಮಗುವಿನ ಪಕ್ಕದಲ್ಲಿ ಹಾಗೂ ಕೆಳಗೆ ಕ್ಯಾನ್ಸರಿನ ಬೆಳವಣಿಗೆ ಅತಿಯಾಗಿತ್ತು. ಅಲ್ಲಿಯೆ ಈ ಚಿಕಿತ್ಸೆ ಅಗತ್ಯವಿತ್ತು.

"ನಾನಂತೂ ವೈದ್ಯಕೀಯ ಪರೀಕ್ಷೆಗೆ ಹೋಗುವುದಿಲ್ಲ. ನನಗೆಲ್ಲ ಸರಿಯಾಗಿದೆ ಎಂದು ಪಟ್ಟುಹಿಡಿಯುತ್ತೇನೆ. ಅವರೇ ಇಲ್ಲಿಗೆ ಬಂದರೆ ನಾನು ಓಡಿಹೋಗುತ್ತೇನೆ."

ನಿರೀಕ್ಷೆ, ನಿರಾಶೆ, ನೋವು ತುಂಬಿದ ಸಂಜೆಗಳು: ದೀರ್ಘ ರಾತ್ರಿಯನ್ನು ತರುವ ಬೆಳಗಿನ ಊಹೆ : ನಾಳೆಗೆ ಇದು ಸುಧಾರಿಸೀತೆನ್ನಲಾರದಷ್ಟು ಗಹನವಾಗಿ ಬೇರುಬಿಟ್ಟ ಕೇಡು.

ನಾನು ಮಾಡಿದ್ದೇನು ಮೂರ್ಖತನವಿದು ಅನಿಸಿತು ಯೋಚಿಸಿದಷ್ಟು, ವಿಷಯ ಜಟಿಲವಾಗುತ್ತಿತ್ತು. ನೀನಾದರೂ ಏನನ್ನು ನಿರೀಕ್ಷಿಸಿದ್ದೆ? ಎಂದು ನನ್ನನ್ನೇ ಕೇಳಿಕೊಂಡೆ. ಇವಳು

ಹೊಸ ವ್ಯಕ್ತಿಯಾಗುವಳೆಂಬ ಏನೋ ಮುಸುಕು ಭಾವನೆ ಮಾತ್ರವಲ್ಲವೇ ನಿನಗಿದ್ದದ್ದು? ಒಬ್ಬ ಸ್ತ್ರೀ ಬಸುರಿಯಾದಾಗ, ಹಾರ್ಮೋನ್‌ಗಳು ಬದಲಾವಣೆಯನ್ನು ಹೊಂದುತ್ತಿರುತ್ತವೆ. ಇವುಗಳಿಂದಲೇ ಹೊಸ ಕೋಶಜಾಲಗಳು ಸೃಷ್ಟಿಯಾಗುತ್ತವೆ. ಕೃಶಕೋಶಗಳನ್ನು ಹಾರ್ಮೋನ್‌ಗಳು ಉಳಿಸಲು ಯತ್ನಿಸುತ್ತವೆ. ಹಾಗೆಂದಲ್ಲವೇ ನೀನೆಣಿಸಿದ್ದು? ನೀನು ವೈದ್ಯರನ್ನು ಕೇಳಲುಕೂಡ ಇಲ್ಲ. ಔಷಧಗಳ ಬಗ್ಗೆ ಏನು ಗೊತ್ತು ನಿನಗೆ? ಮೇಲೆ ಮನುಷ್ಯನ ಅಂಗಾಂಗಳ ಮೇಲೆ ಮನಸ್ಸಿನ ಪ್ರಭಾವದ ಬಗ್ಗೆ ಹರಟೆದಿ ಹೀಗೆ ಏನೇನೋ ಯೋಚನೆಗಳು ಮಿದುಳಿನಲ್ಲಿ ಬರತೊಡಗಿದವು.

ಮನಸ ತಿಳಿಯಾದ ನಂತರ, ನಾಳೆ ಡಾಕ್ಟರನ್ನು ಕಂಡುಬರಬೇಕೆಂದುಕೊಂಡೆ.

ಆಕೆ ಹೇಳಿದಳು.

"ಕೈಗಳು ಸಣ್ಣ ಸಣ್ಣ ಗುಪ್ಪೆಯಂತಾಗಿವೆ," ಅವಳು ತನ್ನ ಕ್ಯಾನ್ಸರ್ ಗಂಟುಗಳ ಬಗ್ಗೆ ಹೇಳುತ್ತಾಳೆಂದುಕೊಂಡು,

"ಯಾರವು?" ಎಂದು ಕೇಳಿದೆ.

"ಅವನದು. ಈಗ ಅವನು ಒದೆಯುವ ಹಾಗೆ ಕಾಣುವುದಿಲ್ಲ. ಅವನು ಬಡಿಯುತ್ತಿರುವ ಹಾಗೆ ಕಾಣುತ್ತದೆ," ಎಂದು ಮೆಲ್ಲಗೆ ನಕ್ಕು ನುಡಿದಳು ಪ್ರಾಯಶಃ ಎಂದು ಹೊರಬರಬೇಕೆಂದು ಯೋಚಿಸುತ್ತಿದ್ದಾನೇನೋ."

ಅವಳ ಬಳಿ ಹೋಗಿ, ಬಗ್ಗಿ, ಅವಳ ಕೆನ್ನೆಯ ಮೇಲೆ ನನ್ನ ಕಪೋಲವನ್ನಿಟ್ಟೆ. ಅದು ಒದ್ದೆಯಾಗಿತ್ತು. ಆಕೆ ಸದ್ದಿಲ್ಲದೆ ಅಳುತ್ತಿದ್ದಳು

ಆಕೆಯ ಹೊಟ್ಟೆಯ ಮೇಲೆ ಕಿವಿಯಿಟ್ಟು ಕೇಳಿದೆ. ನನಗೇನೂ ಕೇಳಿಸಲಿಲ್ಲ. ನನ್ನ ಹಾಸಿಗೆಯ ಕಡೆ ಹೋಗುತ್ತ ನುಡಿದೆ. "ಹೌದು, ಅವನು ಬಡಿಯುತ್ತಿರುವ ಹಾಗಿದೆ. ಪ್ರಾಯಶಃ ಎಂದು ಹೊರಗೆ ಬರುವುದೆಂದು ಯೋಚಿಸುತ್ತಿರಬಹುದು."

ರಾಜಕುಮಾರಿ ತನ್ನ ಮಗನೊಂದಿ ಏನೇನೋ ಹುಚ್ಚಾಬಟ್ಟೆ ಬಡಬಡಿಸುತ್ತಿದ್ದಳು. ಆದರೆ ಮರುದಿನ ಅವಳು ಮತ್ತೆ ಹೆಚ್ಚು ಸಶಕ್ತಳಾದದ್ದು ನೋಡಿ ನನಗೆ ಆಶ್ಚರ್ಯವಾಯಿತು.

ಮಾರನೆಯ ದಿನ ಕೆಲಸ ಮಾಡಿ ಸುಸ್ತಾಗಿ ಮನೆಗೆ ಹಿಂದಿರುಗಿದ ನನಗೆ ಬೇಗನೇ ನಿದ್ದೆ ಬರಲಿಲ್ಲ. ಇನ್ನೇನು ನಿದ್ದೆ ಬಂತು ಎಂದಾಗ, ಅವಳು ನನ್ನನ್ನು ಕರೆದಳು. ನನ್ನ ಬಳಿ ಬಂದು ನನ್ನನ್ನು ಅಲುಗಾಡಿಸಿದಳು.

"ಏನು ಸಮಾಚಾರ?"

"ಮಗುವಿಗೆ ಹೆಸರೇ ಇಟ್ಟಿಲ್ಲವಲ್ಲ."

"ಫ್ಯಾಂಟಮ್ ಎನ್ನೋಣವೇ"

"ಬೇಡ. ಸಿಲ್ವಾ ಚೆನ್ನಾಗಿರುತ್ತೆ. ಅಥವಾ ಕಾಜ್ ಮೈಕೇಲ್—ಗಂಡು ಮಗುವಾದರೆ."

"ಸರಿ," ನಾನೆಂದೆ. "ಇನ್ನಾದರೂ ನಿದ್ದೆ ಮಾಡು."

ನಿದ್ದೆ ಬಂದಂತಾಯಿತು. ಆದರೆ ನನ್ನ ಹೊಟ್ಟೆಯ ಮೇಲೆ ಅವಳ ಕರಗಳ ಸ್ಪರ್ಶ ವಾಯಿತು.

"ಆದರೆ, ಹೆಣ್ಣುಮಗುವಾದರೂ... ನಿನಗೆ ಅಷ್ಟೇ ಸಂತೋಷವಾಗುವುದಲ್ಲವೆ ?" ಎಂದಳು.

"ಖಂಡಿತವಾಗಿ."

"ಹುಡುಗನಂತೆ ಹುಡುಗಿಯನ್ನೂ ಬೆಳೆಸುತ್ತೀಯಾ ? ಗೊತ್ತಲ್ಲ ಹುಡುಗಿಯನ್ನು ಹೊಡೆಯಬಾರದು."

"ಅವರೂಪಕ್ಕೊಮ್ಮೆ, ಸನ್ನಿವೇಶಕ್ಕೆ ತಕ್ಕಂತೆ."

"ಸರಿ. ಸ್ವಲ್ಪ ಮಾತ್ರ."

"ಅವಳ ಕೂದಲನ್ನು ಸ್ವಲ್ಪ ಹಿಡಿದೆಳೆಯಬಹುದಲ್ಲ."

"ಛೇ ಛೇ. ಕೂದಲನ್ನು ಹಿಡಿದು ಎಳೆಯಲೇ ಕೂಡದು."

"ಏಕೆ ?"

"ಏಕೆಂದರೆ... ಚೆನ್ನಾಗಿದೆ... ನೋವಾಗುವುದಿಲ್ಲವೇ. ?"

ನಾವಿಬ್ಬರೂ ಮಲಗಿದೆವು. ಆಕೆ ಅಳುತ್ತಿರುವಂತೆ ಭಾಸವಾಯಿತು. ಆಳ ಕ್ಷ ಕಿರಣಗಳ ಚಿಕಿತ್ಸೆ ಮತ್ತು ಮಗುವನ್ನು ಶಸ್ತ್ರಚಿಕಿತ್ಸೆಯಿಂದ ಹೊರ ತೆಗೆಯುತ್ತಿರುವಂತೆ ಅವಳಿಗೆ ಕನಸು ಬಿದ್ದಿರಬೇಕು. ಹತ್ತಿರ ಬಂದ ಡಾಕ್ಟರರೊಡನೆ ಅವಳು ಹೋರಾಡುತ್ತಿದ್ದಳು. ಆ ಮೇಲೆ ಅವಳಿಗೆ ಕೈನೋವಾದಂತಾಗಿ, ಎಚ್ಚತ್ತಳು. ಅವಳ ಕೈ ಮೇಜಿಗೆ ಬಡಿದಿತ್ತು.

ಮಾರನೆಯ ದಿನ ನನಗಾಗಿ ಕಾಫಿ ಮಾಡಿ ಅವಳು ನನ್ನ ಹಾಸಿಗೆಯ ಬಳಿ ಬಂದಾಗ, ಅವಳ ಕೈ ಊದಿತ್ತು.

ಅಂದು ಭಾನುವಾರವಾದ್ದರಿಂದ ಹಾಸಿಗೆಯ ಮೇಲೆ ಉರುಳಿ ಹಗಲುಗನಸು ಕಾಣುತ್ತಿದ್ದೆ. ಎಲ್ಲವೂ ಸರಿಯಾಗಿ ನಾನು ಬಯಸಿದಂತೆ ಆಗುತ್ತಿದೆ ಎಂಬ ಭಾವನೆ ನನಗಾಗುತ್ತಿತ್ತು.

ಅದೊಂದು ವಿಚಿತ್ರ ಅನುಭವ. ಇದೇ ಏನು ನಾನು ಕಲ್ಪಿಸಬಹುದಾಗಿದ್ದ ಅತ್ಯುತ್ಕೃಷ್ಟ ಸ್ಥಿತಿ? ನನ್ನ ಬಾಳಿನ ಅನೇಕ ಸುಖಸನ್ನಿವೇಶಗಳನ್ನು ನೆನೆದುಕೊಂಡು ಇಂದಿನ ಸ್ಥಿತಿಯೊಡನೆ ಹೋಲಿಸಿಕೊಂಡೆ.

ನನ್ನ ಬಾಲ್ಯದ ನೆನಪಾಯಿತು. ನನ್ನ ಮೊದಲ ಪದ್ಯ ಪ್ರಕಟವಾದಾಗಿನ, ಸನ್ನಿವೇಶವನ್ನೂ ನೆನಪಿಸಿಕೊಂಡೆ....

ನಾನು ಕಂಡ ಪರಮ ಸುಂದರಿಯನ್ನು ಜ್ಞಾಪಿಸಿಕೊಂಡೆ. ಒಂದು ಬೇಸಿಗೆಯಲ್ಲಿ, ಟ್ಯಾಮ್ಮರ್ ಫಾರ್ಸ್‌ನಲ್ಲಿ ನೋಡಿದ ಸುಂದರ ಫಿನ್ನಿಷ್ ತರುಣಿಯು ನೆನಪಾಯಿತು. ಆಕೆ ದೇವತೆಯಂತೆ ಕಂಡಿದ್ದಳು. ಆಕೆ ದೈಹಿಯನ್ನು ಬಳುಕಿಸಿ ನಡೆಯುತ್ತಿದ್ದ ರೀತಿಯನ್ನು ವರ್ಣಿಸಲು ಶಬ್ದಗಳಿಲ್ಲ. ನನ್ನೆಡೆಗೆ ತಿರುಗಿ ಅವಳು ಮೋಹಕ ನಗೆ ಬೀರಿದಾಗ... ಇಲ್ಲ, ಯಾವ ನೆನಪೂ ನನ್ನ ಭಾವನೆಯನ್ನು ಬದಲಿಸಲಿಲ್ಲ.

ನನ್ನ ರಾಜಕುಮಾರಿಯಂತೆ ಇನ್ನೂ ಅನೇಕ ಸುಂದರ ತರುಣಿಯರಿದ್ದರು. ಆದರೆ ನನ್ನವಳನ್ನು ಕಾಪಾಡಲು ನಾನು ಕಲಿತಿದ್ದೆ. ನಾವು ಯಾರನ್ನು ಮೆಚ್ಚುತ್ತೇವೋ ಅವರೊಡನೆ ಇರಬೇಕು. ವೈವಾಹಿಕ ಸುಖ, ಒಂದು ಮರವಿದ್ದಂತೆ; ಅದು ಬೆಳೆಯುವ ಪದಾರ್ಥವಾಗಿರಬೇಕು. ಆರೈಕೆ ಮಾಡದಿದ್ದರೆ ಈ ಬೆಳೆಯ ತಕ್ಕ ಪದಾರ್ಥ ಬೆಳೆಯುವುದೂ ಇಲ್ಲ. ಸಿಕ್ಕಸಿಕ್ಕಲ್ಲಿ ಬೀಜ ಬಿತ್ತುವ ಬದಲು ಒಂದೇ ಒಂದು ಬೀಜದ ಮೇಲೆ ಪ್ರೀತಿ ಇಟ್ಟು, ತಾಳ್ಮೆಯಿಂದ ಕಾಪಾಡಿದರೆ ಆತ ಮರ ಬೆಳೆಯುವುದನ್ನು ನೋಡುತ್ತಾನೆ. ಒಂದಲ್ಲ ಒಂದು ದಿನ ಮರಕ್ಕೆ ಆತುಕೊಂಡು, ಅದರ ನೆರಳಿನ ತಂಪನ್ನು ಪಡೆಯುತ್ತಾನೆ ...

ಅವಳಿಗಾಗಿ, ನಮ್ಮ ಮಗುವಿಗಾಗಿ, ಒಂದು ದ್ವೀಪವನ್ನು ಕೊಂಡುಕೊಳ್ಳುತ್ತೇನೆ. ರಜಾ ಕಾಲದಲ್ಲಿ ನಾವು ಅಲ್ಲಿರಬಹುದು. ಅವಳೇನೂ ಕೆಲಸ ಮಾಡಬೇಕಾಗಿಲ್ಲ. ಬೇಕಾದರೆ ಮನೆಯಲ್ಲಿ ಮಗುವಿನೊಂದಿಗೆ ಇರಬಹುದು. ನಾನೇ ಎಲ್ಲ ಕೆಲಸವನ್ನೂ ಮಾಡುತ್ತೇನೆ. ಕಾರಣ ಅವಳು ನನ್ನ ಪತ್ನಿ. ನನ್ನ ವಂಶೋದ್ಧಾರಕನ ಜನನಿ. ಒಂದು ಸಣ್ಣ ದ್ವೀಪ ಸಾಕು— ಕೆಲವು ಮರಗಳು, ಬಂಡೆಗಳು, ಒಂದು ಮನೆ, ಒಂದು ಮರಳಿನ ಬೀಚ್...

ಆಕೆ ನೇತ್ರಗಳನ್ನು ಅರ್ಧ ತೆರೆದು ಮಲಗಿದ್ದಳು. ನಿದ್ದೆಗಾಗಿ ವ್ಯರ್ಥ ಕಾಯುತ್ತಿದ್ದಳು.

ಎಂಥಾ ಪೀಡೆಯನ್ನೂ ಸಹಿಸಬಹುದು, ಅನಿದ್ರೆಯನ್ನು ಸಹಿಸಲಸದಳ. ಈ ನಿದ್ದೆಗೇಡಿನ ರಾತ್ರಿಗಳಲ್ಲೇ ಆತ್ಮಹತ್ಯೆಯ ಯೋಚನೆ ಬರುವುದು. ಆದರೆ ಈಗ ಹೊಟ್ಟೆಯಲ್ಲಿ ಮಗುವಿದೆ. ಆತ್ಮಹತ್ಯೆಯ ವಿಚಾರ ಬರುವುದಿಲ್ಲ. ಗರ್ಭಧರಿಸಿದ್ದರಿಂದ ನಿದ್ದೆಯ ಅವಧಿ ಹೆಚ್ಚಲಿಲ್ಲ. ಆದರೆ ಬದುಕುವ ಇಚ್ಛೆ ಬಲಿತಿತ್ತಷ್ಟೇ.

ಒಂದು ರಾತ್ರಿ, ಉದರದಲ್ಲಿ ಮಗನ ಒದೆತ ಮತ್ತೆ ಮೊದಲಾಯಿತು. ಮತ್ತು ಕಾಹಿಲೆಯ ಉರಿ, ನವೆಯೂ ಸಹಿಸಲಸಾಧ್ಯವಾಯಿತು. ನಾನು ಆಕೆಯ ಬಳಿ ಹೋಗಿ ಮಗನ ಹೃದಯದ ಬಡಿತ ಕೇಳಲು ಯತ್ನಿಸಿದೆ.

"ನೋಡು, ಅವನ ಒದೆತದಿಂದ, ನನ್ನ ಹೊಟ್ಟೆಯೆಲ್ಲ ಹುಣ್ಣಾಗಿದೆ," ಆಕೆ ಹೇಳಿದಳು.

"ಅವನ ಕೈಗಳೇ ಇರಬೇಕು. ಎಷ್ಟಿರಬಹುದು ಅವನಿಗೆ?"

"ಎರಡು ಸಾವಿರ, ಸುಮಾರಾಗಿ."

"ಬೇಗ ಹೊರಬರುತ್ತಾನೆಂದು ತೋರುತ್ತೆ."

"ನಾಳೆಯೇ ಬಂದರೂ ಬರಬಹುದು."

ಆಕೆಗೆ ಹಾಗೆಯೇ ನಿದ್ದೆ ಬಂತು. ಒಂದು ತಾಸು ಮಾತ್ರ.

ಮಾರನೆಯ ದಿನ ನನಗೆ ಇದೆಲ್ಲ ಮಹಾ ಹುಚ್ಚಾಟವೆಂದು ಭಾಸವಾಯಿತು... ಕ್ಯಾನ್ಸರಿನ ವಿರುದ್ಧ ಇದೊಂದು ಪ್ರೇಮಯುದ್ಧ ಎಂಬ ನನ್ನ ಯೋಚನೆ ಬರೇ ಬಿಸಿಯೇರಿದ ತಲೆಯ ಭ್ರಾಂತಿ-ವಿಲಾಸವೆನಿಸಿತು.

ಆದರೆ ಇದು ಕೆಲವೇ ಕಾಲ. ರೋಗದ ನಡೆ ಸ್ಪಷ್ಟವಾಗಿ ತಿಳಿದು ನಾನು ಹಿರಿಯ ವೈದ್ಯರೊಬ್ಬರನ್ನು ಕಂಡಮೇಲೆ ಎಲ್ಲವೂ ಹೆಚ್ಚು ಯುಕ್ತಿಯುಕ್ತವಾಗಿ ಕಾಣತೊಡಗಿತು. ಅವಳಲ್ಲಾದ ಬದಲಾವಣೆ ಅಶಾಶ್ವತವೇ ಆಗಿರಲೊಲ್ಲದೇಕೆ, ಆ ಬದಲಾವಣೆ ಅವಳಲ್ಲಿ ಕೇವಲ ಪ್ರೇಮದ ಅಸ್ತಿಭಾರದ ಮೇಲೆ ನಿಂತಿತ್ತು. ಆ ಪ್ರೇಮ ಮಹತ್ತಾದದ್ದು, ಬಲವಾದದ್ದೆಂದು ಜಗತ್ತಿಗೇ ಗೊತ್ತು.

## ೧೦

ಮಗುವಿನ ಆಗಮನ ಯಾವ ಕ್ಷಣದಲ್ಲಿಯೂ ಆಗಬಹುದಾಗಿದ್ದರೂ ಆ ಭಾನುವಾರ ಎರಡು ಗಂಟೆ ಕಾಲ ಊರು ಸುತ್ತಿದೆವು.

ಯಾರಾದರೂ ಗಾಡಿಯಲ್ಲಿ ಮಗುವನ್ನು ದೂಡುತ್ತ ಹೋಗುವುದನ್ನು ಕಂಡಾಗೆಲ್ಲ ಅವಳು ತನ್ನ ಮಗುವಿನ ವಿಚಾರದಲ್ಲಿ ಮಗ್ನಳಾಗುತ್ತಿದ್ದಳು. ಅವಳು ನನ್ನನ್ನು ತಿವಿದು ಕೈ ಹಿಡಿದುಕೋ ಎಂದಳು. ಹಿಡಿದುಕೊಂಡೆ. ಬೆಚ್ಚಗಿತ್ತು. ನನ್ನ ಆಶ್ಚರ್ಯವನ್ನು ವ್ಯಕ್ತಪಡಿಸಿದಾಗ ಆಕೆ ಬರೇ ನಕ್ಕಳು.

ನನ್ನ ರಾಜಕುಮಾರಿಗೆ, ಗುರುವಾರ ರಾತ್ರಿಯಿಂದ ನೋವು ಆರಂಭವಾಯಿತು. ನನಗೆ ನಿದ್ದೆ ಬರಲೆಂದು, ಪಕ್ಕದ ಕೋಣೆಗೆ ಹೋಗಿ ನರಳುತ್ತಿದ್ದಳು.

ಐದೂವರೆಯ ಸುಮಾರಿನಲ್ಲಿ 'ಇನ್ನು ಹೋಗೋಣ' ಎಂದಳು. ನಾನು ತಕ್ಷಣ ಫೋನ್ ಮಾಡಿದೆ. ಕಾರು ಬಂತು. ನೋವು ಹೆಚ್ಚಿತು. ಕಾರಿಂದಿಳಿದ ಮೇಲೆ ನನ್ನ ಮೇಲೆ ಒರಗಿ ನಿಧಾನವಾಗಿ ಆಸ್ಪತ್ರೆಯೊಳಗೆ ನಡೆದಳು. ಮರಣ ದಂಡನೆಗೆ ಗುರಿಯಾಗಿದ್ದಾಕೆಗೆ ಈಗ ಮಗುವಾಗಲಿತ್ತು. ನಮ್ಮ ಹೋರಾಟ ಬರೇ ಹುಚ್ಚಾಟವಾಗಿರಲಿಲ್ಲ—ಎಂದುಕೊಂಡೆ.

ಬಹಳ ಹೊತ್ತು ಕಾಯಬೇಕಾಯಿತು. ಸಮಯ ಕಳೆದಂತೆ ವೈದ್ಯರುಗಳ ಸಂಖ್ಯೆಯೂ ಹೆಚ್ಚಾಯಿತು. ಹೆರಿಗೆ ಕಷ್ಟಕರವಾಗಿತ್ತು. ಗರ್ಭಾವರಣ ಕಿತ್ತು ಬಂದಿತ್ತು. ತಾಯಿ ಮಗು ಇಬ್ಬರಿಗೂ ಗಂಡಾಂತರವಿತ್ತು. ನಾನಲ್ಲಿರಬೇಕೆಂದರೂ ಅವರು ನನ್ನನ್ನು ಇರಗೊಡಲಿಲ್ಲ.

ಅಪರಾಹ್ನ ಮಗುವಿನ ತಲೆ ಕಡೆಗೊಮ್ಮೆ ಹೊರಬಂತು. ಅರ್ಧ ಪ್ರಜ್ಞಾವಸ್ಥೆಯಲ್ಲಿದ್ದ ರಾಜಕುಮಾರಿಗೆ ಅದು ಗಂಡು ಮಗು ಎಂದು ತಿಳಿಸಲಾಯಿತು. ನಾನಲ್ಲಿ ಹೋದಾಗ ರಾಜ-ಕುಮಾರಿಯನ್ನು ನೋಡಲು ನನ್ನನ್ನು ಬಿಡಲಿಲ್ಲ. ಮಗು ಮಾತ್ರ ಗಾಜಿನ ಆವರಣದಲ್ಲಿ ಇನ್‌ಕುಬೇಟರ್‌ನಲ್ಲಿ ಇತ್ತು. ತೋರಿಸಿದರು. ನಿಸ್ಸ-ಹಾಯ ಮುದ್ದೆಯ ಹಾಗೆ ಕಂಡಿತು. ಗಟ್ಟಿ-ಮುಟ್ಟು ಹುಡುಗನಾಗುತ್ತಿ, ಬೆಳೆಯುತ್ತಿ ಎಂದು ಹುಚ್ಚನ ಹಾಗೆ ಅಂದುಕೊಂಡೆ.

# ಗಂಡಸರೇ!

# ಬರೇ 5 ಪೈಸೆಯಲ್ಲಿ ನಿಮಗೆ ಜನನ ನಿಯಂತ್ರಣ ಶಕ್ತಿ.




ಸಂತಾನ ನಿರೋಧ ಶಕ್ತಿ ಈಗ ನಿಮ್ಮ ಕೈಯಲ್ಲಿದೆ.

**ನಿರೋಧ್**



**3ಕ್ಕೆ 15 ಪೈಸೆ .1ಕ್ಕೆ 5 ಪೈಸೆ**

ಸರ್ಕಾರದ ಸಹಾಯಧನದಿಂದಾಗಿ ಕಡಿಮೆ ಬೆಲೆ

ಸದ್ಯ ಕೆಲವು ಜಿಲ್ಲೆಗಳಲ್ಲಿ ಮಾತ್ರ ದೊರೆಯುತ್ತದೆ

ಮುಂದಿನ 28 ವರ್ಷಗಳಲ್ಲಿ ನಮ್ಮ ದೇಶದ ಜನ ಸಂಖ್ಯೆ ಇಮ್ಮಡಿಯಾಗುತ್ತದೆ. ಆದರೆ ಜೊತೆಗೆ ನಮ್ಮ ಸಂಪನ್ಮೂಲಗಳು ಅದಕ್ಕೆ ಸರಿಯಾಗಿ ಹೆಚ್ಚಾಗುವುದಿಲ್ಲ
ಅಂದ ಮೇಲೆ ಪ್ರತಿಯೊಬ್ಬನಿಗೂ ಕಡಿಮೆ ಸೌಕರ್ಯಗಳು, ಕಡಿಮೆ ಜಾಗ, ಕಡಿಮೆ ಶಿಕ್ಷಣ, ಕಡಿಮೆ ಬಟ್ಟೆಬರೆ, ಕಡಿಮೆ ಆಹಾರ
ಈ ಗಂಡಾಂತರವನ್ನು ತಪ್ಪಿಸಲು ಒಂದೇ [illegible] ಕುಟುಂಬ ಯೋಜನೆ ಮಾಡಬೇಕು. ಇದು [illegible] ಮಾಡಬೇಕಾದ ಕೆಲಸ.
ಈಗಲೇ ಆರಂಭಿಸಿ.

"ರಾಜಕುಮಾರಿಗೆ ನಿನ್ನನ್ನು ಎತ್ತಿಕೊಳ್ಳಲು ಬಿಡದಿದ್ದರೆ ಈ ಆಸ್ಪತ್ರೆಯನ್ನೇ ಪುಡಿ ಪುಡಿ ಮಾಡಿಬಿಡುತ್ತೇನೆ" ಎಂದು ಗೊಣಗುಟ್ಟಿದೆ.

ಆಹಾ! ನಾನೆಷ್ಟು ಸುಖಿಯಾಗಿದ್ದೆ! ಹಾಗೇ ಊರೆಲ್ಲ ಓಡಾಡಿದೆ!

ಮತ್ತೆ ನಾನು ಆಸ್ಪತ್ರೆಗೆ ಹೋದಾಗ, ಅಭ್ಯಾಗತರ ವೇಳೆ ಮುಗಿದಿದ್ದುದರಿಂದ, ಆಗಲೂ ನನಗೆ ಒಳಕ್ಕೆ ಹೋಗಗೊಡಲಿಲ್ಲ. ಮತ್ತೆ ಮನೆಗೆ ಬಂದೆ. ಯಾವುದಾದರೂ ರೆಸ್ಟುರಾಗೆ ಹೋಗಿ, ಚೆನ್ನಾಗಿ ತಿಂದು, ಕುಡಿದು, ರಾಜಕುಮಾರಿಗೆ ಗಂಡುಮಗುವಾದ್ದರಿಂದ, ನಾನು ತಂದೆಯಾದೆ ಎಂದು ಪ್ರಪಂಚಕ್ಕೆ ತಿಳಿಸಬೇಕೆಂದುಕೊಂಡೆ. ಆದರೆ ಸ್ವಲ್ಪ ತಡೆಯಬೇಕೆಂದುಕೊಂಡೆ. ಅಲ್ಲಿಗೆ ಹೋದರೂ ನಾನೊಬ್ಬನೇ ಒಂಟಿಯಾಗಿ ಹೋಗಬೇಕಲ್ಲವೇ.

ನನ್ನ ಮಗನ ತಂದೆ, ನಾನು.

ಅವನಿಗೆ ಅವಳ ಕಥೆಯನ್ನೆಲ್ಲ ಹೇಳಬೇಕೆಂದುಕೊಂಡೆ. ದೀಪವನ್ನು ಹಾಕಿ, ಅವನ ಬಟ್ಟೆಗಳನ್ನೆಲ್ಲ ಹೊರತೆಗೆದು, ಅದರಲ್ಲಿ ನನ್ನ ಮುಖ ಮುಚ್ಚಿಕೊಂಡೆ.

ಮಾರನೆಯ ದಿನ ಅವಳನ್ನು ನೋಡಲು ನನಗೆ ಅವಕಾಶ ಕೊಟ್ಟರು. ಇಬ್ಬರೂ ಸೇರಿಯೆ ಮಗುವನ್ನಿಟ್ಟ ಕೋಣೆಗೆ ಹೋದೆವು. ಅವಳು ನನ್ನ ಕೈಯನ್ನು ಬಿಗಿಯಾಗಿ ಹಿಡಿದಳು.

"ಹೆರಿಗೆಗೆ ಹೆದರುವ ಸ್ತ್ರೀಯರನ್ನು ಕಂಡರೆ, ನನಗೆ ಅಯ್ಯೋ ಎನಿಸುತ್ತದೆ. ಹೆದರಿಕೆ ಉದರದ ಮಾಂಸಖಂಡಗಳ ನರಗಳಲ್ಲೆಲ್ಲ ಹರಿದು, ಸಂತೋಷವನ್ನೆಲ್ಲವನ್ನೂ ಹಾಳುಮಾಡುತ್ತದೆ. ಕೆಲವರಿಗೆ ಮೂರ್ಛೆ ಬರಿಸುವ ಔಷಧವನ್ನೂ ಕೊಡಬೇಕಾಗುತ್ತದೆ. ಅದಿಲ್ಲದೇ ಮಗು ಬಂದರೆ, ಆ ನೋವಿನ ಸುಖವೇ ಸುಖ. ನಿತ್ಯ ಬೇಕಾದರೆ ಈ ನೋವು ಅನುಭವಿಸಬಲ್ಲೆ" ಎಂದಳು.

ಹಾಗೆಯೇ ಹಾಸಿಗೆಯ ಮೇಲೆ ಒರಗಿಕೊಂಡಳು. ಹಿಂತಿರುಗುತ್ತ ಒಬ್ಬ ವೈದ್ಯರನ್ನು ಕಂಡೆ.

"ನನಗೆ ಅರ್ಥವಾಗುವುದೇ ಇಲ್ಲ. ಆಕೆಯ ಪೂರ್ವ ಚರಿತ್ರೆಯಲ್ಲಿ ಶ್ವಾಸಕೋಶಗಳಲ್ಲಿಯೂ ಕ್ಯಾನ್ಸರ್ ಇದೆಯೆಂದು ಬರೆದಿದೆ," ಎಂದರು.

"ಅವುಗಳಿಗೇನಾಯಿತು?" ನಾನು ಆಶ್ಚರ್ಯದಿಂದ ಕೇಳಿದೆ.

"ಕ್ಷ ಕಿರಣ ಚಿತ್ರದಲ್ಲಿ ಏನೂ ಇಲ್ಲ. ನಾನು ಅಂಥಾ ನಿರ್ಮಲವಾದ ಶ್ವಾಸಕೋಶಗಳನ್ನು ಇನ್ನೆಲ್ಲೂ ನೋಡಿಲ್ಲ."

ಆಕೆಯ ಬಾಯಿಯ ಮೂಲೆಗಳಲ್ಲಿದ್ದ ಕಟುತ್ವದ ರೇಖೆ ಮಾಯವಾದ್ದನ್ನು ಹೇಳಬಹುದಾಗಿತ್ತು ನಾನು. ಪ್ರೇಮ, ಆಲಿಂಗನ ಪ್ರತಿರೋಗಕ್ಕೂ ಭೇಷಜ ಎಂದು ಅವರಿಗೆ ಹೇಳಬೇಕು ಎನಿಸಿತು. ಆದರೆ ಅದು ಮೂರ್ಖತನ ಎಂದು ಸುಮ್ಮನಾದೆ.

ಬರ್ಗಾರ್‌ನ ಮನೆಯಲ್ಲಿ ರಿಪೇರಿ ಕೆಲಸವಿದ್ದುದರಿಂದ, ಟ್ರಾನ್ಸ್ಕಾಂಡದ ಮನೆಗೆ ಬದಲಾಯಿಸಿದೆವು. ಅಲ್ಲಿಗೇ ರಾಜಕುಮಾರಿ ಮತ್ತು ಕುವರ ಬಂದರು.

ಮನೆಯ ಸುತ್ತಮುತ್ತಲಿನ ಪರಿಸರವೆಲ್ಲ ಪ್ರಕೃತಿಯ ಸೌಂದರ್ಯದಿಂದ ಮೆರೆಯುತ್ತಿದ್ದರೂ ರಾಜಕುಮಾರಿಗೆ ಮಗನನ್ನು ಬಿಟ್ಟು ಬೇರೇನೂ ಬೇಕಾಗಿರಲಿಲ್ಲ.

ಮೊದಲೆರಡು ದಿನ ಆಕೆ ನಿದ್ದೆಯನ್ನೇ ಮಾಡಲಿಲ್ಲ. ಅವಳ ಹಳೆಯ ನೋವು ಯಾವುದೂ ಕಾಣಿಸಲಿಲ್ಲ. ಆಕೆಯ ಕಾಹಿಲೆಯಾಗಲೀ ಮಗುವಿನ ಅಳುವಾಗಲೀ ಆಕೆಗೆ ತೊಂದರೆ ಕೊಡಲಿಲ್ಲ. ಆಕೆ ನಿದ್ದೆಮಾಡದೆ ಸಂತೋಷದಿಂದ ಮಗುವನ್ನೇ ಕಾಯುತ್ತಿದ್ದಳು

ಮೂರನೆಯ ರಾತ್ರಿ ಮಾತ್ರ ಸ್ವಲ್ಪ ನಿದ್ದೆ ಮಾಡಿದಳು. ಆದರೂ ಆಗಾಗ್ಗೆ ಎದ್ದು ಮಗನನ್ನೇ ದಿಟ್ಟಿಸುತ್ತಿದ್ದಳು.

ನನಗೂ ನಿದ್ದೆ ಇಲ್ಲದಂತೆ ಮಾಡಿದಳು. ಆಗಾಗ್ಗೆ ನನ್ನನ್ನು ಮಾತಿಗೆ ಎಳೆಯುತ್ತಿದ್ದಳು. ನಮ್ಮ ಮಾತೆಲ್ಲ ಮಗುವಿನ ಬಗ್ಗೆ.

ಆಕೆಯನ್ನು ನಾನು ಮೊದಲು ಕಂಡಾಗ ಅವಳ ಪ್ರಪಂಚವೇ ಶೂನ್ಯವಾಗಿತ್ತು, ನಿರ್ಜೀವವಾಗಿತ್ತು. ಈಗ ರಾಜಕುಮಾರಿಯ ಮೇಲೆ ಪ್ರಪಂಚ ಹೂಮಳೆಗರೆಯುತ್ತಿತ್ತು. ಜಗತ್ತು ಫಲಪುಷ್ಪಭರಿತವಾಗಿತ್ತು.

ಈಚೀಚೆಗೆ ನನ್ನ-ಅವಳ ಕಣ್ಣುಗಳು ಸೇರು

ವುದೇ ಕಡಿಮೆಯಾಗತೊಡಗಿತ್ತು. ನನಗೆ ಕೆಲಸದ ಒತ್ತಡ. ಬಿಡುವಿದ್ದಾಗಲೂ ಅವಳಿಗೆ ಮಗನದೇ ಚಿಂತೆ. ಆದರೆ ನಮ್ಮ ಕಣ್ಣುಗಳು ಸಂಧಿಸಿದಾಗೆಲ್ಲ ಇನ್ನೂ ಸಂಧಿಸಬೇಕೆನಿಸು ತ್ತಿತ್ತು. ಅವಳ ನೋಟ ಪೂರ್ಣ ಪ್ರಬುದ್ಧನಾರಿ-ಯದಾಗಿತ್ತು: ಸ್ತ್ರೀತ್ವ ಪೂರ್ಣ, ಬಲಿಷ್ಠ, ಆದರೆ ತರಳ.

ಕೆಲವು ದಿನಗಳಾದ ಮೇಲೆ ಪತ್ರಿಕೆಗಳ ಮೇಲೆ ಆಕೆಯ ದೃಷ್ಟಿ ಬಿತ್ತು. ಕೆಲವು ಪತ್ರಿಕೆ ಗಳು ನನ್ನ ಮಗನ ಜನನದ ಬಗ್ಗೆ ಬರೆದಿದ್ದವು.

"ಈ ಪತ್ರಿಕೆಗಳು ವಿಚಿತ್ರ ವಾಗಿವೆ. ನನ್ನ ರಕ್ತ ಹರಿಸಿದೆ. ಸತ್ತೇ ಹೋದೆ ಅನ್ನುವಷ್ಟು ಕಷ್ಟಪಟ್ಟೆ. ಈಗ ಪತ್ರಿಕೆಗಳಲ್ಲಿ ನಾನು ಓದುವುದು ನಿನಗೆ ಗಂಡುಮಗುವಾಗಿದೆಯೆಂದು ! ನೋಡು" ರೋಷದಿಂದ ನನ್ನೆಡೆಗೆ ಪತ್ರಿಕೆಯೊಂದನ್ನು ಹಿಡಿದಳು.

ನಾನು ಓದಿದೆ. ಅದರಲ್ಲಿ ಬರೆದಿತ್ತು: "ಗುನ್ನಾರ ಮ್ಯಾಟ್‌ಸನ್‌ರವರಿಗೆ ಗಂಡು ಮಗು."

"ನಾನು ಹೇಳಿದ್ದಂತೂ ನಿನಗೆ ಮಗುವಾಯಿ ತೆಂದು ಆದರೆ ನನ್ನ ಬಾಯಿಯಲ್ಲಿ ಪೈಪ್ ಇದ್ದುದರಿಂದ ಸ್ಪಷ್ಟವಾಗಿ ಹೇಳಿರಲಾರೆ."

ಆಕೆ ಕುಲು ಕುಲು ನಕ್ಕಳು.

"ನಾನೀಗ ಮೊಲೆ ಕೊಡಬೇಕು ಅವನಿಗೆ. ಸಾಮಾನ್ಯವಾಗಿ ಮೊದಲ ಕೆಲವು ವಾರಗಳು ಮಾತ್ರ ಎಲ್ಲರೂ ಎದೆಹಾಲನ್ನು ಕೊಡುತ್ತಾರೆ, ಆ ಮೇಲೆ ಡಬ್ಬದ ಹಾಲು, ವಿಚಿತ್ರ ಜನ ಅಲ್ಲವೆ?"

"ಸರಿ. ನೀನೆಷ್ಟು ದಿವಸ ನಿನ್ನ ಮಗನಿಗೆ...?"

"ಕನಿಷ್ಠ ಪಕ್ಷ ಆರುತಿಂಗಳು. ಏನು ಅದ್ಭುತ ಸುಖ ಆಗುತ್ತೆ ಅಂತೀ ಮೊಲೆ ಕೊಡುವಾಗ! ಆರು ತಿಂಗಳ ಮೇಲೆ ಕುಡಿಸಬಾರದಂತೆ, ಡಾಕ್ಟರು ಹೇಳಿದ್ದಾರೆ."

ಆಕೆ ಮಗನಿಗೆ ಮೊಲೆ ಕುಡಿಸಲು ಆರಂಭಿಸಿ ದಳು. ಅವನಿಗೆ ತೃಪ್ತಿಯಾದ ಮೇಲೆ, ಅವನನ್ನು ತೊಟ್ಟಿಲದಲ್ಲಿ ಮಲಗಿಸಿದೆ.

ಕಚೇರಿಯಲ್ಲಿ ಕೆಲಸ ಮುಗಿದ ಕ್ಷಣ ಮನೆಗೆ ಧಾವಿಸಿ ಬರುತ್ತಿದ್ದೆ. ಮನೆಮುಟ್ಟಿ ನನ್ನ ರಾಜ ಕುಮಾರಿಯ ಹಾಗು ಮಗುವಿನ ಮುಖ ನೋಡಿ ಎಲ್ಲವೂ ಸರಿಯಾಗಿರುವುದೆಂದು ದೃಢವಾ-ದೊಡನೆ ಹಿತವಾದ ಭಾವನೆಯಾಗುತ್ತಿತ್ತು.

ಈ ಸಂತೋಷದ ಮಧ್ಯೆ ಒಮ್ಮೊಮ್ಮೆ ಅವಳ ಕಾಹಿಲೆಯ ನೆನಪಾಗುತ್ತಿತ್ತು. ಅದಕ್ಕೆ ಅವಳೇ ನನಗೆ ಸಾಂತ್ವನ ನೀಡುತ್ತಿದ್ದಳು.

## ೧೧

ನನ್ನ ಅನೇಕ ಪತ್ರಿಕೋದ್ಯಮಿ ಮಿತ್ರರು ರಾಜಕುಮಾರಿ, ಕುವರ ಮತ್ತು ನನ್ನನ್ನು ಭೇಟಿ ಮಾಡಲು ಇಚ್ಛಿಸಿದರು.

ಆದರೆ ನಾನು ಒಪ್ಪಲಿಲ್ಲ. ನನ್ನ ಹಿಂದಿನ ಸಾರ್ವಜನಿಕ ಸಂಪರ್ಕದ ಕೆಲಸದಿಂದ ಅನೇಕ ಪಾಠಗಳನ್ನು ಕಲಿತಿದ್ದೆ. ನನ್ನ ಮಗ ಮತ್ತು ರಾಜಕುಮಾರಿಯನ್ನು ಸಾರ್ವಜನಿಕರ ಬಾಯಿ ಯಲ್ಲಿ ಹಾಕಲು ಇಷ್ಟಪಡಲಿಲ್ಲ.

ಆದರೆ ರೇಡಿಯೋದ ಪರವಾಗಿ ಮೂರು ಮಕ್ಕಳ ತಾಯಿಯೊಬ್ಬಳಿಗೆ ರಾಜಕುಮಾರಿಯ ಸಂದರ್ಶನ ತೆಗೆದುಕೊಳ್ಳಲು ಕೊಟ್ಟೆವು.

ಸಂದರ್ಶಕಳನ್ನು ಸಂಜೆ ಊರಿಗೆ ಕರೆದು ಕೊಂಡು ಮರಳುತ್ತಿದ್ದಾಗ ಆಕೆ ಹೇಳಿದಳು. "ನಾನು ಸಾವಿರಾರು ಮಕ್ಕಳನ್ನು, ತಾಯಂದಿ ರನ್ನು ನೋಡಿದ್ದೇನೆ. ಆದರೆ ಯಾರೂ ನಿಮ್ಮಾ ಕೆಯ ಹಾಗೆ ಮಗುವನ್ನು ಅಷ್ಟು ಕೋಮಲ ವಾಗಿ, ಪ್ರೀತ್ಯಾದರಗಳಿಂದ ಎತ್ತಿ ಆಡಿಸುವು ದನ್ನು ಕಂಡಿಲ್ಲ. ಅವಳು ಅತ್ಯದ್ಭುತ ವ್ಯಕ್ತಿ."

ಹಳ್ಳಿಯಿಂದ ರಾಜಕುಮಾರಿ ಮೊದಲ ಬಾರಿಗೆ ಮನೆಗೆ ಬಂದಾಗ ನಾನು ಹಾಸಿಗೆ ಹಿಡಿ ದಿದ್ದೆ. ನಾನು ಗುಣಮುಖನಾಗುತ್ತಿದ್ದಾಗ, ಮಗುವಿನ ನಾಮಕರಣಕ್ಕೆ ನಾನು ಬರಲು ಸಾಧ್ಯ ಎಂದುಕೊಂಡು ಅವಳು ಕುಣಿದಾಡಿ ದಳು ಆ ದಿನಕ್ಕಾಗಿ ಅವಳು ಕಾತರದಿಂದ ಕಾಯುತ್ತಿದ್ದಳು.

"ಅವನಾಗಲೇ ಅಂಬೆಗಾಲಿಡುತ್ತಿದಾನೆ."

"ಇಷ್ಟು ಬೇಗ ಅದು ಅಸಾಧ್ಯ."

"ಜೋರಲಾಗಿ ಹೊಟ್ಟೆಯ ಮೇಲೆ ಮಲಗಿ ಕೊಂಡಿರುವಾಗ ತಲೆ ಎತ್ತಿ, ಕೈಗಳನ್ನಾಡಿಸು ತ್ತಾನೆ. ಅವನ ಕಾಲುಗಳನ್ನು ಹಿಡಿದು ಕೊಂಡಾಗ ಮುಂದಕ್ಕೆ ಜರುಗಿದ. ಅವನ

# ಶೀಘ್ರದಲ್ಲಿಯೇ ಪ್ರದರ್ಶನಾರಂಭ !

ಶ್ರೀರಾಜೇಶ್ವರಿ ಪಿಕ್ಚರ್ಸ್‌ರವರ

## ಭಲೇ ರಾಜ

( ಕನ್ನಡ )



ರಾಜಕುಮಾರ್, ಜಯಂತಿ, ಕೆ. ಎಸ್. ಅಶ್ವಥ್, ಬಿ. ವಿ. ರಾಧಾ, ರಂಗ, ಜಯಶ್ರೀ, ಬೇಬಿ ಸುನೀತಾ

ಚಿತ್ರಕಥೆ-ನಿರ್ದೇಶಕ :
ವೈ ಆರ್. ಸ್ವಾಮಿ, ಎಂ. ಎ.

ಸಂಗೀತ : ಎಂ. ಸತ್ಯಂ.

ಸ್ಟುಡಿಯೋ : ಶಾರದ

ಶ್ರೀರಾಮ ಎಂಟರ್‌ಪ್ರೈಸಸ್‌ರವರ

## ಚೂರಿ ಚಿಕ್ಕಣ್ಣ

( ಕನ್ನಡ )



ರಾಜಕುಮಾರ್, ಜಯಂತಿ, ಕೆ. ಎಸ್. ಅಶ್ವಥ್, ದಿನೇಶ್, ಜಯಕುಮಾರಿ, ನರಸಿಂಹರಾಜು

ನಿರ್ಮಾಪಕ—ನಿರ್ದೇಶಕ
ಆರ್. ರಾಮಮೂರ್ತಿ

ಸಂಭಾಷಣೆ—ಹಾಡುಗಳು
ಚಿ. ಉದಯಶಂಕರ್,

ಸಂಗೀತ : ಎಂ. ಸತ್ಯಂ

ಹಂಚಿಕೆದಾರರು :

**ವೀನಸ್ ಮೂವೀಸ್**, ಗಾಂಧೀನಗರ, ಬೆಂಗಳೂರು—9

Empeeges Ads

ತೆವಳಿದಂತೆಯೇ,"

ಇನ್ನೂ ಸ್ವಲ್ಪ ಜ್ವರ ಇದ್ದರೂ ನಾನು ಹಾಸಿಗೆಯ ಮೇಲೆ ಮಲಗಿರಲು ಇಷ್ಟಪಡಲಿಲ್ಲ. ಅವಳ ಸುತ್ತ ಸುಳಿಯುತ್ತಿದ್ದೆ.

"ನೀನಿಷ್ಟು ಸುಂದರಿಯೆಂಬುದನ್ನು ನಾನು ಮರೆತಿದ್ದೆ."

"ಹಾಗೇನು ?"

ಹಬ್ಬದ ಊಟ ಮುಗಿಯಿತು.

"ಹುಡುಗನ ವಿಷಯ ಹೇಳು, ಬಹಳ ದಿನಗಳಿಂದ ನೋಡಿಲ್ಲ."

"ನಿನ್ನ ಹಾಗೆಯೇ ಬೆಳೆಯುತ್ತಿದ್ದಾನೆ."

"ಹಾಗಾದರೆ, ಬಹಳ ಸುಂದರ ಯುವಕನಾಗುತ್ತಾನೆ"

"ಅಲ್ಲ, ಅವನೂ ಒಬ್ಬ ಪತ್ರಿಕೋದ್ಯಮಿಯಾಗಿ, ಅಡಿಗೆಯನ್ನು ಟೀಕಿಸುವುದರಲ್ಲಿ ನಿಷ್ಣಾತನಾಗುತ್ತಾನೆ."

"ಹೋಗಲಿ ಬಿಡು. ಒಂದು ಚುಂಬನವನ್ನಾದರೂ ಕೊಡು."

ಮಾರನೆಯ ದಿನ ಕೆಲಸಕ್ಕೆ ಹೋದೆ. ಅಲ್ಲಿ ಆಫೀಸಿನಲ್ಲಿ ಕುಳಿತರೂ ಮಡದಿಯ ಧ್ಯಾನವಾಗಿತ್ತು.

ಒಂದು ರಾತ್ರಿ ನವೆ, ತುರಿಕೆ ಬಹಳ ಹೆಚ್ಚಾಯಿತು ರಾಜಕುಮಾರಿಗೆ. ಶರೀರವನ್ನೆಲ್ಲ ಕೆರೆದುಕೊಂಡಳು.

"ನಾನು ಏನಾದರೂ ತೆಗೆದುಕೊಳ್ಳಬೇಕು," ಆಕೆ ಹೇಳಿದಳು. "ಆದರೆ ನಾನು ತೆಗೆದುಕೊಳ್ಳುವುದಿಲ್ಲ. ಇಲ್ಲ..."

"ನೀನು ಔಷಧಿಯನ್ನು ತೆಗೆದುಕೊಳ್ಳಲೇಬೇಕು. ಮಗುವಿಗೆ ಹಾಲಿನ ಪುಡಿಯಿಂದ ಹಾಲು ಮಾಡಿಕೊಡೋಣ. ನಾನು ಅವನನ್ನು ನೋಡಿಕೊಳ್ಳುತ್ತೇನೆ."

ಮಗು ಆಗ ತಾನೇ ಎದ್ದಿದ್ದರಿಂದ, ರಾಜಕುಮಾರಿ ಅವನನ್ನು ಎತ್ತಿಕೊಂಡಳು.

"ಈಗೇನೂ ತೊಂದರೆ ಇಲ್ಲ. ಅವನನ್ನು ಎತ್ತಿಕೊಂಡಾಗ, ಹಾಲು ಕುಡಿಸುವಾಗ, ನನಗೆ ನವೆಯಾಗುವುದಿಲ್ಲ."

"ನೀನು ಅವನನ್ನು ಯಾವಾಗಲೂ ಎತ್ತಿಕೊಂಡಿರಲು ಅಥವಾ ಹಾಲು ಕುಡಿಸುತ್ತಿರಲು ಸಾಧ್ಯವಿಲ್ಲ. ಮೊದಲು ಔಷಧವನ್ನು ತೆಗೆದುಕೋ" ಎಪ್ಪತ್ತೈದು ಮಿಲಿಗ್ರಾಂಗಳಷ್ಟು ಪ್ರೊಮಿಥಾಜೈನ್ ತೆಗೆದುಕೊಂಡು, ಮಗುವಿಗೆ ಹಸಿವಾದಾಗ ನಾನು ಎಬ್ಬಿಸುತ್ತೇನೆಂದು ಆಶ್ವಾಸನೆ ತೆಗೆದುಕೊಂಡು, ನಿದ್ದೆಹೋದಳು.

ಮಗುವಿನ ಕೊಠಡಿಗೆ ಹೋಗಿ ಮಲಗಿದೆ. ಏನೇನೋ ಯೋಚನೆಗಳು ಮನದಲ್ಲಿ ಸುಳಿದಾಡತೊಡಗಿದವು. ಈಗೇನಾದರೂ ಕಾಯಿಲೆ ಅವಳನ್ನು ಬಲಿತೆಗೆದುಕೊಂಡರೆ? ಅದೂ ಸಾಧ್ಯ. ಸಂಖ್ಯಾಶಾಸ್ತ್ರದ ಪ್ರಕಾರ ಅವಳಂತಹ ಶೇಕಡಾ ಎಪ್ಪತ್ತರಷ್ಟು ರೋಗಿಗಳು ಐದು ವರ್ಷಗಳಲ್ಲಿಯೇ ಸಾಯುತ್ತಾರೆ. ಮಕ್ಕಳನ್ನು ಹೆತ್ತ ರೋಗಿಗಳ ಬಗ್ಗೆ ಸಂಖ್ಯಾಶಾಸ್ತ್ರ ಹೇಳುವುದೇನು? ಅದಕ್ಕೆ ಅವಳೊಬ್ಬಳೇ ಉದಾಹರಣೆಯಾಗಿದ್ದಳು.

ಆಕೆ ಸತ್ತರೆ, ನಂತರ ? ನನ್ನ ಆಸೆಗಳೆಲ್ಲ ಹಗಲುಗನಸುಗಳೇ ? ನಾನು ಮತ್ತೆ ಆಫೀಸಿನಲ್ಲಿ ಕುಳಿತು ಕೆಲಸ ಮಾಡಬಲ್ಲೆನೇ ? ಅಥವಾ ವಿಷ ತೆಗೆದುಕೊಳ್ಳಬೇಕೆ ? ಕೆಲವು ತಿಂಗಳುಗಳ ತನಕ, ಕೆಲವು ವರ್ಷಗಳ ತನಕವಾದರೂ ಮನುಷ್ಯನಂತೆ ನಟಿಸಬೇಕು. ಪ್ರವಾಸ ಕೈಗೊಳ್ಳಬೇಕು. ಪ್ರೀತಿಸಲಾಗದ, ಪ್ರೀತಿಸದ ಹೆಂಗೆಳೆಯರೊಡನೆ ದಿನಗಳನ್ನು ಕಳೆಯಬೇಕು. ಉಪಯೋಗವಿಲ್ಲದ ಅನುಭವ.

ಎಂಥ ನರಕ!— ನಾನು ಯೋಚಿಸಿದೆ. ಮಗು ಮಲಗಿದೆಯೆಂದು ಹೇಳಿ ನಾನು ನಿದೆ ಹೋದೆ.

ಅವಳು ಯಾರನ್ನೂ ಬಹಳವಾಗಿ ಬರ ಮಾಡಿಕೊಳ್ಳುತ್ತಿರಲಿಲ್ಲ. ಮಗು ಅವಳ ಜೀವನವನ್ನೇ ಬದಲಾಯಿಸಿತ್ತು. ನಾವು ಕೆಲವರನ್ನು ಮಾತ್ರ ಕಾಣುತ್ತಿದ್ದೆವು. ಒಬ್ಬ ಕವಿ ಮತ್ತು ಆತನ ಕತೆಗಾರ್ತಿ ಪತ್ನಿ; ಮತ್ತು ನಮ್ಮ ತಂದೆ-ತಾಯಿಗಳು.

ಮಾತನಾಡುವಾಗಲಂತೂ ಆಕೆ ಅದರಲ್ಲಿ ತನ್ಮಯಳಾಗುತ್ತಿದ್ದಳು. ಇದಕ್ಕೆ ಕಾರಣ ಅವಳ ಕಾಹಿಲೆ. ಆಕೆ ತನ್ನ ಮಗನೊಂದಿಗೆ ಬೆಳೆದಳು. ಪರಿಶುದ್ಧವಾದ ಪ್ರೇಮದಲ್ಲಿ ನಾನು ಆಸಕ್ತ

ನಾದೆ. ಮೊಲೆ ಕುಡಿಸುವಾಗಲಂತೂ ಆಕೆ ತನ್ನ ಮಗನಿಗೆ ತನ್ನ ತನುಮನವೆಲ್ಲವನ್ನೂ ಧಾರೆ ಎರೆಯುತ್ತಿದ್ದಳು. ಅದನ್ನು ನೋಡುತ್ತ ನಾನು ಪ್ರಪಂಚವನ್ನೇ ಮರೆಯುತ್ತಿದ್ದೆ. ಎಷ್ಟೋ ಜನ, ರಾಜಕುಮಾರಿಯ ಮುಖದಷ್ಟೇ ಚೆಲುವ ಮುಖವನ್ನು ಕಾಣಲು ಮನಸಿನಲ್ಲಿ ಅನ್ವೇಷಿಸುತ್ತಿರಬಹುದು. ಅಂತಹವರು, ನನ್ನಂತೆ ಮಗುವಿನ್ನಮೇಲೆ ಬಾಗಿದಾಗ ಆ ಮುಖದಲ್ಲಿ ಕಾಣುವ ಕೋಮಲತೆಯನ್ನು ನೋಡಬೇಕು. ಅಂಥ ಮುಖದಿಂದ ಹೊರ ಹೊಮ್ಮುವ ಕಾಂತಿ ಎಂತಹವರನ್ನಾದರೂ ದಿಗ್ಭ್ರಮೆಗೊಳಿಸುತ್ತದೆ.

೧೨

"ನಾವು ಬಹಳ ಡಬ್ಬಗಳನ್ನು ಕೊಳ್ಳಬೇಕಾಗುತ್ತೆ, ದ್ವೀಪದಲ್ಲಿ ವಾಸಿಸುವುದರಿಂದ," ನಾನೆಂದೆ.

"ನಮಗೇನೂ ಬಹಳ ಬೇಕಾಗಿಲ್ಲ. ನೀನು ಮೀನು ಹಿಡಿದರೆ, ನಾನು ಬಾರಿಹಣ್ಣುಗಳನ್ನು ಆರಿಸುತ್ತೇನೆ."

"ನಾವು ಸ್ವಲ್ಪ ಸಾಂಬಾರ ಪದಾರ್ಥಗಳನ್ನೂ ಎಸ್ಸೆನ್ಸ್‌ಗಳನ್ನೂ ಕೊಳ್ಳಬೇಕು. ರಬ್ಬರ್ ಬೂಟ್ಸನ್ನು ಕೊಂಡುಕೊಳ್ಳಬೇಕು."

"ಅವನಿಗೆ ಅದು ಬಲು ಇಷ್ಟ."

"ಹಾಗಾದರೆ ಕೊಂಡುಕೊಳ್ಳಬೇಕು. ಹಾಗೆಯೇ ನಾವು ಹಣ ಕೂಡಿಡಬೇಕು. ಅವನ ಹೆಸರಿನಲ್ಲಿ, ಪೋಸ್ಟ್ ಆಫೀಸ್‌ನಲ್ಲಿ ಸೇವಿಂಗ್ಸ್ ಬ್ಯಾಂಕ್ ಖಾತೆಯೊಂದನ್ನು ಪ್ರಾರಂಭಿಸಬೇಕು. ಅದರಲ್ಲಿ ಆಗಾಗ್ಗೆ ಹಣವನ್ನು ಸೇರಿಸುತ್ತಿರಬೇಕು."

ಆಕೆಯನ್ನು ಬಲವಾಗಿ ನನ್ನೆಡೆಗೆ ಎಳೆದುಕೊಂಡೆ. ಆಕೆಯನ್ನು ಪ್ರೀತಿಸುತ್ತಿದ್ದರಿಂದ ಆಕೆಯೊಂದಿಗೆ ಬಹಳ ಕಾಲ ಬಾಳಬೇಕು ಎಂದುಕೊಂಡು, ಹಾಗೆ ಮಾಡಿದೆ.

ದ್ವೀಪಕ್ಕೆ ಹೊರಡುವ ಮುನ್ನ ಕ್ಯಾನ್ಸರ್ ಪಾಲಿಕ್ಲಿನಿಕ್ ಮತ್ತು ರೇಡಿಯೋ ಥೆರಾಪಿ ಕ್ಲಿನಿಕ್‌ಗೆ ಹೋದೆ. ಕ್ಯಾನ್ಸರ್ ಪಾಲಿಕ್ಲಿನಿಕ್ಕಿನಲ್ಲಿ ಮಹಿಳೆಯರ ಸಾಮೂಹಿಕ ಪರೀಕ್ಷೆಗಾಗಿ ಬಹಳ ಗಡಿಬಿಡಿ ನಡೆದಿತ್ತು. ಒಂದು ವರ್ಷಕ್ಕೆ ಸುಮಾರು ನಲವತ್ತೈದು ಸಾವಿರ ಜನರ ಪರೀಕ್ಷೆಗಳನ್ನು ನಡೆಸುತ್ತಾರೆ. ಸಾವಿರಾರು ಫಿನ್ನಿಶ್ ಸ್ತ್ರೀಯರ, ಪ್ರಾಯಶಃ ಸಾವಿರಾರು ಮಕ್ಕಳ ತಾಯಂದಿರ ಪ್ರಾಣ ಉಳಿಯುತ್ತದೆ. ಫಿನ್ಲೆಂಡಿನಲ್ಲಿ ಹೆಚ್ಚು ಪ್ರಚಲಿತವಾದ ಶ್ವಾಸಕೋಶದ ಕ್ಯಾನ್ಸರಿನ ಬಗ್ಗೆ ಹೆಚ್ಚು ಫಲಕಾರಿಯಾದ ಪ್ರಯೋಗಗಳನ್ನು ನಡೆಸಿದ್ದರು. ಆ ಶ್ವಾಸಕೋಶದ ಕ್ಯಾನ್ಸರ್ ಬಹಳ ಫಿನ್ನಿಶ್ ಜನರನ್ನು ಆಹುತಿ ತೆಗೆದುಕೊಂಡಿತ್ತು. ಈ ಅಪಾಯಕಾರಿ ಯುಗದಲ್ಲಿ, ಪ್ರತಿಯೊಬ್ಬರ ಸಮೂಹ ಪರೀಕ್ಷೆ ನಡೆಸುವುದು, ಕಾಲ ಹಾಗೂ ಧನದ ಮಾತಾಗಿತ್ತು.

ಇತರ ವಿಧಗಳ ಕ್ಯಾನ್ಸರಿನ ಬಗ್ಗೆಯೂ ಇದೇ ಕಥೆ. ಆದರೆ ಸಮಸ್ಯೆಯ ಹೊರ ಕವಚವನ್ನು ಭೇದಿಸಲು ಅಸಾಧ್ಯವಾಗಿತ್ತು. ನನ್ನ ರಾಜಕುಮಾರಿ ಮತ್ತು ಇತರ ಕ್ಯಾನ್ಸರ್ ರೋಗಿಗಳಲ್ಲಿ ಈ ರಹಸ್ಯ ಭದ್ರವಾಗಿತ್ತು. ಕೆಲವರ ದೇಹಗಳಲ್ಲಿ ಕ್ಯಾನ್ಸರನ್ನು ತಡೆಗಟ್ಟುವ ವಿಶೇಷ ಪದಾರ್ಥಗಳಿವೆಯೆಂದು ಅವರಿಗೆ ತಿಳಿದಿತ್ತು. ಈ ವಿಷಯದ ಬಗ್ಗೆ ಹೆಚ್ಚು ಗೊತ್ತಾದರೆ ಕ್ಯಾನ್ಸರಿನ ರಹಸ್ಯ ಬಯಲಾಗುತ್ತದೆ.

ಅವರ ಮೇಲೆ ನನಗೆ ಕನಿಕರ. ಆದರೆ ನಾನೇನು ಮಾಡಬಲ್ಲೆ? ನನ್ನ ಟೈಪರೈಟರನ್ನು ಅವರಿಗಾಗಿ ವಿನಿಯೋಗಿಸಬಲ್ಲೆನಷ್ಟೇ.

ನಂತರ ರೇಡಿಯೋ ಥೆರಾಪಿ ಕ್ಲಿನಿಕ್ಕಿಗೆ ಹೋದೆ.

ರಾಜಕುಮಾರಿಯ ಆರೋಗ್ಯ ನನಗೆ ಒಂದೊಂದು ಸಾರಿ, ಸಂತೋಷವನ್ನು ನೀಡುತ್ತಿತ್ತು, ಹೆದರಿಸುತ್ತಿತ್ತು. ಒಮ್ಮೊಮ್ಮೆ ಯಾವುದೂ ಇರುತ್ತಿರಲಿಲ್ಲ. ಒಮ್ಮೊಮ್ಮೆ ಇದ್ದಕ್ಕಿದ್ದಂತೆಯೇ ರೋಗಿಯಾಗಿಬಿಡುತ್ತಿದ್ದಳು. ಸಂಪೂರ್ಣವಾಗಿ ವಾಸಿಯಾಗಿದೆಯೋ ಅಥವಾ ದೀಪ ಆರುವ ಮುನ್ನ ಎದ್ದುರಿಯುವ ಪ್ರಕಾಶವೆ ಎಂದು ನನಗೇ ಸಂಶಯವಾಗುತ್ತಿತ್ತು.

ಡ್ಯೂಟಿ ಡಾಕ್ಟರೊಡನೆ ಮಾತನಾಡುತ್ತ, ಕಟ್ಟಕಡೆಗೆ ಒಂದು ಪ್ರಶ್ನೆಯನ್ನು ಕೇಳಿದೆ.

"ನನ್ನ ಪತ್ನಿಯ ಕಥೆಯೆಲ್ಲವೂ ನಿಮಗೆ ಗೊತ್ತು. ನಾವು ಮತ್ತೆ ಮತ್ತೆ ಮಕ್ಕಳನ್ನು

ಪಡೆಯಬಹುದೇ ? ಅಂದರೆ ಆಕೆ ಮತ್ತೆ ತಾಯಿಯಾಗಬಲ್ಲಳೇ ?"

ಅವರ ಉತ್ತರ ನೇರವಾಗಿ ನನಗೆ ದೊರೆಯಿತು. ಮನೆಗೆ ಬಂದು ಅಂದೇ ದ್ವೀಪಕ್ಕೆ ಕಾರಿನಲ್ಲಿ ಹೊರಟೆವು

ಆ ದ್ವೀಪದಲ್ಲಿ ಯಾವ ಅಡಚಣೆಯೂ ಇಲ್ಲ. ಅಲ್ಲಿ ಕೇವಲ ಮರಳ ರಾಶಿ. ಕೆಲವು ಮರಗಳು. ಒಂದು ಮನೆ. ಇದು ನಡೆದದ್ದು ೧೯೬೪ ರ ಸೆಪ್ಟೆಂಬರ್‌ನಲ್ಲಿ, ಬಹಳ ಕಾಲದ ಹಿಂದೇನೂ ಅಲ್ಲ.

"ಇಂದು ಬೆಳಿಗ್ಗೆ ಡಾಕ್ಟರನ್ನು ನೋಡಿದ್ದೆ."

"ಉಪಕಾರವಾಯಿತು. ಏನೆಂದರು ?"

"ನಾವು ಮಕ್ಕಳನ್ನು ಮತ್ತೆ ಪಡೆಯಬಹುದೇ ಎಂದು ಕೇಳಿದೆ ?"

"ಏನೆಂದರು ?"

ನಾನು ದಾರಿಯ ಮಧ್ಯದಲ್ಲಿ ಕಾರನ್ನು ನಿಲ್ಲಿಸಿ ತಂದ ಪ್ಯಾಕೆಟ್ಟನ್ನು ಹರಿದು, ಅದರಲ್ಲಿದ್ದುದನ್ನು ಅವಳ ತೊಡೆಯ ಮೇಲೆ ಸುರಿದೆ.

"ನಾವೇನಾದರೂ ದ್ವೀಪದಲ್ಲಿ ಬಹಳ ಕಾಲ ಇರಬೇಕಾದರೆ, ನಿನಗೆ ಸಾಕಾಗುವಷ್ಟು ಇದೆ."

ಅದು ನಾನು ಹೇಳುವ ರೀತಿ.

ಆಕೆ ಸಂತೋಷದಿಂದ, ಪಾಲಿಪಾಪ್ (ಸಿಹಿ ತಿಂಡಿಯನ್ನು) ನ್ನು ಎದೊಗೊತ್ತಿಕೊಂಡಳು. ಅವೆಲ್ಲವುಗಳನ್ನು ಮತ್ತೆ ಚೀಲಕ್ಕೆ ಹಾಕಿ ಹೋಲ್ಡಾಲ್‌ನಲ್ಲಿಟ್ಟಳು. ಮಗುವನ್ನು ಎತ್ತಿಕೊಂಡಳು. ಮಧ್ಯದಲ್ಲಿ ನಿಲ್ಲಿಸಿದ್ದ ಕಾರು ಹೊರಟಿತು.

ಇದು ಅವಳ ರೀತಿ. *

The Princes © Gunnar Mattson



ಲೋಕಮಾನ್ಯ ತಿಲಕರ ಸಹಪಾಠಿಯೊಬ್ಬ ಕೋಪದಿಂದ ರಾಣಿ ವಿಕ್ಟೋರಿಯಾಳ ಚಿತ್ರವೊಂದನ್ನು ಹರಿದು ಹಾಕಿದ.

ಇದನ್ನು ನೋಡಿದ ತಿಲಕರು ಹೇಳಿದರು. "ಈ ನಿರುಪದ್ರವಿ ಕಾಗದದ ಮೇಲೆ ನಿನ್ನದೇಕೆ ಕೋಪ ? ಇಂಗ್ಲೀಷರು ನಮ್ಮನ್ನು ಪರಾಧೀನರನ್ನಾಗಿ ಮಾಡಿದ್ದಾರೆ. ಅವರ ವಿರುದ್ಧ ಪ್ರತಿಭಟನೆ ವ್ಯಕ್ತ ಪಡಿಸುವ ಶಕ್ತಿ ನಿನಗಿದ್ದರೆ, ಈ ರೀತಿ ದೌರ್ಬಲ್ಯವನ್ನು ಪ್ರದರ್ಶಿಸಬೇಡ. ಬದಲಾಗಿ ಇಂಗ್ಲೀಷರನ್ನು ಹೊಡೆದೋಡಿಸಲು ಜೀವನವಿಡೀ ಹೋರಾಡುವೆನೆಂಬ ಪ್ರತಿಜ್ಞೆ ಮಾಡು."

---

This Magazine owned by the Loka Shikshana Trust, Hubli is printed & published by B. G. Guttal at the Samyukta Karnatak Press, Koppikar Road, Hubli.

Representatives: Bombay V. S. Manii, Phone: 472794 Calcutta : H. Muzamdar Phone: How. 67-3164. Madras: P. N. Srinivasan, Phone: 83748. New Delhi P. R. Chopra. Phone: 524130.

# ಸತ್ಯ, ನಾನು ಮತ್ತು ಹರಿಶ್ಚಂದ್ರ

ಲಾಂಗೂಲಾಚಾರ್ಯ

ನಾನು ಒಂಭತ್ತು ವರ್ಷದವನಾಗಿದ್ದಾಗ ನನ್ನ ಭಾವ ನನ್ನನ್ನು ಸತ್ಯ ಹರಿಶ್ಚಂದ್ರ ನಾಟಕಕ್ಕೆ ಕರೆದುಕೊಂಡು ಹೋಗಿದ್ದರು. ಅದು ನನಗೆ ಸತ್ಯದರ್ಶನ ಮುಹೂರ್ತ— Moment of Truth ಅನ್ನುತ್ತಾರಲ್ಲ— ಆಯಿತು. ಆವೊತ್ತು ನನಗೆ ಗೋಚರವಾಯಿತು: ಸತ್ಯವೆಂಬುದು ಮೂಢರ ಮತ್ತು ನೀಚರ ಕೈಲಿ ಸಿಕ್ಕಿದರೆ ಎಷ್ಟು ಕೇಡಿನ ಪದಾರ್ಥವಾಗಬಲ್ಲದು ಎಂದು. ಅಂಪೇ ನಾನು ನಿರ್ಧರಿಸಿಕೊಂಡೆ: ಸತ್ಯ ಹೇಳಿ ಕಷ್ಟಕ್ಕೆ ಸಿಲುಕುವ ಹೆಡ್ಡತನವನ್ನು ನಾನು ಮಾಡಬಾರದು ಎಂದು. ತಮ್ಮ ಮಕ್ಕಳು ಸತ್ಯವಾದಿಗಳಾಗಿರಬೇಕೆಂದು ಯಾ-ರಾದರೂ ಅಪೇಕ್ಷಿಸುತ್ತಿದ್ದರೆ ಅವರು ತಮ್ಮ ಮಕ್ಕಳಿಗೆ ಎಳೇ ವಯಸ್ಸಿನಲ್ಲಿ ಸತ್ಯಹರಿಶ್ಚಂದ್ರನ ಕಥೆಯನ್ನು ಹೇಳಬಾರದು, ನಾಟಕವನ್ನಂತೂ ತೋರಿಸಬಾರದು ಎಂದು ಸೂಚಿಸುತ್ತೇನೆ.

ಇಡೀ ನಾಟಕ ನನಗೆ ಅರ್ಥರಹಿತ, ಬುದ್ಧಿಹೀನವಾಗಿ ಕಾಣಿಸಿತು. ಇಬ್ಬರು ಬಿಳೀ ಗಡ್ಡದವರು ಸ್ವರ್ಗಸಭೆಯಲ್ಲಿ ಜಗಳಾಡಬೇಕು; ಅದಕ್ಕಾಗಿ ಭೂಲೋಕದಲ್ಲಿ ಒಬ್ಬ ರಾಜ ಹೇಳತೀರದ ಸಂಕಷ್ಟಗಳನ್ನು ಅನುಭವಿಸಬೇಕು. ಪ್ರಾರಂಭದಲ್ಲೇನೋ ನನಗೆ ಹರಿಶ್ಚಂದ್ರನ ಮೇಲೆ ಸ್ವಲ್ಪ ಸಹಾನುಭೂತಿ ಹುಟ್ಟಿತು. ಆದರೆ ಬರಬರುತ್ತಾ ನನಗೆ ಅವನ ಮೇಲೆ ಕೋಪವೇರುತ್ತಹೋಯಿತು. ಎಂಥಾ ಮೂರ್ಖ ಈತ. ಇವನಿಗೆ ಆದ ಶಾಸ್ತಿಯೆಲ್ಲ ಸರಿಯಾಗಿಯೆ ಇದೆ. ವಿಶ್ವಾಮಿತ್ರನ ಕಾಮುಕ ಮಗಳಂದಿರಿಗೆ ಅವಮಾನ ಮಾಡಿದ್ದಕ್ಕೆ ರಾಜ್ಯವನ್ನೇನೊ ದಂಡವಾಗಿ ಕೊಟ್ಟ. ಹೋಗಲಿ. ಅದರ ಮೇಲೆ ದಕ್ಷಿಣೆ ಕೊಡುವುದಕ್ಕೆ ಯಾಕೆ ಒಪ್ಪಿಕೊಂಡ? ದಾನಕ್ಕೆ ದಕ್ಷಿಣೆ ಹೊರತು ದಂಡಕ್ಕೆ ದಕ್ಷಿಣೆ ಕೊಡುವ ಶಾಸ್ತ್ರವಿಲ್ಲ ಅಂತ ನನ್ನಂಥಾ ಹುಡುಗನಿಗೆ ಹೊಳೆಯುವ ಮಾತು ಈ ರಾಜನಿಗೆ ಯಾಕೆ ಹೊಳೆಯುವುದಿಲ್ಲ? ಇಷ್ಟು ಪೆದ್ದನಾದ ಹರಿಶ್ಚಂದ್ರ ರಾಜ್ಯವಾಳುವುದಕ್ಕೆ ಯೋಗ್ಯನೇ ಅಲ್ಲ ಎಂಬ ತೀರ್ಮಾನಕ್ಕೆ ನಾನು ಬಂದೆ. ನಾನಾಗಿದ್ದರೆ ನಕ್ಷತ್ರಕನಿಗೆ ಕಾಡಿನಲ್ಲಿ ಅವನ ಹಿಂಬದಿಗೆ ಒಳ್ಳೇ ಫುಟ್‌ಬಾಲಿಗೆ ಕೊಡುವ ಹಾಗೆ ನಾಲ್ಕು ಘನ ಲತ್ತೆಗಳನ್ನು ಕೊಟ್ಟು "ಮಗನೇ, ವಸೂಲಿ ಜವಾನ ನಿನಗೆಷ್ಟು ಧಿಮಾಕೋ! ಒಳ್ಳೇ ಮಾತಿನಲ್ಲಿ ನಾನು ಹಣ ಕೊಡೋವರೆಗೂ ಸುಮ್ಮನೆ ನನ್ನ ಹಿಂದೆ ಬಾ. ಇಲ್ಲದಿದ್ದರೆ ನಾನು ದಕ್ಷಿಣೆ ಹಣ ತೀರಿಸಲಿಲ್ಲ ಅನ್ನೋ ಸುದ್ದಿ ತಲುಪಿಸೋದಕ್ಕೇ ನೀನು ಇಲ್ಲದ ಹಾಗೆ ಮಾಡೇನು" ಎಂದು ಹೇಳುತ್ತಿದ್ದೆ ಎಂದುಕೊಂಡೆ. ಒಳ್ಳೇ ಮಾತು ಮಾಡಲಾರದ್ದನ್ನು ಒಂದೆರಡು ಒದಿಕೆಗಳು ಹೇಗೆ ಮಾಡಬಲ್ಲವು ಎಂಬುದು ನನಗೆ ಆಗಲೇ ಸಾನುಭವದಿಂದ ತಿಳಿದುಹೋಗಿತ್ತು.

ನಾನು ದೊಡ್ಡವನಾದ ಹಾಗೆ ಮತ್ತು ಸತ್ಯದ ವಿಷಯ ಹೆಚ್ಚು ಹೆಚ್ಚು ಕಥೆ ಕೇಳಿದ ಹಾಗೆ ಈ ಸತ್ಯದ ವಿಷಯ ಬೊಬ್ಬಾಟವೆಲ್ಲ ಹಾಸ್ಯಾಸ್ಪದವೆಂದು ಮನವರಿಕೆಯಾಗುತ್ತ ಹೋಯಿತು. ಸತ್ಯಕಥೆಗಳಲ್ಲೆಲ್ಲಾ ಒಂದು ಸಾಮಾನ್ಯ ಲಕ್ಷಣ ಎಂದರೆ ಸತ್ಯವಂತರ ಸುಖಾವಸಾನ. ಹರಿಶ್ಚಂದ್ರನಿಗೆ ರಾಜ್ಯ ತಿರುಗಿ ಸಿಕ್ಕಿತು; ಮೇಲೆ ವಿಶ್ವಾಮಿತ್ರನ ಪುಣ್ಯರಾಶಿಯೂ ಸಿಕ್ಕಿತು. ಗೋವಿನ ಕಥೆಯ ಪುಣ್ಯಕೋಟಿಯು

ಸತ್ಯ ನೋಡಿ ಹೆಬ್ಬುಲಿ "ತನ್ನ ಪ್ರಾಣವ ಬಿಟ್ಟಿತು." ಜಾರ್ಜ್ ವಾಷಿಂಗ್‌ಟನ್ ತನ್ನ ಹೊಸ ಚಾಕುವಿನ ಹರಿತ ಪರೀಕ್ಷೆಗಾಗಿ ಲಿಂಬೇಗಿಡ ಕೆತ್ತಿ ಆ ಮೇಲೆ ತಂದೆಗೆ ಸತ್ಯ ಹೇಳಿದ್ದಕ್ಕಾಗಿ ಅವನಿಗೆ ತಂದೆಯಿಂದ ಬಹುಮಾನ ಸಿಕ್ಕಿತು. ಸತ್ಯವಂತರಿಗೆ ಕೊನೆಗೆ ಒಳ್ಳೇ ಬಹುಮಾನ ಸಿಕ್ಕುತ್ತದೆ; ಅದು ಒಳ್ಳೇ ಇನ್‌ವೆಸ್ಟ್‌ಮೆಂಟು; ಟಾಟಾ ಅಯರ್ನ್ ಷೇರುಗಳು ಯುದ್ಧಕಾಲದಲ್ಲಿ ಕೊಟ್ಟದ್ದಕ್ಕಿಂತಲೂ ಹೆಚ್ಚು ರಿಟರ್ನ್ ಕೊಡುತ್ತದೆ—ಅಂತ ಪುಸಲಾಯಿಸುವುದಕ್ಕಾಗಿ ಸುಖಾಂತ್ಯದಲ್ಲಿ ಈ ಸತ್ಯಕಥೆಗಳು ಕೊನೆಯಾಗುತ್ತವೆ.

ಚಿಕ್ಕಂದಿನಿಂದಲೇ ನಾನು ಚಿಕಿತ್ಸಾಸ್ವಭಾವದವನು. ಎಕ್ಸ್‌ಪೆರಿಮೆಂಟ್ ಮಾಡಿ ನೋಡುವವನು. ವಾಷಿಂಗ್‌ಟನ್ ಮತ್ತು ಅವನಪ್ಪನ ನಿಂಬೇಗಿಡದ ಕಥೆ ಓದಿದ ಮೇಲೆ ನಾನು ಒಂದು ದಿನ ಸಂಜೆ ಒಂದು ಕತ್ತಿ ತೆಗೆದುಕೊಂಡು ಹೋಗಿ ತೋಟದಲ್ಲಿದ್ದ ಒಂದು ಬಾಳೇಗಿಡ ಕಡಿದು ಹಾಕಿದೆ. ವಿಚಾರಣೆ ಆಯಿತು. ನಾನು ಸವಾಯಿ ವಾಷಿಂಗ್‌ಟನ್ನನಾಗಿ ನನ್ನ ಅಪರಾಧ ಒಪ್ಪಿಕೊಂಡೆ. "ಯಾಕೆ ಕಡಿದಿ?" ಎಂಬ ಪ್ರಶ್ನೆ ಬಂತು. "ಒಂದೇ ಏಟಿನಲ್ಲಿ ಬಾಳೇಗಿಡ ಕಡಿಯೋದಕ್ಕೆ ನನ್ನಿಂದಾಗುತ್ತೊ ಇಲ್ಲೋ ಅಂತ ನೋಡಬೇಕನಿಸಿತು," ಅಂದೆ. "ಹೀಗೊ? ಹಾಗಾದರೆ ಒಂದೇ ಏಟಿನಲ್ಲಿ ನಿನ್ನ ಬೆನ್ನ ಮೇಲೆ ಎಷ್ಟು ಬೆರಳು ಮೂಡಿಸೋದಕ್ಕೆ ಬರುತ್ತೆ ಅಂತ ನೋಡುತ್ತೇನೆ" ಅಂತ ನನ್ನ ಭಾವ ನನ್ನ ಅಂಗಿ ತೆಗೆದು ಎಕ್ಸ್‌ಪೆರಿಮೆಂಟ್ ಮಾಡಿದರು. ನಾಲ್ಕು ಬೆರಳು ಪೂರ್ಣ ಮತ್ತು ಒಂದು ಅರ್ಧ ಮೂಡಿದ್ದವೆಂದು ಆ ಮೇಲೆ ನೋಡಿ ನನ್ನಕ್ಕ ಹೇಳಿದರು. ನನ್ನ ಭಾವ "ಬಾಳೇಗಿಡ ಕಡಿದದ್ದು ಮಾತ್ರವಲ್ಲದೆ ತಾನೇ ಕಡಿದೆ ಅಂತ ಪೌರುಷ ಕೊಚ್ಚಿಕೊಳ್ಳೋದಕ್ಕೆ ಬಂದಿದ್ದಾನೆ!" ಅಂತ ಗೊಣಗುತ್ತಿದ್ದದ್ದನ್ನೂ ಕೇಳಿದೆ.

ಈ ಪ್ರಯೋಗ ಮತ್ತು ಅದರ ಪರಿಣಾಮದ ನೋವು ಹಿಂಗಿದ ಬಳಿಕ ನಾನು ಎರಡು ತೀರ್ಮಾನಗಳಿಗೆ ಬಂದೆ: ಒಂದು,— ಪುಣ್ಯಕೋಟಿಯನ್ನು ಹಿಡಿದ ಹೆಬ್ಬುಲಿ 'ತನ್ನ' ಪ್ರಾಣವನ್ನು ಬಿಟ್ಟದ್ದು ಸುಳ್ಳು—ಅದು ನಮ್ಮ ಅನೇಕ ದೇಶಭಕ್ತರ ಹಾಗೆ- ಬೇರೆ ಯಾರದೋ ಪ್ರಾಣವನ್ನು ಬಿಟ್ಟಿರಬೇಕು; ಎರಡು,—ನಾನು ಬಾಳೇಗಿಡ ಕಡಿದದ್ದಕ್ಕಿಂತಲೂ ಸತ್ಯ ಹೇಳುವ ದಿಟ್ಟತನ ಮಾಡಿದ್ದು ನನ್ನ ಭಾವನನ್ನು ಕೆರಳಿಸಿತ್ತು ಅಂತ. ನನ್ನ ಈ ಪಾಠಗಳನ್ನು ನಾನು ಹೃತ್ಪೂರ್ವಕ ಬಾಯಿಪಾಠ ಕಲಿತೆ, ಎಂಬುದಾಗಿ ಬೇರೆ ಹೇಳಬೇಕಾಗಿಲ್ಲವಷ್ಟೇ.

ಸತ್ಯ ಸತ್ಯ ಅಂತ ಮನುಷ್ಯ, ಅದರಲ್ಲಿಯೂ ನಮ್ಮ ದೇಶ ಯಾಕೆ ಹಪಾಹಿಸುತ್ತಾ ಇದೆ ಅನ್ನುವುದು ನನಗೆ ಅರ್ಥವಾಗುವುದಿಲ್ಲ. ಮನುಷ್ಯನಿಗಾಗಿ ಧರ್ಮ ಹೊರತು ಧರ್ಮಕ್ಕಾಗಿ ಮನುಷ್ಯ ಅಲ್ಲ— ಎನ್ನುವ ಪ್ರಗತಿಶೀಲವಾಕ್ಯವನ್ನು ನೀವು ಕೇಳಿಲ್ಲವೆ? ಹಾಗೇ ಮನುಷ್ಯನಿಗಾಗಿ ಸತ್ಯವಿರಬೇಕೇ ಹೊರತು ಸತ್ಯಕ್ಕಾಗಿ ಮನುಷ್ಯ ಬಾಳಬೇಕೆಂಬುದರಲ್ಲಿ ಅರ್ಥವಿಲ್ಲ. ಸಕಾಲದಲ್ಲಿ ಹೇಳಿದ ಒಂದು ಸುಳ್ಳು ಮುಂದೆ ಬರುವ ಒಂಬತ್ತು ಸಂಕಟಗಳನ್ನು ತಪ್ಪಿಸಬಲ್ಲುದು. ದಶರಥನ್ನ ನೋಡಿ. ಈ "ಸತ್ಯದ ತಗಹಿನ ಅವನೀನಾಥ" ತನ್ನ ಸತ್ಯಕ್ಕಾಗಿ ಮಗನನ್ನು ಮನಸಿಲ್ಲದೆ ಕಾಡಿಗೆ ಅಟ್ಟಿದ. ಅವನು ತಾನೇ ಸಾಲದ್ದಕ್ಕೆ ಹೆಂಡತಿಯನ್ನೂ ಕರೆದೊಯ್ದ. ಚೆಲುವೆ ರಮಣಿಯರು ಕಾಡಿನಲ್ಲಿ ಅಲೆಯುವುದನ್ನು ಮೆಚ್ಚದಿದ್ದ ರಾವಣ ಅವಳನ್ನು ಒಯ್ದ. ಇದರ ಫಲವಾಗಿ ವಾಲಿ ಸಾಯಬೇಕಾಯಿತು. ಕಪಿಪಾಳ್ಯ ರಾಕ್ಷಸಪಾಳ್ಯಗಳು ಧ್ವಂಸವಾದವು. ಇದಾಗಿ ಪೂರ್ತಿ ಎರಡು ಯುಗಗಳು ಸಂದು ಹೋಗಿದ್ದರೂ ಇನ್ನೂ ಲಂಕಾದ್ವೀಪದವರು ಜಂಬೂದ್ವೀಪದವರಾದ ನಮ್ಮನ್ನು ಸಂದೇಹದಿಂದ ನೋಡುತ್ತಿದ್ದಾರೆ. ದಶರಥ ಸಕಾಲದಲ್ಲಿ ಒಂದು ಸುಳ್ಳು ಹೇಳಿಬಿಟ್ಟಿದ್ದರೆ ಇಷ್ಟೆಲ್ಲ ಅನಾಹುತಗಳು ತಪ್ಪುತ್ತಿರಲಿಲ್ಲವೆ?

ಅವನು ಕೈಕೇಯಿಗೆ ಪ್ರಾಮಿಸ್ ಕೊಟ್ಟಾಗ ಯಾವ ಸಾಕ್ಷಿಯೂ ಇರಲಿಲ್ಲ. ನೇರವಾಗಿ ಅವನು ವರಕೊಟ್ಟದ್ದನ್ನೇ ನಿರಾಕರಿಸಿಬಿಡಬಹುದಾಗಿತ್ತು. ಅಥವಾ ಹನ್ನೆರಡು ವರ್ಷ ದಾಟಿ ಹೋಗಿದ್ದರಿಂದ ಪ್ರಾಮಿಸ್ಸಿಗೆ ಲಿಮಿಟೇಶನ್

# ಈಗ!

# ಕೇವಲ 12 ದಿನಗಳಲ್ಲಿ ಅಧಿಕ ಬಿಳುಪಾದ ಹಲ್ಲುಗಳು!

## ಪೆಪ್ಸೊಡೆಂಟ್‌ನಲ್ಲಿರುವ ಹೊಸ, ಪ್ರಭಾವಶಾಲಿ ಫಾರ್ಮ್ಯುಲಾ ಕೇವಲ 12 ದಿನಗಳಲ್ಲಿ ಹಲ್ಲುಗಳಿಗೆ ಅಧಿಕ ಬಿಳುಪನ್ನೂ ಆರೋಗ್ಯವನ್ನೂ ನೀಡುತ್ತದೆ




ಇತ್ತೀಚೆಗೆ ಪೆಪ್ಸೊಡೆಂಟ್ ಇನ್ನಷ್ಟು ಉತ್ತಮಗೊಳಿಸಲ್ಪಟ್ಟಿದೆ—ಹೊಸ ಫಾರ್ಮ್ಯುಲಾ, ಹೊಸ ಸ್ವಾದ, ಹೊಸ ಪ್ಯಾಕ್. ಅನೇಕ ವರ್ಷಗಳ ಸಂಶೋಧನೆಯ ಫಲಸ್ವರೂಪವಾಗಿ ವಿಕಾಸಗೊಳಿಸಲ್ಪಟ್ಟ ಹೊಸ ಫಾರ್ಮ್ಯುಲಾದ ಪ್ರಕಾರ ಪೆಪ್ಸೊಡೆಂಟ್‌ನಲ್ಲಿ ಈಗ ಇರಿಯಮ್ ಪ್ಲಸ್ ಎಲ್ ಡಿ ಸೇರಿಸಲ್ಪಟ್ಟಿದೆ. ಈ ಪ್ರಭಾವ ಶಾಲಿ ಘಟಕವು ಹಲ್ಲುಗಳ ಮೇಗಿನ ಮಬ್ಬಾದ ಪರೆಯನ್ನು ತೆಗೆದುಬಿಡುತ್ತದೆ ಮತ್ತು ಅವುಗಳಿಗೆ ಉಜ್ವಲವಾದ, ಸ್ವಾಭಾವಿಕ-ಹೊಳಪನ್ನು ನೀಡುತ್ತದೆ. ಈ ಪ್ರಭಾವಶಾಲಿ ಘಟಕವು ಹಾನಿಕರ ಕೀಟಾಣುಗಳನ್ನೊಳಗೊಂಡ ಆಹಾರ-ಕಣಗಳನ್ನು ಹಲ್ಲುಗಳ ಎಡೆಯಿಂದ ಹೋಗಲಾಡಿಸಿ ದಂತ ಕ್ಷಯವನ್ನೂ ಎದುರಿಸುತ್ತದೆ. ಧಾರಾಳವಾಗಿ ಉಂಟಾಗುವ ಶಕ್ತಿಶಾಲಿಯಾದ ನೊರೆ ಹಲ್ಲುಗಳ ಸಂದುಸಂದುಗಳಿಗೂ ವ್ಯಾಪಿಸಿ ಸಂಪೂರ್ಣವಾಗಿ ಸ್ವಚ್ಛಗೊಳಿಸುತ್ತದೆ. ಮೊದಲಿಗಿಂತ ಅಧಿಕವಾಗಿರುವ ಮಿಂಟ್‌ನ ಸ್ವಾದವನ್ನು ನೀವು ಬಹಳ ಮೆಚ್ಚುವಿರಿ. ಇಂದೇ ಹೊಸ ಪೆಪ್ಸೊಡೆಂಟ್ ಟೂಥ್‌ಪೇಸ್ಟನ್ನು ಕೊಳ್ಳಿರಿ. ಅದು 12 ದಿನಗಳಲ್ಲಿಯೇ ತನ್ನ ಪ್ರಭಾವವನ್ನು ತೋರಿಸುವುದು.



| ಹೊಸ ಫಾರ್ಮ್ಯುಲಾ | ಹೊಸ ಸ್ವಾದ | |
|---|---|---|

ಹಿಂದುಸ್ಥಾನ್ ಲೀವರ್ ಲಿಮಿಟೆಡ್ ಅವರ ಉತ್ಕೃಷ್ಟ ತಯಾರಿಕೆ.
ರಿಜಿಸ್ಟರ್ಡ್ ಯೂಸರ್ಸ್

HTA-HDL 1072

ಬಾರ್ ಆಗಿಹೋಯಿತು ಎಂದು ಸಾಧಿಸಬಹುದಾಗಿತ್ತು. ಅಥವಾ ರಾಮನ ಪಟ್ಟಾಭಿಷೇಕದ ಡಿಸೀಜನನ್ನು ಆಗಲೇ ರಾಜ್ಯಸಭಾಸದರು ಕೈಕೊಂಡು ಬಿಟ್ಟಿರುವುದರಿಂದಲೂ ಪಟ್ಟಾಭಿ-ಷೇಕದ ತಯಾರಿಗಳು ಆಗಲೇ ತೀರ ಮುಂದು ವರಿದು ಬಿಟ್ಟಿರುವುದರಿಂದಲೂ ಈಗ ತನ್ನ ವರವನ್ನು ಪಾಲಿಸುವುದಕ್ಕೆ ಟೂ-ಲೇಟ್ ಆಗಿದೆಯೆಂದು ಸಾಧಿಸಬಹುದಾಗಿತ್ತು. ಅದೂ ಅಲ್ಲದಿದ್ದರೆ ಆ ಪ್ರಾಮಿಸ್ಸುಗಳನ್ನು ಕೊಟ್ಟಾಗ ತನ್ನ ಬುದ್ಧಿ ಸ್ವಾಧೀನದಲ್ಲಿ ಇದಿಲ್ಲವೆಂದೂ (ಇದು ಶತಸತ್ಯ) ಆದ್ದರಿಂದ ಅದು ತನಗೆ ಬಂಧಕವಲ್ಲವೆಂದೂ ಅಥವಾ ತನ್ನ ಪ್ರಾಮಿಸ್ಸುಗಳು ಪರ್ಸನಲ್ ಆಗಿದ್ದು ರಾಜ್ಯಕ್ಕೆ ಸಂಬಂಧಿಸಿದ ವಿಷಯಗಳಲ್ಲಿ ಅವುಗಳನ್ನು ಬಜಾಯಿಸುವುದಕ್ಕೆ ಕೈಕೇಯಿಗೆ ಅಧಿಕಾರವಿಲ್ಲವೆಂದೂ ಹೇಳಬಹುದಾ-ಗಿತ್ತು. ತೊಂದರೆಯೆಂದರೆ ತ್ರೇತಾಯುಗದಲ್ಲಿ ವಕೀಲರಿದ್ದಿಲ್ಲ.

"ಸತ್ಯಮೇವ ಜಯತೇ" ಎನ್ನುವ ಋಷಿವಾಕ್ಯವನ್ನು ನಾವು ಒಂದೆರಡು ಚಮಚೆ ಮಸಾಲೆ ಸೇರಿಸಿಯೇ ನುಂಗುವುದೊಳಿತೆಂದು ನನಗೆ ತೋರುತ್ತದೆ. ಇತಿಹಾಸದಲ್ಲಿ ಮಾತ್ರ ಏಕೆ, ಪುರಾಣಗಳಲ್ಲಿಯೂ ಸತ್ಯವಂತರೇ ಗೆದ್ದರೆಂಬುದಕ್ಕೆ ನಿಖರವಾದ ಪ್ರಮಾಣಗಳು ಯಾವುವೂ ಸಿಗುವುದಿಲ್ಲ. ಬದಲಿಗೆ ಗೆದ್ದವರೇ ಸತ್ಯವಂತರೆನಿಸಿದರು ಎಂದು ಸಂದೇಹಪಡುವುದಕ್ಕೆ ಸಾಕಷ್ಟು ಆಧಾರಗಳುಂಟು. "ಸತ್ಯವಂತರಿಗಿದು ಕಾಲವಲ್ಲ" ಅಂತ ದಾಸರು ಹಾಡಿ ನಾಲ್ಕು ಶತಮಾನಗಳು ದಾಟಿದವು. ಅವರಿಗಿಂತ ನಾಲ್ಕು ನೂರು ಶತಮಾನಗಳ ಹಿಂದಿನವರೂ ಇದೇ ಹಾಡನ್ನು ಆಗಿನ ಭಾಷೆಯಲ್ಲಿ ಹಾಡುತ್ತಿದ್ದರೆಂದು ನನಗೆ ದೃಢವಾದ ನಂಬಿಕೆ ಇದೆ. ದಶರಥನಿಂದ ಹಿಡಿದು ಮಹಾತ್ಮಾ ಗಾಂಧಿಯವರ ವರೆಗೆ ಸತ್ಯ ಹೇಳಿದವರೆಲ್ಲರೂ ಸತ್ತೆ ಅಮರರಾದರು.

ಹೀಗೆಲ್ಲಾ ಹೇಳಿದೆನೆಂಬುದರಿಂದ ನಾನು ಸತ್ಯದ್ವೇಷಿಯೆಂದು ಯಾರೂ ತಿಳಿದುಕೊಳ್ಳಬಾರದು. ಸುಳ್ಳಿಗೊಂದು ಕಾಲವಿದ್ದಂತೆ ಸತ್ಯಕ್ಕೂ ಒಂದು ಕಾಲವಿದೆ— ಎಂದಷ್ಟೇ ನಾನು ಹೇಳುವುದು. ನಿಮ್ಮ ನಲೆ ಒಂದು ಹೊಸ ಸೀರೆ ತರಬೇಕೆಂದು ಅದರ ಬಣ್ಣ, ಅಂಚು, ಸೆರಗುಗಳ ಸ್ಪೆಸಿಫಿಕೇಷನ್ಸ್ ಎಲ್ಲಾ ಕೊಟ್ಟು ಕಳಿಸಿದ್ದಾಳೆ. ನೀವು ತಂದಿರುವುದಿಲ್ಲ. ಕಾರಣದ ವಿಚಾರಣೆ ಆಗುತ್ತದೆ ಮರೆತುಹೋಯಿತು ಎಂಬ ಅಪ್ಪಟ ಸತ್ಯವನ್ನು ಹೇಳಿದಿರೋ ಕೆಟ್ಟಿರಿ. ನಿಮಗೆ ಕಡವಾಗಿ ಸೀರೆಗಳನ್ನು ಕೊಡುವ ಅಂಗಡಿಯವನ ಅಜ್ಜ ಸತ್ತದ್ದರಿಂದ ಅಂಗಡಿ ಮುಚ್ಚಿತ್ತೆಂದಾಗಲಿ, ಆ ಸ್ಪೆಸಿಫಿಕೇಷನ್ಸ್ ಉಳ್ಳ ಸೀರೆ ಸಿಗಲಿಲ್ಲವೆಂದಾಗಲಿ ಸುಳ್ಳು ಹೇಳಿರಿ. ಈ ಸುಳ್ಳನ್ನು ನಿಮ್ಮ ಮನದನ್ನೆ ಕಂಡುಹಿಡಿದರೂ ಅಂಥಾ ಅಪರಾಧವಾಗದು. ಅವಳ ಅಪ್ಪಣೆಯನ್ನು ಮರೆತು ಬಿಟ್ಟದ್ದೇನೆಂದು ಸತ್ಯ ಹೇಳುವುದರಲ್ಲಿ ಅಡಕವಾದ ಇನ್‌ಸಲ್ಟಿಗಿಂತ ಈ ಸುಳ್ಳೇ ಸಹ್ಯವಾಗುತ್ತದೆ ಅವಳಿಗೆ. ಸುಳ್ಳು ಹೇಳಿದರೆ ನೀವಿನ್ನೂ ಅವಳಿಗೆ ಹೆದರಿಕೊಳ್ಳುತ್ತಿದ್ದೀರಿ ಎಂಬ ಸಮಾಧಾನವಾದರೂ ಅವಳಿಗಿರುತ್ತದೆ.

ಹಾಗಾದರೆ ನೀವು ಬೆಳಗಿನಿಂದ ಸಂಜೇ ವರೆಗೆ ಸುಳ್ಳೇ ಹೇಳುತ್ತ ತಿರುಗುತ್ತೀರಾ ಎಂದು ಕೇಳಿದರೆ ಇಲ್ಲ ಎಂದು (ಸತ್ಯವಾಗಿಯೂ) ಹೇಳುತ್ತೇನೆ. ಜೀವನದ ಹೆಚ್ಚಿನ ಸಂದರ್ಭಗಳಲ್ಲಿ ಸತ್ಯವನ್ನೇ ಹೇಳುವ ಪರಿಪಾಠವನ್ನಿಟ್ಟುಕೊಂಡಿದ್ದೇನೆ. ಪ್ರತಿಯೊಂದಕ್ಕೂ ಒಂದು ಸುಳ್ಳನ್ನು ಸೃಷ್ಟಿಸುವ ಬೋದರೇಷನ್ ತೆಗೆದುಕೊಳ್ಳುವುದಕ್ಕೆ ನಾನು ಸಿದ್ಧನಿಲ್ಲ.

*



# ನೂತನ!

## ಆಶ್ಚರ್ಯದಾಯಕ ಪರಿಣಾಮಕಾರಿ

## ಸಿಲಿಕೋನ್

## ನಿಮ್ಮ ತ್ವಚೆಗೆ

## ಬೇಕಾದ ರಕ್ಷಣೆಯನ್ನು ನೀಡುವುದು



ಬೂಟ್ಸ್
ಕೆಲಮೂಯಿನ್
ವಿದ್ ಸಿಲಿಕೋನ್
ಮೊದಲೆಂದೂ
ಇರದಷ್ಟು
ಸುಂದರತೆಯನ್ನು
ತರುವುದು




ಇದೀಗ ಒಂದು ನೂತನ ಹಾಗೂ ವೈಶಿಷ್ಟ್ಯಪೂರ್ಣ ಸೌಂದರ್ಯದ ಸೂತ್ರ! ದೇಶವಿದೇಶಗಳಲ್ಲಿ ಹೆಸರುವಾಸಿಯಾಗಿರುವ ಸಿಲಿಕೋನ್ ದೀರ್ಘ ಪರಿಣಾಮಕಾರಿಯಾದುದರಿಂದ ಸೌಮ್ಯ ಸುವಾಸಿತ ಬೂಟ್ಸ್ ಕೆಲಮಾಯಿನ್ ವಿದ್ ಸಿಲಿಕೋನ್ ಒಂದು ಶ್ರೇಷ್ಠ ಪೌಡರ್— ಆಧಾರವಾಗಿ ಪರಿಗಣಿಸಲ್ಪಡುತ್ತದೆ. ಸಿಲಿಕೋನ್ ಕಣ್ಣಿಗೆ ಕಾಣಿಸದಷ್ಟು ತೆಳ್ಳಗಿನ ಪರೆಯಂತೆ ಪಸರಿಸಿ ಬಿಸಿಲು ಮಳೆ ಮತ್ತು ಒಣಗಾಳಿಯಿಂದ ರಕ್ಷಿಸುತ್ತದಾದರೆ ಕೆಲಮಾಯಿನ್ ನಿಮ್ಮ ತ್ವಚೆಯ ವಾಸ್ತವಿಕ ಕಾಂತಿಯನ್ನು ಅಶುಭ್ರಗೊಳಿಸುವ ಕೊಳಕು. ಮೊಡವೆಗಳು ಮತ್ತು ಇತರ ಕಲೆಗಳನ್ನು ನಿವಾರಿಸುತ್ತದೆ.

ಇಗೋ ಇಲ್ಲಿದೆ— ಬೂಟ್ಸ್ ಕೆಲಮಾಯಿನ್ ವಿದ್ ಸಿಲಿಕೋನ್ ನಿಮ್ಮ ಮುಖಾರವಿಂದಕ್ಕೆ ನುಣುಪಾದ ರೇಶ್ಮೆಯಂತಹ ಮೃದುತ್ವವನ್ನು ತರುತ್ತದೆ.

**ಬೂಟ್ಸ್ ಕೆಲಮಾಯಿನ್ ವಿದ್ ಸಿಲಿಕೋನ್**

ತಾನು ನೀಡುವ ಸುಂದರತೆಯನ್ನು ತಾನೇ ರಕ್ಷಿಸುತ್ತದೆ.

CU-75

# ಪುರುಷರ ಬಯಕೆಯ ಪೂರೈಕೆಗೆ

# ಒಕಾಸಾ






ಒಕಾಸಾ ಪುರುಷತ್ವವನ್ನು ತೇಜೋಭಿವೃದ್ಧಿಗೊಳಿಸಿ ಸುಖಮಯ ಸಂಸಾರ ನಿರ್ವಹಣೆಗೆ ಶಕ್ತಿದಾಯಕ ಅಕಾಲ ವೃದ್ಧಾಪ್ಯವನ್ನು ತಡೆಗಟ್ಟಿ ಶಾರೀರಿಕ ದೌರ್ಬಲ್ಯತೆಯನ್ನು ನಿರ್ಮೂಲಗೊಳಿಸಿ ಆರೋಗ್ಯಾಭಿವೃದ್ಧಿಯನ್ನು ಮಾಡುತ್ತದೆ. ವಿಶಿಷ್ಟ ರೀತಿಯಲ್ಲಿ ಯೌವನದ ಹುರುಪು ಹಾಗೂ ನವಚೈತನ್ಯವನ್ನು ತಂದೊಡ್ಡುವ ಆಧುನಿಕ ಟೋನಿಕ್—ಮಾತ್ರೆಗಳನ್ನು ಪ್ರಪಂಚದ ಕೋಟಿಗಟ್ಟಲೆ ಜನರು ಈಗಾಗಲೇ ಉಪಯೋಗಿಸುತ್ತಿದ್ದಾರೆ. ಒಕಾಸಾ ಸ್ತ್ರೀಯರಿಗೂ ಪುರುಷರಿಗೂ ಬೇರೆಬೇರೆಯಾಗಿ ಸಿಕ್ಕುತ್ತದೆ.

ಒಕಾಸಾ-ಹಾರ್ಮೋ ಫಾರ್ಮಾ ಲಿ.
ಲಂಡನ್-ಬರ್ಲಿನ್‌ರವರ ತಯಾರಿಕೆ

ಎಲ್ಲಾ ಮುಖ್ಯ ಕೆಮಿಸ್ಟರುಗಳಿಂದ ಅಥವಾ ನೇರವಾಗಿ ಈ ಕೆಳಗಿನ ವಿಳಾಸದಿಂದ ಪಡೆಯಬಹುದು.

**OKASA CO. PVT. LTD.** P. O. BOX 396, BOMBAY-1.

CU-349

